॥ श्रीः ॥

ಶ್ರೀ ವಾಯುಪುರಾಣಾಂತರ್ಗತ

# ಶ್ರೀ ಮಾಘ ಮಾಸ ಮಾಹಾತ್ಮ್ಯ

(ಭಾಗ - ೨)

**This book is published with the financial assistance of Tirumala Tirupati Devasthanams under the scheme 'Aid to publish religious books'**

ಕನ್ನಡ ಅನುವಾದ :

**ಎರೀ ಸುಬ್ಬಣ್ಣಾಚಾರ್ಯ**

ಮದರಾಸು

ಪ್ರಕಾಶಕರು :

**ಶ್ರೀ ಮಧ್ವ ಸಮಾಜ**

13, ಕುಪ್ಪಯ್ಯಚೆಟ್ಟಿ ಸ್ಟ್ರೀಟ್

ವೆಸ್ಟ್ ಮಾಂಬಳಂ, ಮದರಾಸು-33

ಶ್ರೀ ಮಾಘಮಾಸ ಮಾಹಾತ್ಮ್ಯ—ಭಾಗ ೨—ಕನ್ನಡ ಅನುವಾದ ಸಹಿತ

ಅನುವಾದಕರು : ಶ್ರೀ ಏರೀ ಸುಬ್ಬಣ್ಣಾಚಾರ್ಯ

ಪುಟಗಳು : 221 ರಿಂದ 468

**ಬೆಲೆ : ರೂ. 42**



ಮುದ್ರಕರು :

**ಪ್ರಭಾ ಮುದ್ರಣಾಲಯ**

22-A, ಡಾ|| ಡಿ. ವಿ. ಗುಂಡಪ್ಪ ರಸ್ತೆ, ಬಸವನಗುಡಿ

ಬೆಂಗಳೂರು–560 004

|| ಶ್ರೀಃ ||

# ಅನುವಾದಕನ ಬಿನ್ನಹ

ಶ್ರೀ ವಾಯುಪುರಾಣಾಂತರ್ಗತ "ಶ್ರೀ ಮಾಘಮಾಸ ಮಾಹಾತ್ಮ್ಯ" ಗ್ರಂಥದ ಕನ್ನಡ ಅನುವಾದದ ದ್ವಿತೀಯ ಭಾಗವನ್ನು ಆಸ್ತಿಕರ ಮುಂದೆ ಇಡುತ್ತಿದ್ದೇನೆ. ಈ ಅನುವಾದದಲ್ಲಿ ಇರಬಹುದಾದ ದೋಷಗಳನ್ನು ಕ್ಷಮಿಸಿ, ಗುಣವನ್ನು ಮಾತ್ರ ಗ್ರಹಿಸಬೇಕಾಗಿ ಪ್ರಾರ್ಥಿಸುತ್ತೇನೆ. ಮೊದಲನೆ ಭಾಗಕ್ಕೆ ಕೊಟ್ಟ ರೀತಿಯಿಂದಲೇ ಈ ಭಾಗಕ್ಕೂ ಪ್ರೋತ್ಸಾಹ ನೀಡಬೇಕಾಗಿ ಬೇಡುತ್ತೇನೆ.

ಮದರಾಸು–33<br>11–6–1994

ಸಜ್ಜನ ಸೇವಕ<br>**ಏರೀ ಸುಬ್ಬಣ್ಣಾಚಾರ್ಯ**

# PUBLISHER'S NOTE

The Madhva Samāj–Mambalam is happy to publish the second and final part of 'Māghamāsa Māhātme' (in Kannada) authored by Sri A. R. Subbannachar, within a few months of the publication of Part I. The author had indicated in the preface to the first part that 'Māghamāsa Māhātme' an integral part of Vāyu Purāna is expounding the tenets of 'Hari Sarvottamatva', 'Vāyu Jeevottamatva', 'Ānanda Tāratamya' and several other related topics. An index to these references in the text would be very useful to the readers and we have been fortunate enough to provide this service, by way of a scholarly preface by Prof. Sri Vyāsanakere Prabhanjanāchārya, M.A., who needs no introduction as he is very well known to general Mādhva Public and Scholars as well by his incessant teaching and lecturing (Pātha Pravachana), scholarly editing of rare works and collection and elucidating the contents of rare works and maintaining an unique library with collections of rare manuscripts and unpublished works and research in the realm of Mādhva and Comparative Philosophy and thus doing yeoman service to Mādhva fold.

We are extremely grateful to Sri Prabhanjanāchārya for readily agreeing to favour us with this scholarly preface to our publication.

We wish to express our grateful thanks for the financial assistance rendered by Indrabai Charities and Thirumala Tirupathi Devasthanams.

We offer our reverential pranāms to Sri Sri Sripādaraja Mutt Pitādhipathi, Mulabagal for His kind words of

appreciation of our activities and as a token thereof a cash presentation.

Our thanks are due to Sri A. R. Subbannachar for getting the second part published through our Samāj, so soon after the publication of the first part.

We thank Sri D. S. Krishnachar of Prabha Printing House, Bangalore-4 for the neat and excellent printing in such a short time unmindful of the difficulties.

We are happy for the favourable response from the public to our publication of Part I and hope to receive further similar encouragement. To facilitate easy availability of the books, we have arranged distribution through several centres also, the addresses of which are given separately.

"Sri Krishnārpanamastu"

13, Kuppaiah Street
West Mambalam
Madras–600 033

**R. Srinivasa Rao**
*President, Madhva Samaj*
20–6–1994

# ಮಾಘಮಾಸ ಮಾಹಾತ್ಮ್ಯ ಭಾಗ ೧ ಮತ್ತು ಭಾಗ ೨
## ದೊರೆಯುವ ಸ್ಥಳಗಳು

(1) **ಶ್ರೀ ಮಧ್ವ ಸಮಾಜ,**
13, ಕುಪ್ಪಯ್ಯ ಸ್ಟ್ರೀಟ್, ಮದರಾಸು–33.

(2) **ವೇದಾಂತ ಬುಕ್ ಹೌಸ್,**
ಉಮಾ ಟಾಕೀಸ್ ಬಳಿ, ಚಾಮರಾಜಪೇಟೆ, ಬೆಂಗಳೂರು–18.

(3) ಗೀತಾ ಬುಕ್ ಹೌಸ್,
ಕೆ. ಆರ್. ಸರ್ಕಲ್, ಮೈಸೂರು–1.

(4) **ಶ್ರೀ ಕೃಷ್ಣ ಬುಕ್ ಡಿಪೊ,** ಧಾರವಾಡ–1.



## ಈ ಸಮಾಜದಿಂದ ಈವರೆವಿಗೆ ಪ್ರಕಟವಾಗಿರುವ ಗ್ರಂಥಗಳು

(1) ಶ್ರೀ ರಾಘವೇಂದ್ರಸ್ವಾಮಿಗಳಿಂದ ರಚಿತವಾದ
**ಶ್ರೀ ರಾಮಚಾರಿತ್ರ ಮಂಜರಿ**
**ಶ್ರೀ ಕೃಷ್ಣಚಾರಿತ್ರ ಮಂಜರಿ** } ಪ್ರತಿಗಳು ಮುಗಿದಿವೆ.

(2) ಶ್ರೀ ಬಿದರಹಳ್ಳಿ ಶ್ರೀನಿವಾಸತೀರ್ಥರಿಂದ ರಚಿತವಾದ
"**ನಾರಾಯಣ ಶಬ್ದಾರ್ಥ**" ಗ್ರಂಥದ ಕನ್ನಡ ಅನುವಾದ,
ವಿಶೇಷಾಂಶಗಳೊಂದಿಗೆ—ಪ್ರತಿಗಳು ಮುಗಿದಿವೆ.

(3) ಶ್ರೀ ರಾಘವೇಂದ್ರಯತಿಗಳಿಂದ ರಚಿತವಾದ
"**ಶ್ರೀಮನ್ಮಹಾಭಾರತ ತಾತ್ಪರ್ಯನಿರ್ಣಯ ಭಾವಸಂಗ್ರಹ**"
ಕನ್ನಡ ಅನುವಾದ ಬೆಲೆ: ರೂ. 3

(4) **ಶ್ರೀ ರಾಘವೇಂದ್ರ ಸ್ತೋತ್ರ**:—ತಮಿಳಿನಲ್ಲಿ ಪ್ರತಿಪದಾರ್ಥ, ತಾತ್ಪರ್ಯ, ವಿಶೇಷಾಂಶ ಸಹಿತ (ತಮಿಳು ಭಾಷೆ, ತಮಿಳು ಅಕ್ಷರ). ಬೆಲೆ: ರೂ. 3

(5) ಶ್ರೀ ವಾಯುಪುರಾಣಾಂತರ್ಗತ "**ಶ್ರೀ ಮಾಘಮಾಸ ಮಾಹಾತ್ಮ್ಯ**"
**ಭಾಗ ೧, ಭಾಗ ೨.** ಕನ್ನಡ ಅನುವಾದ. ವಿಶೇಷಾಂಶಗಳೊಂದಿಗೆ.
ಬೆಲೆ: ಭಾಗ ೧ ರೂ. 35. ಭಾಗ ೨ ರೂ. 42.

# ಮುನ್ನುಡಿ

ವಾಯುಪುರಾಣಾಂತರ್ಗತ ಮಾಘಮಾಸ ಮಾಹಾತ್ಮ್ಯವು ವೈಷ್ಣವರಿಗೆಲ್ಲ ಪರಮಮಾನ್ಯವಾಗಿರುವ ಒಂದು ಶಾಸ್ತ್ರಭಾಗ.

ವಾಯುಪುರಾಣವು ಹದಿನೆಂಟು ಮಹಾಪುರಾಣಗಳಲ್ಲಿ ಒಂದು. ಮತ್ತು (ಕೆಲವು ಪುರಾಣಗಳಲ್ಲಿ ವಾಯುಪುರಾಣದ ಬದಲು ಶಿವಪುರಾಣವು ಉಲ್ಲೇಖಿತವಾಗಿದೆ) ವೈದಿಕ ಸಾಹಿತ್ಯದ ಹೃದಯವನ್ನು ಅರಿಯಲು ಇತಿಹಾಸಗಳಂತೆ, ಪುರಾಣಗಳು ನೀಡುವ ಬೆಳಕು ಸಹ ಅಪಾರ. ಅದಕೆಂದೇ ಇತಿಹಾಸ ಪುರಾಣಗಳನ್ನು ಪಂಚಮ ವೇದ ಎಂಬುದಾಗಿ ಉಪನಿಷತ್ತುಗಳು ವ್ಯವಹರಿಸಿವೆ. (ಇತಿಹಾಸಪುರಾಣಃ ಪಂಚಮೋ ವೇದಾನಾಂ ವೇದಃ....ಛಾಂದೋಗ್ಯ) ಇತಿಹಾಸ ಪುರಾಣಗಳ ಸಹಾಯ ವಿಲ್ಲದೇ, ವೈದಿಕ ಸಾಹಿತ್ಯವನ್ನು ಅರ್ಥೈಸುವ ಪ್ರಯತ್ನ ಅವುಗಳಿಗೆ ಮಾಡುವ ದೊಡ್ಡ ಅಪಚಾರ ಎಂಬ ಎಚ್ಚರಿಕೆಯ ಮಾತೂ ಶಾಸ್ತ್ರಗಳಲ್ಲಿ ಬಂದಿದೆ.

**ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್ ।**
**ಬಿಭೇತ್ಯಲ್ಪಶ್ರುತಾದ್ವೇದೋ ಮಾಮಯಂ ಪ್ರಚರಿಷ್ಯತಿ ॥**

ಮಹಾಭಾರತ, ಮೂಲರಾಮಾಯಣ ಮತ್ತು ಪಂಚರಾತ್ರಗಳು ಇತಿಹಾಸ ಗಳಾದರೆ ಶ್ರೀಮದ್ಭಾಗವತಾದಿಗಳು ಪುರಾಣಗಳಾಗಿವೆ. ಇತಿಹಾಸಗಳು ವೇದ ಗಳೊಂದಿಗೆ ಸಪ್ತ ಸದಾಗಮಗಳಲ್ಲಿ ಪರಿಗಣಿತವಾಗಿವೆ. ಪುರಾಣಗಳು "ಯಚ್ಚಾನು- ಕೂಲಮೇತಸ್ಯ ತಚ್ಚ ಶಾಸ್ತ್ರಂ ಪ್ರಕೀರ್ತಿತಂ" । ಎಂಬ ಮಾತಿನಂತೆ ಅವುಗಳಿಗೆ ಅನುಸಾರಿಯಾದ ಆಕರ ಸಾಹಿತ್ಯವಾಗಿದೆ. ಪುರಾಣಗಳ ಪ್ರಾಮಾಣ್ಯ ವೇದೇತಿಹಾಸ ಗಳ ಸಮಕಕ್ಷೆಗೆ ಸೇರುವುದಿಲ್ಲವಾದರೂ ಅವುಗಳಿಗೆ ಅನುಕೂಲವಾಗಿದ್ದ ಪ್ರಸಂಗ ಗಳಲ್ಲಿ ಮಾತ್ರ ಅವುಗಳಂತೆಯೇ ಮಾನ್ಯವಾಗುತ್ತದೆ. ಈ ಎಲ್ಲ ವಿಚಾರಗಳನ್ನು ಶ್ರೀಮದಾಚಾರ್ಯರು ತಮ್ಮ ಕೃತಿಗಳಲ್ಲಿ ಸ್ಪಷ್ಟಪಡಿಸಿರುವರು.

ಪುರಾಣಸಾಹಿತ್ಯವು ಮಹಾಪುರಾಣ ಮತ್ತು ಉಪಪುರಾಣ ಎಂಬುದಾಗಿ ಎರಡು ಬಗೆ. ಶ್ರೀಮದ್ಭಾಗವತಾದಿಗಳು ಮಹಾಪುರಾಣಗಳಾದರೆ, 'ನರಸಿಂಹ' ಮೊದಲಾದವುಗಳು ಉಪಪುರಾಣಗಳಾಗಿವೆ. ಪುರಾಣಗಳಂತೆ ಉಪಪುರಾಣಗಳ ಸಂಖ್ಯೆಯು ಸಹ ಹದಿನೆಂಟು. ಪುರಾಣ ಮತ್ತು ಉಪಪುರಾಣಗಳು ಸಾತ್ವಿಕ, ರಾಜಸ ಮತ್ತು ತಾಮಸ ಎಂಬುದಾಗಿ ಮೂರು ವಿಧ. ವಿಷ್ಣುಸರ್ವೋತ್ತಮತ್ವವನ್ನು ಪ್ರತಿಪಾದಿಸುವ ಪುರಾಣಗಳು ಸಾತ್ವಿಕ; ಶಿವಸರ್ವೋತ್ತಮತ್ವವನ್ನು ಸಾರುವ ಪುರಾಣಗಳು ತಾಮಸ; ಬ್ರಹ್ಮಮೊದಲಾದವರ ಸರ್ವೋತ್ತಮತ್ವವನ್ನು ಸಾರುವ ಪುರಾಣಗಳು ರಾಜಸ.

**ಸಾತ್ವಿಕೇಷು ಪುರಾಣೇಷು ಮಾಹಾತ್ಮ್ಯಮಧಿಕಂ ಹರೇಃ ।**
**ರಾಜಸೇಷು ಚ ಮಾಹಾತ್ಮ್ಯಮಧಿಕಂ ಬ್ರಹ್ಮಣೋ ವಿದುಃ ॥**
**ತದ್ವದನ್ಯೇಷು ಮಾಹಾತ್ಮ್ಯಂ ತಾಮಸೇಷು ಶಿವಸ್ಯ ಚ ।**
**ಸಂಕೀರ್ಣೇಷು ಸರಸ್ವತ್ಯಾ ಪಿತೄಣಾಂ ಚ ನಿಗದ್ಯತೇ ॥**

—ಮತ್ಸ್ಯಪುರಾಣ ೫೩/೬೮–೬೯

ಮತ್ಸ್ಯ, ಕೂರ್ಮ, ಲಿಂಗ, ಶಿವ, ಸ್ಕಾಂದ ಮತ್ತು ಅಗ್ನಿ ಪುರಾಣಗಳು ತಾಮಸ ; ವಿಷ್ಣು, ನಾರದ, ಶ್ರೀಮದ್ಭಾಗವತ, ಗರುಡ, ಪದ್ಮ ಮತ್ತು ವರಾಹ ಪುರಾಣಗಳು ಸಾತ್ವಿಕ; ಬ್ರಹ್ಮಾಂಡ, ಬ್ರಹ್ಮವೈವರ್ತ, ಮಾರ್ಕಂಡೇಯ, ಭವಿಷ್ಯ, ವಾಮನ ಮತ್ತು ಬ್ರಹ್ಮಪುರಾಣಗಳು ರಾಜಸ ಎಂಬುದಾಗಿ ಪದ್ಮಪುರಾಣವು ಉಲ್ಲೇಖಿಸಿದೆ.

**ಮಾತ್ಸ್ಯಂ ಕೌರ್ಮಂ ತಥಾ ಲೈಂಗಂ ಶೈವಂ ಸ್ಕಾಂದಂ ತಥೈವ ಚ ।**
**ಆಗ್ನೇಯಂ ಚ ಷಡೇತಾನಿ ತಾಮಸಾನಿ ನಿಬೋಧ ಮೇ ॥**
**ವೈಷ್ಣವಂ ನಾರದೀಯಂ ಚ ತಥಾ ಭಾಗವತಂ ಶುಭಮ್ ।**
**ಗಾರುಡಂ ಚ ತಥಾ ಪಾದ್ಮಂ ವರಾಹಂ ಶುಭದರ್ಶನೇ ।**
**ಸಾತ್ವಿಕಾನಿ ಪುರಾಣಾನಿ ವಿಜ್ಞೇಯಾನಿ ಶುಭಾನಿ ವೈ ।**
**ಬ್ರಹ್ಮಾಂಡಂ ಬ್ರಹ್ಮವೈವರ್ತಂ ಮಾರ್ಕಂಡೇಯಂ ತಥೈವ ಚ ।**
**ಭವಿಷ್ಯಂ ವಾಮನಂ ಬ್ರಾಹ್ಮಂ ರಾಜಸಾನಿ ನಿಬೋಧ ಮೇ ।**

—ಪದ್ಮಪುರಾಣ_ಉತ್ತರಖಂಡ (೨೬೩/೮೧_೮೪)

**ಅಷ್ಟಾದಶಪುರಾಣೇಷು ದಶಭಿರ್ಗೀಯತೇ ಶಿವಃ ।**
**ಚತುರ್ಭಿರ್ಭಗವಾನ್ ಬ್ರಹ್ಮ ದ್ವಾಭ್ಯಾಂ ದೇವೀ ತಥಾ ಹರಿಃ ।**

—ಎಂಬ ಮಾತೂ ಸ್ಕಂದ ಪುರಾಣದಲ್ಲುಂಟು (ಕೇದಾರ ಖಂಡ)

ಶಿವಪುರಾಣದ ಬದಲು ವಾಯುಪುರಾಣವನ್ನು ಗ್ರಹಿಸಿದಲ್ಲಿ, ಅದು ತಾಮಸ ಪುರಾಣಗಳಲ್ಲಿ ಸೇರುತ್ತದೆ.

ಹದಿನೆಂಟು ಮಹಾಪುರಾಣಗಳಲ್ಲಿ ಹೆಸರುಗಳನ್ನು ಸಂಗ್ರಹವಾಗಿ ನೀಡುವ ದೇವೀಭಾಗವತದ ಶ್ಲೋಕ ಹೀಗಿದೆ.

**ಮ ದ್ವಯಂ ಭ ದ್ವಯಂ ಚೈವ ಬ್ರ ತ್ರಯಂ ವ ಚತುಷ್ಟಯಮ್ ।**
**ನಾಲಿಂ ಪಾಗ್ನಿ ಪುರಾಣಾನಿ ಕೂ ಸ್ಕಾಂ ಗರುಡಮೇವ ಚ ॥ (೧/೩)**

ಆದರೆ, ಎಲ್ಲ ಪುರಾಣಗಳಲ್ಲೂ ಸಾತ್ವಿಕಾದಿ ಮೂರು ಅಂಶಗಳೂ ಉಂಟು. ಸಾತ್ವಿಕಾಕಾಂಶ ಪ್ರಚುರ, ರಾಜಸಾಂಶ ಪ್ರಚುರ–ಇತ್ಯಾದಿ ಅರ್ಥದಲ್ಲಿ ಸಾತ್ವಿಕಾದಿ ವಿಭಾಗವನ್ನು ಅರ್ಥಮಾಡಿಕೊಳ್ಳಬೇಕು. ಅದರಂತೆ ವಾಯುಪುರಾಣವು ತಾಮಸ ಪುರಾಣವಾದರೂ ಅದರಲ್ಲೂ ಸಾತ್ವಿಕಾಂಶ ಉಂಟು ಎಂದು ಸಿದ್ಧವಾಗುತ್ತದೆ. ಅದರಂತೆ ಮಾಘಮಾಸ ಮಾಹಾತ್ಮ್ಯದ ಭಾಗವು ಸ್ಫುಟವಾಗಿ 'ವಿಷ್ಣುಸರ್ವೋತ್ತಮ ತ್ವಾದಿ ಪ್ರಮೇಯ'ಗಳನ್ನು ನಿರೂಪಿಸುವುದರಿಂದ ಇದು ಪರಮ ಸಾತ್ವಿಕ ಎಂಬಲ್ಲಿ ಯಾವ ಸಂಶಯಕ್ಕೂ ಅವಕಾಶವಿರುವುದಿಲ್ಲ.

ಪುರಾಣಗಳೆಲ್ಲ ಸಾರುವುದು ಒಟ್ಟಾಗಿ ವಿಷ್ಣುಸರ್ವೋತ್ತಮತ್ವವನ್ನೇ. ಅವುಗಳಲ್ಲಿ ಪರಸ್ಪರ ವಿರೋಧ ಮೊದಲಾದವುಗಳಿಗೆ ಅವಕಾಶವೇ ಇಲ್ಲ. ಶೈವಾದಿ ಪುರಾಣ ಗಳಲ್ಲಿ ಕಂಡುಬರುವ ಶಿವಾದಿಗಳ ಸರ್ವೋತ್ತಮತ್ವವು ದರ್ಶನ ಭಾಷಾ ಪ್ರಾಚುರ್ಯ ದಿಂದಾಗಿ ಬಂದದ್ದು. ಅದೆಲ್ಲ ಪೂರ್ವಪಕ್ಷವೇ ಹೊರತು ಸಿದ್ಧಾಂತವಲ್ಲ, ವಿಷ್ಣು ಸರ್ವೋತ್ತಮತ್ವವೇ ಸಿದ್ಧಾಂತಸಾರ ; ಅದೂ ಆ ಪುರಾಣಗಳಲ್ಲೇ ಬಂದಿದೆ, ಎಂಬ ವಿಶೇಷ ವಿಚಾರವನ್ನು ತ್ರಿವಿಕ್ರಮಪಂಡಿತಾಚಾರ್ಯರು ತತ್ವಪ್ರದೀಪದಲ್ಲಿ ನಿರೂಪಿ ಸಿರುವರು.

**"ನ ಪುರಾಣಾನಾಂ ಸ್ವತೋಽನ್ಯೋನಂ ವಾ ವಿರೋಧಃ । ಶೈವಾದಿ ಪುರಾಣೇಷು ದರ್ಶನಭಾಷಾ ಪ್ರಚುರ್ಯಾದ್ವೇದಾನನುಸಾರಿತ್ವೇಮಿವ ಪ್ರತೀಯತೇ । ನತು ತದಸ್ತಿ। ತತ್ರಾಪಿ ವಿಷ್ಣೋಃ ಸರ್ವೋತ್ತಮತ್ವಮೇವ ಸಿದ್ಧಾಂತಸಾರಃ ॥ ತತ್ರ ತತ್ರ ತದುಕ್ತೇಃ । ಪೂರ್ವಪಕ್ಷಾಧಿಕ್ಯಂ ದುರ್ಜನ ಮೋಹನಾರ್ಥಮಿತಿ ದರ್ಶನರಹಸ್ಯಂ ॥ (೧/೧/೧)**

ಈ ದೃಷ್ಟಿಯಲ್ಲೂ ಪ್ರಕೃತ ವಾಯುಪುರಾಣಾಂತರ್ಗತ ಮಾಘಮಾಸ ಮಾಹಾತ್ಮ್ಯದ ಭಾಗವು ಸಿದ್ಧಾಂತಸಾರವಾಗಿ ಗ್ರಾಹ್ಯವಾಗಿದೆ.

ಸಾತ್ವಿಕ ಪುರಾಣಗಳಲ್ಲಿ ೬೦ ಸಾವಿರ ಶ್ಲೋಕಗಳ ಪದ್ಮಪುರಾಣ ಗಾತ್ರದಲ್ಲಿ ದೊಡ್ಡದಾದರೆ, ತಾಮಸ ಪುರಾಣಗಳಲ್ಲಿ ೮೧ ಸಾವಿರ ಶ್ಲೋಕಗಳ ಸ್ಕಾಂದ ಪುರಾಣ ತುಂಬ ದೊಡ್ಡದು. ಶ್ರೀಮದ್ಭಾಗವತವು ಸಾತ್ವಿಕ ಪುರಾಣಗಳಲ್ಲೂ ಪರಮ ಸಾತ್ವಿಕ ವಾಗಿದ್ದು 'ಪುರಾಣರಾಜ'ವೆನಿಸಿದೆ. ಶ್ರೀಮದಾಚಾರ್ಯರು ಹದಿನೆಂಟು ಪುರಾಣ ಗಳಲ್ಲಿ ಅದಕ್ಕೆ ಮಾತ್ರ ತಾತ್ಪರ್ಯನಿರ್ಣಯವನ್ನು ರಚಿಸಿರುವುದು ಅದರ ಮಹತ್ವಕ್ಕೆ ಸಾಕ್ಷಿ.

ಪುರಾಣ ಪ್ರಪಂಚ ತುಂಬಾ ಗಹನವಾದುದು. ಅದರಲ್ಲಿ ಸಮಾಧಿ, ದರ್ಶನ ಮತ್ತು ಗುಹ್ಯ ಎಂಬ ಮೂರು ಭಾಷೆಗಳು ; ವೈದರ್ಭೀ, ಗೌಡೀ, ಪಾಂಚಾಲೀ ಮೊದಲಾಗಿ ನೂರು ಶೈಲಿಗಳು ; ವ್ಯತ್ಯಾಸ, ಪ್ರಾತಿಲೋಮ್ಯ, ಗೋಮೂತ್ರೀ,

ಪ್ರಘಸ, ಉಕ್ಷಣ, ಸುಧುರ ಮತ್ತು ಸಾಧು ಎಂಬ ಏಳು ನಿರೂಪಣ ಪ್ರಭೇದಗಳು ಅಡಕವಾಗಿವೆ. ಅವೆಲ್ಲವುಗಳ ಪರಿಜ್ಞಾನವಿಲ್ಲದೆ ಅದನ್ನು ಅರ್ಥೈಸುವ ಪ್ರಯತ್ನ ಮೋಕ್ಷದ ಹಾದಿಯಾಗುವ ಬದಲು ನರಕದ ಹಾದಿಯಾಗುವುದು ನಿಶ್ಚಿತ ಎಂಬ ಎಚ್ಚರಿಕೆಯೂ ಸಹ ಅವುಗಳಲ್ಲೇ ಬಂದಿದೆ.

**ಭಾಷಾತ್ರಯಂ ನ ಜಾನಾತಿ ರೀತೀನಾಂ ಶತಮೇವ ಚ ।**
**ಪುರಾಣಾರ್ಥಂ ವದನ್ ಯಾತಿ ನರಕಂ ನಾತ್ರ ಸಂಶಯಃ ॥**

—ತತ್ತ್ವಪ್ರದೀಪದಲ್ಲಿ ಉದ್ಧೃತವಾಗಿರುವ ಬ್ರಹ್ಮಪುರಾಣ ವಚನ (೧/೧/೧)

ಇವುಗಳೊಂದಿಗೆ ಉಪಕ್ರಮ, ಉಪಸಂಹಾರಾದಿ ತಾತ್ಪರ್ಯ ನಿರ್ಣಾಯಕ ಲಿಂಗಗಳ ಪರಿಜ್ಞಾನವು ಅವುಗಳ ಅರ್ಥನಿರ್ಣಯಕ್ಕೆ ಅತ್ಯವಶ್ಯ. ಬ್ರಹ್ಮಸೂತ್ರಗಳ ಸಹಾಯವಿಲ್ಲದೆ ಪುರಾಣ ಸಾಹಿತ್ಯಕ್ಕೆ ಕೈಹಾಕುವುದಂತು ಕತ್ತಲೆಯಲ್ಲಿ ನಡೆಯುವ ಕಾಡಿನ ಪ್ರಯಾಣದಂತೆ ಮಾರಕವೇ ಸರಿ. ಹೀಗೆ ಪುರಾಣಪ್ರಪಂಚ ಇಷ್ಟು ಗಹನವಾದ್ದರಿಂದಲೇ ಒಬ್ಬನು ಸರಿಯಾಗಿ ವೇದೋಪನಿಷತ್‌ಗಳನ್ನು ಅರಿತಿರಬಹುದು, ವೇದಾಂಗಗಳನ್ನು ತಿಳಿದಿರಬಹುದು, ಆದರೆ ಪುರಾಣವನ್ನು ತಿಳಿಯದಿದ್ದಲ್ಲಿ ಅವನು ಪಂಡಿತನೆನ್ನಿಸಲಾರ, ಎಂದು ಶಾಸ್ತ್ರಗಳು ಘೋಷಿಸಿವೆ !

**ಯದಿ ವಿದ್ಯಾಚ್ಚತುರ್ವೇದಾನ್ ಸಾಂಗೋಪನಿಷದಾನ್ ದ್ವಿಜಃ ।**
**ನ ಚೇತ್ ಪುರಾಣಂ ಸಂವಿದ್ಯಾನ್ನೈವ ಸ ಸ್ಯಾದ್ವಿಚಕ್ಷಣಃ ॥**

ಹೀಗೆ ಅಗಮ್ಯವಾಗಬಹುದಾಗಿದ್ದ ಪುರಾಣ ಪ್ರಪಂಚವನ್ನು ಸುಗಮ್ಯವಾಗಿಸಿದ ಶ್ರೇಯಸ್ಸು ಶ್ರೀಮನ್ಮಧ್ವಾಚಾರ್ಯರದು. ಅವರ ಶ್ರೀಮದ್ಭಾಗವತ ತಾತ್ಪರ್ಯ ನಿರ್ಣಯವು ಭಾಗವತ ಪುರಾಣದ ವ್ಯಾಖ್ಯೆಯಾಗಿದ್ದರೂ ಒಟ್ಟಾಗಿ ಅದು ಪುರಾಣ ಪ್ರಪಂಚಕ್ಕೇ ಬರೆದ ಭಾಷ್ಯವಾಗಿದೆ :

**ಪುರಾಣಸ್ಥಾನಪಾಂಥಾನಾಮಭಾಷಾತ್ರಯವೇದಿನಾಮ್ ।**
**ಭವತಾ ಸುಸಖಾ ಚಕ್ರೇ ಶ್ರೀಭಾಗವತನಿರ್ಣಯಃ ॥**

—ಸುಮಧ್ವವಿಜಯ

ಅದರೊಂದಿಗೆ ಅವರ ಮಹಾಭಾರತ ತಾತ್ಪರ್ಯನಿರ್ಣಯವನ್ನು ಅಧ್ಯಯನ ಮಾಡಿದವರಿಗೆ ಯಾವುದೇ ಪುರಾಣವು ಸಮಸ್ಯೆಯಾಗಬೇಕಿಲ್ಲ. 'ಪೂರ್ಣಪ್ರಜ್ಞ' ರೆಂಬ ಅವರ ಹಿರಿಮೆಯನ್ನು ಇದರಿಂದಲೂ ಅರ್ಥಮಾಡಿಕೊಳ್ಳಬಹುದು.

ಪುರಾಣಸಾಹಿತ್ಯವೆಲ್ಲ ಶ್ರೀವೇದವ್ಯಾಸರ ರಚನೆ 'ಅಷ್ಟಾದಶ ಪುರಾಣಾನಾಂ ಕರ್ತಾ ಸತ್ಯವತೀಸುತಃ |' ಅವರು ಸ್ವತಃ ಭಗವಂತನಾದ ಮಹಾವಿಷ್ಣುವಿನ ಸಾಕ್ಷಾದವತಾರ.

**ಕೃಷ್ಣದ್ವೈಪಾಯನಂ ವ್ಯಾಸಂ ವಿದ್ಧಿ ನಾರಾಯಣಂ ಪ್ರಭುಮ್ ।**
**ಕೋ ಹ್ಯನ್ಯಃ ಪುಂಡರೀಕಾಕ್ಷಾದ್ ಮಹಾಭಾರತಕೃದ್ಭವೇತ್ ॥**

ಪದ್ಮಪುರಾಣದ ಉತ್ತರಖಂಡ, ಗರುಡಪುರಾಣದ ಬ್ರಹ್ಮಕಾಂಡ, ವರಾಹ ಪುರಾಣದ ಚಾತುರ್ಮಾಸ್ಯ ಮಾಹಾತ್ಮ್ಯ, ಸ್ಕಂದಪುರಾಣದ ವೈಶಾಖಮಾಸ ಮಾಹಾತ್ಮ್ಯ, ಭವಿಷ್ಯೋತ್ತರಪುರಾಣದ ವೇಂಕಟೇಶಮಾಹಾತ್ಮ್ಯ ಮೊದಲಾದ ಭಾಗಗಳು ವೈಷ್ಣವ ಸಿದ್ಧಾಂತದ ಪ್ರಧಾನ ತತ್ವಗಳನ್ನು ಹೇರಳವಾಗಿ ನಿರೂಪಿಸುವ ವಿಶಿಷ್ಟ ಭಾಗಗಳಾಗಿ ಮಾನ್ಯವಾಗಿವೆ. ಇದರಂತೆ ಮಾನ್ಯವಾಗಿರುವ ಮತ್ತೊಂದು ಅಪೂರ್ವಭಾಗ–ಪ್ರಕೃತ ವಾಯುಪುರಾಣಾಂತರ್ಗತ ಮಾಘಮಾಸ ಮಾಹಾತ್ಮ್ಯ.

ವರ್ಷದ ಹನ್ನೆರೆಡು ಮಾಸಗಳೂ ಒಂದಲ್ಲ ಒಂದು ರೀತಿಯಾಗಿ ವಿಶೇಷ ಮಾಹಾತ್ಮ್ಯದಿಂದ ಕೂಡಿವೆ. ಅದಕ್ಕೆ ಅನೇಕ ಪುರಾಣಗಳಲ್ಲಿ ಬರುವ ದ್ವಾದಶ ಮಾಸಗಳ ಮಾಹಾತ್ಮ್ಯವೇ ಸಾಕ್ಷಿ. ಅಧಿಕಮಾಸವು ಸಹ ಅದೇರೀತಿ ಪುಣ್ಯಕರವಾದ ಅಪೂರ್ವಮಾಸ. 'ಮಾಸಾನಾಂ ಮಾರ್ಗಶೀರ್ಷೋಽಹಂ'–ಎಂಬ ಭಗವದ್ಗೀತೆಯ ಮಾತಿನಲ್ಲಿ ಮಾಸಗಳಲ್ಲಿ ಶ್ರೈಷ್ಠ್ಯವನ್ನು ಗಮನಿಸಬೇಕಾದ ಅವಶ್ಯಕತೆ ನಿರೂಪಿತ ವಾಗಿದೆ. ಪ್ರತಿಯೊಂದು ಮಾಸವೂ ಮಾನ್ಯವಾಗಿರುವಂತೆ, ಪ್ರತಿಮಾಸದಲ್ಲಿ ಒಂದೊಂದು ವಿಧದ ಕಾರ್ಯಕ್ಕೆ ವಿಶೇಷ ಮಹತ್ತ್ವವು ವರ್ಣಿತವಾಗಿದೆ. ಸ್ನಾನಕ್ಕೆ ವಿಹಿತವಾದ ನಾಲ್ಕುಮಾಸಗಳಲ್ಲಿ ಮಾಘಮಾಸವೂ ಒಂದು. ಇಲ್ಲಿ ನಿರೂಪಿತ ವಾದ ಸ್ನಾನ ಮೂಲತಃ_ಶಾಸ್ತ್ರಸ್ನಾನಕ್ಕೆ ಸಾಧನವಾಗಿರುವ ಆಧ್ಯಾತ್ಮಿಕ ಸಾಧನೆ ಎಂಬುದನ್ನು ಗಮನಿಸಬೇಕು. ಸ್ನಾನದಂತೆ ಇತರ ಅನೇಕ ಧರ್ಮಗಳೂ ಇದರಲ್ಲೂ ವಿಹಿತವಾಗಿದೆ. ಇವೆಲ್ಲವನ್ನು ಮುಖ್ಯ ತತ್ವವಾದ ಹರಿ ಸರ್ವೋತ್ತಮತ್ವ ದೊಂದಿಗೆ ನಿರೂಪಿಸುವುದು ಇದರ ವೈಶಿಷ್ಟ್ಯ. ಶೌಚ, ಸ್ನಾನ, ದಾನ, ಪೂಜಾ, ಏಕಾದಶೀವ್ರತ ಮೊದಲಾದ ಮುಖ್ಯ ಧರ್ಮಗಳೆಲ್ಲ ಇದರಲ್ಲೂ ವಿವರವಾಗಿ ನಿರೂಪಿತ ವಾಗಿವೆ. ವೈಷ್ಣವರಿಗೆ ವಿಹಿತವಾದ ಮುಖ್ಯ ಸ್ತೋತ್ರಗಳಲ್ಲಿ ಒಂದಾದ 'ಮಾಧವ ಸ್ತವರಾಜ' ಬರುವುದು ಇದರಲ್ಲಿಯೇ. ದೈನಂದಿನ ಸದಾಚಾರದೊಂದಿಗೆ ಬ್ರಹ್ಮ ಜಿಜ್ಞಾಸೆಯು ಮಹತ್ತ್ವದವರೆಗೆ ಸಕಲ ಮುಖ್ಯ ಕಾರ್ಯಗಳೂ ಇದರಲ್ಲಿ ದೃಷ್ಟಾಂತ ಸಮೇತವಾಗಿ ನಿರೂಪಿತವಾಗಿದೆ. ದಿನತ್ರಯದ ವಿಧಿ ವಿಧಾನಗಳು, ವಿದ್ಯೋಪ ಜೀವನದಿಂದ ಪ್ರತ್ಯವಾಯ, ಪುಣ್ಯವಿಕ್ರಯದ ಅನರ್ಥ, ಗುರುನಿಂದಾದಿಗಳಿಂದಾಗುವ ದುಷ್ಫಲ, ಪರಧರ್ಮದಿಂದ ವಿನಾಶ ಮೊದಲಾದ ಸಾಧನೋಪಯೋಗಿಯಾದ ಅನೇಕ ವಿವರಗಳು ಇದರಲ್ಲಿ ಬಂದಿವೆ.

ಇದರಲ್ಲಿನ ವಿವಿಧ ವಿಷಯಗಳು ಹೀಗಿವೆ :

### ಅಧ್ಯಾಯ ೧ (೬೪ ಶ್ಲೋಕಗಳು)

ಬ್ರಹ್ಮನಾರದರ ಸಂವಾದರೂಪವಾಗಿ ಗ್ರಂಥದ ಉಪಕ್ರಮ—ಬ್ರಹ್ಮದೇವರ ಬಳಿಯಲ್ಲಿ ನಾರದರ ಪ್ರಶ್ನೆ—ಬ್ರಹ್ಮದೇವರಿಂದ ಮಾಘಮಾಸ ಮಾಹಾತ್ಮ್ಯ ಕಥನದ ಉಪಕ್ರಮ—ಶೌಚ ಮತ್ತು ಸ್ನಾನಗಳ ಮಹತ್ವ—ಮಾಘಸ್ನಾನದ ಹಿರಿಮೆ—ಮಾಘ ಸ್ನಾನದಿಂದ ಪರಿಹಾರವಾಗುವ ವಿವಿಧ ಪಾಪಗಳು—ಮಾಘಸ್ನಾನದಿಂದ ಅಂತಃಕರಣ ಶುದ್ಧಿ, ಹರಿಭಕ್ತಿ ಪ್ರಾಪ್ತಿ ಇತ್ಯಾದಿ—ಮಾಘಸ್ನಾನದಿಂದ ಜನ್ಮಜನ್ಮಾಂತರ ಪಾಪಗಳ ನಾಶ—ಸರ್ವವರ್ಣಾಶ್ರಮದವರಿಗೂ ಮಾಘಸ್ನಾನವು ವಿಹಿತ.

### ಅಧ್ಯಾಯ ೨ (೧೧೮ ಶ್ಲೋ.)

ಮಾಘಸ್ನಾನದ ವಿಧಿ ವಿಧಾನಗಳು—ಸಂಕಲ್ಪ ಮಂತ್ರ—ಶೌಚ ವಿಧಾನ—ದಂತ ಧಾವನದ ವಿಧಿ ವಿಧಾನಗಳು—ಸ್ನಾನ ಮಂತ್ರಗಳು—ಭಾಗೀರಥೀ ದ್ವಾದಶನಾಮಗಳು —ಸ್ನಾನಾಂಗ ಪ್ರಾರ್ಥನಾ ಮಂತ್ರಗಳು—ಗಂಗಾ ಗೋದಾವರೀ ಯಮುನಾ ಮೊದ ಲಾದ ನದಿಗಳ ಅರ್ಘ್ಯ ಮಂತ್ರಗಳು ಅಘಮರ್ಷಣ ಸ್ನಾನ—ಶಿರೋದಕ ಪ್ರಧಾನ, ಅದರ ಮಹತ್ವ ಮತ್ತು ಹಿನ್ನೆಲೆ—ಮಾಧವ ಪೂಜಾ—ಪುಷ್ಪಾರ್ಚನೆಯ ವಿಶೇಷ— ಪುಷ್ಪ, ಗಂಧ, ತುಳಸಿ, ದೀಪ ಮೊದಲಾದವುಗಳ ಸಮರ್ಪಣೆಯ ವಿಶೇಷ ಫಲ— ಪ್ರದಕ್ಷಿಣ ನಮಸ್ಕಾರಾದಿಗಳ ಫಲ—ಮಾಧವ ಪ್ರತಿಮಾ ದಾನದಿಂದ ವಿಶೇಷ ಫಲ— ಮಾಘಮಾಸ ಮಾಹಾತ್ಮ್ಯದ ಶ್ರವಣವೂ ವಿಹಿತ.

### ಅಧ್ಯಾಯ ೩ (೬೪ ಶ್ಲೋ.)

ಸುಧರ್ಮರಾಜನ ಕಥೆ—ಅವನ ಪುತ್ರಿಗೆ ಮಾಹಿಷ್ಮತಿ ದೇಶದ ಅರಸನೊಂದಿಗೆ ವಿವಾಹ—ವಿವಾಹದ ಆರನೆಯ ದಿನ ಅಳಿಯನ ಮರಣ—ದುಃಖತಪ್ತ ಅರಸನ ಬಳಿಗೆ ಅಂಗಿರಸ್ ಮುನಿಗಳ ಆಗಮನ—ಮಾಘಸ್ನಾನ ಫಲದ ದಾನದಿಂದ ಅವರು ಅಳಿಯ ನನ್ನು ಮರಳಿ ಬದುಕಿಸಿದ್ದು—ಅಂಗಿರಸ್ ಮುನಿಗಳಿಂದ ಅವರಿಬ್ಬರ ಪೂರ್ವೇತಿಹಾಸ ಕಥನ—ಸುಮೇಧಸ್ ಎಂಬ ಬ್ರಾಹ್ಮಣನಿಗೆ ಮಾಡಿದ ಆತಿಥ್ಯದ ಫಲ—ಮಾಘಸ್ನಾನ ಫಲದ ಹಿರಿಮೆ.

### ಅಧ್ಯಾಯ ೪ (೭೯ ಶ್ಲೋ.)

ಮಾಘಸ್ನಾನದಿಂದ ವಿವಿಧ ಪಾಪಗಳ ಪರಿಹಾರ—ಮಾಘಮಾಸದಲ್ಲಿ ಅಭಿಷೇಕ, ಪೂಜೆ ಮೊದಲಾದವುಗಳ ವಿಶೇಷ ಮಹತ್ವ—ಶಂಖಪೂಜೆ ಮತ್ತು ಶಂಖೋದಕಗಳ ಮಹತ್ವ—ಶಾಲಗ್ರಾಮ ತೀರ್ಥದ ಮಹಿಮೆ—ಮಾಘಮಾಸದಲ್ಲಿ ಮುತ್ತುಗದ ಎಲೆಯ ಮೇಲೆ ಭೋಜನ ವಿಹಿತ—ಮಾಘಮಾಸದಲ್ಲಿ ಕಂಚಿನ ಪಾತ್ರೆಯಲ್ಲಿ ಭೋಜನ, ತೈಲಾಭ್ಯಂಗ ಮೊದಲಾದವುಗಳು ನಿಷಿದ್ಧ—ಅಗಸೆ ಹೂವು, ಧಾತ್ರಿದೀಪ, ಆರತಿ

ಮೊದಲಾದವುಗಳು ವಿಹಿತ—ರಥಸಪ್ತಮಿಯಂದು ಕೂಷ್ಮಾಂಡ ದಾನದ ಮಹಿಮೆ—ಸಂತತಿಯ ಮಹತ್ವವನ್ನು ತಿಳಿಸುವ ಬ್ರಹ್ಮ ಪಿತೃ ಸಂವಾದರೂಪ ಆಖ್ಯಾಯಿಕೆ—ಕೂಷ್ಮಾಂಡ ದಾನದಿಂದ ಸಂತತಿಯ ರಕ್ಷಣೆ—ವಸ್ತ್ರದಾನ, ಬ್ರಾಹ್ಮಣ ಭೋಜನಾದಿಗಳಿಂದ ವಿಶೇಷ ಫಲ.

**ಅಧ್ಯಾಯ ೫ (೬೧ ಶ್ಲೋ.)**

ಮಾಘಸ್ನಾನ ಫಲದ ರಹಸ್ಯ ಕಥನ—ಮಾಘಮಾಹಾತ್ಮ್ಯದ ಶ್ರವಣವೂ ತುಂಬಾ ಪುಣ್ಯಕರ—ಶ್ವೇತ ಎಂಬ ಗುಹ್ಯಕನ ಕಥೆ—ಲೋಮಶ ಮುನಿಯ ಶಾಪದಿಂದ ಶ್ವೇತನು ಸರ್ಪವಾಗಿ ಜನಿಸಿದ್ದು—ಶತರ್ಚಿ ಮುನಿಗಳಿಂದ ಸುತಪಸ್ ಎಂಬ ಬ್ರಾಹ್ಮಣನ ವಟ ಜನ್ಮ ವಿಮೋಚನೆ—ವಾಮದೇವ ಮುನಿಗಳು ಹೇಳಿದ ಮಾಘಸ್ನಾನ ಮಾಹಾತ್ಮ್ಯ—ಅದರ ಶ್ರವಣದಿಂದ ಶ್ವೇತನಿಗೆ ಸರ್ಪಜನ್ಮದಿಂದ ವಿಮುಕ್ತಿ—ಮಾಘ ಮಾಸದಲ್ಲಿ ಗೀತಾ, ವಿಷ್ಣುಸಹಸ್ರನಾಮ ಮತ್ತು ಭಾಗವತ ಪುರಾಣಗಳ ಪಠಣದಿಂದ ವಿಶೇಷ ಫಲ.

**ಅಧ್ಯಾಯ ೬ (೬೩ ಶ್ಲೋ.)**

ಮಾಘಮಾಸದಲ್ಲಿನ ವಿಶೇಷ ತಿಥಿಗಳು—ವಿಶೇಷ ಸಿದ್ಧಿ ಕ್ಷೇತ್ರಗಳು—ಮಾಘ ಶುದ್ಧ ದ್ವಾದಶಿಯ ಮಹಿಮೆ—ಅಂದು ಬ್ರಾಹ್ಮಣ ಭೋಜನ ಮತ್ತು ದಾನಾದಿಗಳಿಂದ ವಿಶೇಷ ಫಲ—ದ್ವಾದಶಿಯಂದು ರವಿವಾರ ಮತ್ತು ಸಂಕ್ರಮಣವಿದ್ದಲ್ಲಿ ಪುಷ್ಕಲಾ ಯೋಗ—ದ್ವಾದಶಿಯಂದು ಭಾನುವಾರ ವ್ಯತೀಪಾತಗಳ ಸಂಗಮವಾದರೆ ಶೃಂಖಲಾ ಯೋಗ—ದ್ವಾದಶೀ ಶನಿವಾರವಾದರೆ ವೈಷ್ಣವೀ ಯೋಗ—ಮಾಘದ ಅಮಾವಾಸ್ಯೆ ಸೋಮ, ಮಂಗಳ, ಭಾನು ಅಥವಾ ಗುರುವಾರಗಳಂದು ಒದಗಿದಲ್ಲಿ ಪದ್ಮಕಯೋಗ—ಅಂದು ಶಿಂಶುಮಾರ ಪ್ರತಿಮಾ ದಾನದಿಂದ ಮೃತಾಪತ್ಯ ದೋಷದ ಪರಿಹಾರ—ಶಿಂಶುಮಾರ ಪ್ರತಿಮಾ ದಾನಮಂತ್ರ—ಮಾಘಮಾಸದ ಹುಣ್ಣಿಮೆಯಂದು ಗೋದಾನದ ವಿಶೇಷ ಫಲ—ಮಾಘಮಾಸದಲ್ಲಿ ವೃಷೋತ್ಸರ್ಗದಿಂದ ದೀರ್ಘಾಯುಷ್ಯ ಮತ್ತು ಸತ್ಪುತ್ರ ಲಾಭ—ಮಾಘ ಶುದ್ಧ ತ್ರಯೋದಶಿಯಂದು ಮರದ ಬಾಗಿನದ ವಿಶೇಷ—ಮಾಘ ಶುದ್ಧ ಚತುರ್ದಶಿಯಂದು ಅಪೂಪದಾನ—ರಥಸಪ್ತಮಿಯಂದು ಭೂದಾನದ ವಿಶೇಷ ಫಲ—ದಶಮೀ, ದ್ವಾದಶೀ, ತ್ರಯೋದಶೀ ಮತ್ತು ಹುಣ್ಣಿಮೆಗಳು ವಿಶೇಷ ತಿಥಿಗಳು—ರಥಸಪ್ತಮಿಯಂದು ಒಂದೇ ಭೋಜನ—ಅಂದು ಗುಪ್ತದಾನ ಮತ್ತು ಅನ್ನದಾನಗಳಿಂದ ವಿಶೇಷ ಫಲ.

**ಅಧ್ಯಾಯ ೭ (೬೮ ಶ್ಲೋ.)**

ಪ್ರಯಾಗದಲ್ಲಿ ಮಾಘಸ್ನಾನದ ವಿಶೇಷ—ಮೇಷದಲ್ಲಿ ನರ್ಮದಾ ಮತ್ತು ಕರ್ಕಾಟಕದಲ್ಲಿ ತುಂಗಾ ಸ್ನಾನಗಳ ಹಿರಿಮೆ—ವಿವಿಧ ನದೀ ತಟಾಕಗಳಲ್ಲಿ ಮಾಘ

ಸ್ನಾನದಿಂದ ಲಭಿಸುವ ಪುಣ್ಯಫಲದ ವಿವರ—ಸಪ್ತಗಂಗೆಗಳು ಮತ್ತು ಗೋಮತಿಯಲ್ಲಿ ಮಾಘಸ್ನಾನದ ವಿಶೇಷ—ಕಾವೇರೀ, ಪುಷ್ಕರ, ಪ್ರಭಾಸ, ಗೋಕರ್ಣ, ಕುರುಕ್ಷೇತ್ರ ಮೊದಲಾದವುಗಳಲ್ಲಿ ಮಾಘಸ್ನಾನದ ವಿಶೇಷ—ಮಾಘಮಾಸದಲ್ಲಿ ಭಾನುವಾರ, ವ್ಯತೀಪಾತಗಳಂದು ವಿಶೇಷ ಫಲ—ವಸುಮತೀ ರಾಜನ ಕಥೆ—ಹೃತ್ಸಮದ ಮುನಿಗಳ ಉಪದೇಶದಿಂದ ಅವನ ಮಗ ವಿಚಿತ್ರರಥನ ಅಪಮೃತ್ಯು ಪರಿಹಾರ—ಕುಜ ಪಂಚಮಿ ಯಂದು ಸ್ನಾನ ದಾನಾದಿಗಳಿಂದ ಅಪಮೃತ್ಯು ಪರಿಹಾರ.

## ಅಧ್ಯಾಯ ೮ (೯೦ ಶ್ಲೋ.)

ಮಾಘಸ್ನಾನ ಮಾಹಾತ್ಮ್ಯವನ್ನು ನಿರೂಪಿಸುವ ಶತಬಲಿ ಎಂಬ ಶೂದ್ರನ ಕಥೆ—ಅವನಂತೆ ಅವನ ಪುತ್ರರಾದ ಭದ್ರ ಮತ್ತು ಸುಭದ್ರರೂ ಧರ್ಮಪರಾಙ್ಮುಖ ರಾದದ್ದು—ಪರದಾರರತರಾದ ಅವರು ಕಳ್ಳತನ ದರೋಡೆಗಳನ್ನು ಆರಂಭಿಸಿದ್ದು—ಅವರಿಂದ ಚಂಪಾವತಿಯ ಒಬ್ಬ ಬ್ರಾಹ್ಮಣನ ವ್ಯಾಧಿಯ ಉಪಶಮನ—ಅವನೊಂದಿಗೆ ಚಂಪಾವತಿಗೆ ತೆರಳಿದ ಭದ್ರನಿಗೆ ಬುದ್ಧಿಯಲ್ಲಿ ಪರಿವರ್ತನೆ—ಅವನೊಂದಿಗೆ ಸುಭದ್ರನೂ ಬದಲಾದದ್ದು—ಒಂದು ಹುಲಿಯಿಂದ ಭದ್ರ ಮತ್ತು ಸುಭದ್ರರ ಮರಣ—ಭದ್ರನ ಪೆಟ್ಟಿನಿಂದ ಹುಲಿಯೂ ಸತ್ತದ್ದು—ಯಮದೂತರ ಬಂಧನದಿಂದ ಭದ್ರನನ್ನು ವಿಷ್ಣು ದೂತರು ಬಿಡಿಸಿದ್ದು—ಯಮಲೋಕದಿಂದ ಬಿಡುಗಡೆಗೆ ಸಾಧನವಾಗುವ ಕೆಲವು ಪುಣ್ಯಕಾರ್ಯಗಳ ವಿವರ—ಭದ್ರನಿಂದ ಸುಭದ್ರ ಮತ್ತು ವ್ಯಾಘ್ರಗಳ ಮೋಚನೆ—ಅವರೆಲ್ಲರೂ ಬ್ರಾಹ್ಮಣರಾಗಿ ಜನಿಸಿ ಜ್ಞಾನದ್ವಾರಾ ಮುಕ್ತರಾದದ್ದು.

## ಅಧ್ಯಾಯ ೯ (೭೮ ಶ್ಲೋ.)

ಮಾಘಪೂರ್ಣಿಮಾ ಸ್ನಾನದಿಂದ ಗುರುನಿಂದಾದಿ ದೋಷ ಪರಿಹಾರ—ಪರಿಧಿಯ ಕಥೆ—ತನ್ನ ಗುರುವನ್ನು ಸುರಾಪೀ ಎಂದು ತಪ್ಪಾಗಿ ತಿಳಿದು ಪರಿಧಿಯು ಅವರನ್ನು ನಿಂದಿಸಿದ್ದು—ತಮಗೆ ಒದಗಿದ ಅಪವಾದವನ್ನು ಪರಿಹರಿಸಿಕೊಳ್ಳಲು ದೇವತೆಗಳ ಅಪ್ಪಣೆಯಂತೆ ಪ್ರಗಾಥರು ಭೂಮಿಗೆ ಮರಳಿ ಬಂದದ್ದು—ಜ್ಯೋತಿಷಾರ್ಣವ ಎಂಬ ಬ್ರಾಹ್ಮಣನು ಪ್ರಗಾಥರು ಸುರಾಪಿಗಳಲ್ಲವೆಂಬುದನ್ನು ಅರ್ಥಮಾಡಿಕೊಂಡದ್ದು—ವೃಥಾ ಪರನಿಂದೆಯಿಂದ ವಿಶೇಷ ಪ್ರತ್ಯವಾಯ—ಸತ್ಯ ಹೇಳಿಯೂ ಪಾಪಕಟ್ಟಿಕೊಂಡ ಬ್ರಾಹ್ಮಣನೊಬ್ಬನ ಕಥೆ—ಪ್ರಗಾಥನು ದೇವೇಂದ್ರನ ಸಭೆಯನ್ನು ಪ್ರವೇಶಿಸಿದ್ದು—ಗುರುನಿಂದಾ ದೋಷದಿಂದ ಪರಿಧಿಯು ಬ್ರಹ್ಮರಾಕ್ಷಸನಾದದ್ದು—ಮುದ್ಗಲನೆಂಬ ಮುನಿಯು ಅವನ ಪರವಾಗಿ ಮಾಘಪೂರ್ಣಿಮೆಯಂದು ಸ್ನಾನಮಾಡಿ ಅವನನ್ನು ಉದ್ಧರಿಸಿದ್ದು.

## ಅಧ್ಯಾಯ ೧೦ (೭೩ ಶ್ಲೋ.)

ಪಿಶಾಚಿಗಳನ್ನು ಉದ್ಧರಿಸಿದ ಸುಯಜ್ಞ ಎಂಬ ಬ್ರಾಹ್ಮಣನ ಕಥೆ—ಶಾಂಡಿಲ್ಯರ ಬಳಿ ಸುಯಜ್ಞರ ಶಾಸ್ತ್ರಾಧ್ಯಯನ—ಸಮಿತ್ತು, ದರ್ಭೆಗಳನ್ನು ತರಲು ಹೊರಟ ಅವ

ನನ್ನು ಏಳು ಬ್ರಹ್ಮರಾಕ್ಷಸರು ಮುತ್ತಿದ್ದು—ದಕ್ಷಿಣ ದಿಕ್ಕಿಗೆ ಓಡಿದ ಅವನನ್ನು ಏಳು ಕೂಷ್ಮಾಂಡ ಪಿಶಾಚಿಗಳು ಮುತ್ತಿದ್ದು—ಪಶ್ಚಿಮ ದಿಕ್ಕಿನತ್ತ ಓಡಿದ್ದ ಅವನನ್ನು ಏಳು ಡಾಕಿನೀ ಪಿಶಾಚಿಗಳು ಆಕ್ರಮಿಸಿದ್ದು—ಉತ್ತರ ದಿಕ್ಕಿಗೆ ಓಡಿದ ಅವನನ್ನು ವೃಕಾನನ ಮತ್ತು ವ್ಯಾಘ್ರಾನನ ಎಂಬ ಎರಡು ಪಿಶಾಚಿಗಳು ಮುತ್ತಿದ್ದು—ಈಶಾನ್ಯ ದಿಕ್ಕಿಗೆ ಓಡಿದ ಅವನ ಬಳಿಗೆ ಶಾಕಿನೀ ಗಣದ ಪಿಶಾಚಿಗಳು ಧಾವಿಸಿದ್ದು—ಆಗ್ನೇಯ ದಿಕ್ಕಿಗೆ ಧಾವಿಸಿದ್ದ ಅವನನ್ನು ಮತ್ತೆರಡು ಪಿಶಾಚಿಗಳು ತಿನ್ನಲು ಧಾವಿಸಿದ್ದು—ಕಂಗೆಟ್ಟ ಸುಯಜ್ಞನು ಮಾಡಿದ ವಿಷ್ಣುಸ್ತುತಿ—ಅಶರೀರವಾಣಿಯ ಆದೇಶದಂತೆ ಕೌಶಿಕೀನದಿ ಯಲ್ಲಿ ಮಿಂದ ಅವನು ನೃಸಿಂಹ ಬೀಜಾಕ್ಷರದಿಂದ ಅಭಿಮಂತ್ರಿಸಿದ ನೀರನ್ನು ಆ ಪಿಶಾಚಿಗಳ ಮೇಲೆ ಪ್ರೋಕ್ಷಿಸಿದ್ದು—ಆಗ ಭಯಗೊಂಡ ಬ್ರಹ್ಮರಾಕ್ಷಸರು ತಿಳಿಸಿದ ಅವುಗಳ ಪೂರ್ವ ಕಥೆ—ಪ್ರತಿಗ್ರಹದೋಷದಿಂದ ತಾನು ಬ್ರಹ್ಮರಾಕ್ಷಸನಾದ ಬಗೆ ಯನ್ನು ದಗ್ಧಪಾಣಿ ಎಂಬ ಪಿಶಾಚಿಯು ತಿಳಿಸಿದ್ದು—ಭಾನುವಾರ ಮೊದಲಾದ ವಿಶೇಷ ದಿನಗಳಂದು ರಾತ್ರಿ ಭೋಜನ ಮಾಡಿದ ಪಾಪದಿಂದ ತಾನು ಬ್ರಹ್ಮರಾಕ್ಷಸ ನಾದ ಬಗೆಯನ್ನು ದಗ್ಧಜಿಹ್ವ ಎಂಬ ಪಿಶಾಚಿಯು ತಿಳಿಸಿದ್ದು.

## ಅಧ್ಯಾಯ ೧೧ (೬೯ ಶ್ಲೋ.)

ತಾನು ಪಾಖಂಡನಾಗಿ ತನ್ನ ಪತ್ನಿಯನ್ನು ಮಾಘಸ್ನಾನ ಮಾಡದಂತೆ ನಿರ್ಬಂಧಿಸಿದ ಪಾಪದಿಂದಾಗಿ ತಾನು ಬ್ರಹ್ಮರಾಕ್ಷಸನಾದ ವಿಷಯವನ್ನು ಅಮಾಘ ಎಂಬವನು ತಿಳಿಸಿದ್ದು—ಧರ್ಮಪತ್ನಿಯನ್ನು ತ್ಯಜಿಸಿ ದಾಸೀರತನಾದ ಪಾಪದಿಂದ ತಾನು ಬ್ರಹ್ಮರಾಕ್ಷಸನಾದದ್ದನ್ನು ದೂತಿಕಾ ಎಂಬ ಪಿಶಾಚಿಯು ತಿಳಿಸಿದ್ದು—ತಾನೇ ಪಂಡಿತ, ಸದಾಚಾರಿ ಎಂಬ ಅಹಂಕಾರದಿಂದ ಇತರರನ್ನೂ, ಗುರುಪುತ್ರನನ್ನೂ ನಿಂದಿಸಿದ ಪಾಪದಿಂದ ತಾನು ಬ್ರಹ್ಮರಾಕ್ಷಸನಾದದ್ದನ್ನು ನಿಂತಕ ಪಿಶಾಚಿಯು ತಿಳಿಸಿದ್ದು—ತಂದೆ ತಾಯಿಗಳನ್ನು ಹಿಂಸಿಸಿದ ಪಾಪದಿಂದ ಬ್ರಹ್ಮರಾಕ್ಷಸನಾದ ಮಲಭೋಜನನ ಕಥೆ—ವೇದಗಳನ್ನೂ ದೇವತೆಗಳನ್ನೂ ನಿಂದಿಸಿದ ಪಾಪದಿಂದ ತಾನು ಬ್ರಹ್ಮರಾಕ್ಷಸನಾದುದಾಗಿ ಅದೈವತನು ತಿಳಿಸಿದ್ದು—ಬ್ರಹ್ಮರಾಕ್ಷಸರ ಪೂರ್ವೇತಿಹಾಸದ ಕಥನದ ಮುಕ್ತಾಯ.

## ಅಧ್ಯಾಯ ೧೨ (೭೯ ಶ್ಲೋ.)

ಕೂಷ್ಮಾಂಡ ಪಿಶಾಚಿಗಳ ಪೂರ್ವೇತಿಹಾಸ—ಕಳಿಂಗ ಎಂಬ ಬ್ರಾಹ್ಮಣನು ಶ್ರೀಹರಿಯನ್ನು ತೊರೆದು ಕ್ಷುದ್ರದೇವತೆಗಳ ಉಪಾಸನಾ ಮಾಡಿದ ಪಾಪದಿಂದ ಉಚ್ಛಿಷ್ಟ ಭೋಜನನೆಂಬ ಪಿಶಾಚಿಯಾದದ್ದು—ಚೈತ್ರನೆಂಬ ಬ್ರಾಹ್ಮಣನು ಪಾಖಂಡಿ ಯಾಗಿ ಭೈರವ ಚಕ್ರದ ಉಪಾಸನೆ ಮಾಡಿದ ಪಾಪದಿಂದ ಅಭದ್ರನೆಂಬ ಪಿಶಾಚಿ ಯಾದದ್ದು—ಸುದ್ಯುಮ್ನನೆಂಬ ಬ್ರಾಹ್ಮಣನು ರಸವಿಕ್ರಯ ದೋಷದಿಂದ ನೀರಸನೆಂಬ

ಪಿಶಾಚಿಯಾದದ್ದು—ವಿಶ್ರಾಮ ಎಂಬ ಬ್ರಾಹ್ಮಣನು ಅಯಾಜ್ಯಯಾಜನಾದಿ ದೋಷ ದಿಂದ ಹೀನನೆಂಬ ಪಿಶಾಚಿಯಾಗಿ ಜನಿಸಿದ್ದು—ಚಂಡಕನೆಂಬ ಬ್ರಾಹ್ಮಣನು ವೇಶ್ಯಾ ವೃತ್ತಿಯನ್ನು ಅವಲಂಬಿಸಿ ತನ್ನ ಗುರುಪುತ್ರನನ್ನೇ ಪೀಡಿಸಿದ ಪಾಪದಿಂದ ನಿಷ್ಠುರ ನೆಂಬ ಪಿಶಾಚಿಯಾದದ್ದು—ಗೋಪೀಥನೆಂಬ ಬ್ರಾಹ್ಮಣನು ಮಾತಾಪಿತೃಗಳನ್ನು ಮನೆಯಿಂದ ಹೊರಕ್ಕೆ ಹಾಕಿ ಪಂಚಮಹಾಯಜ್ಞಾದಿಗಳನ್ನು ತೊರೆದ ಪಾಪಗಳಿಂದ ನಿರಾಶ್ರಯನೆಂಬ ಪಿಶಾಚಿಯಾದದ್ದು—ಸುಖಚ್ಛನೆಂಬ ಬ್ರಾಹ್ಮಣನು ಶಾಸ್ತ್ರ ಓದಿಯೂ ಅನುಷ್ಠಾನ ಮಾಡದ ಪಾಪದಿಂದ ಉದ್ವೃತ್ತನೆಂಬ ಪಿಶಾಚಿಯಾದದ್ದು.

## ಅಧ್ಯಾಯ ೧೩ (೫೫ ಶ್ಲೋ.)

ಡಾಕಿನೀಗಣದ ಪಿಶಾಚಿಗಳ ಪೂರ್ವೇತಿಹಾಸ—ವರ್ಚಿಷ್ಮಾನ್ ಎಂಬ ಬ್ರಾಹ್ಮಣನು ಏಕಾದಶೀ ವ್ರತದ ಪುಣ್ಯವನ್ನು ಮಾರಿಕೊಂಡ ಪಾಪದಿಂದಲೂ, ಧರ್ಮ ಎಂಬ ಅವನ ಸೋದರಮಾವನು ಹತ್ತು ಬಾರಿ ಗಂಗಾಯಾತ್ರೆ ಮಾಡಿದ ಫಲವನ್ನು ಮಾರಿಕೊಂಡ ಪಾಪದಿಂದಲೂ, ಪದ್ಮನೆಂಬ ಅವನ ಸೋದರಳಿಯನು ಹನ್ನೆರಡು ವರುಷ ಪಾಠ ಪ್ರವಚನ ಮಾಡಿದ ಪುಣ್ಯವನ್ನು ಮಾರಿಕೊಂಡ ಪಾಪ ದಿಂದಲೂ, ಅವನ ಸೋದರತ್ತೆಯ ಮಗನಾದ ದರಿದ್ರನು ವೈಶ್ಯರಿಗೆ ವೇದವಿಕ್ರಯ ಮಾಡಿದ ಪಾಪದಿಂದಲೂ, ಅವನ ಚಿಕ್ಕಮ್ಮನ ಮಗನಾದ ಸಂಕೃತಿಯು ಮಾಘ ಸ್ನಾನದ ಪುಣ್ಯವನ್ನು ಮಾರಾಟ ಮಾಡಿದ ಪಾಪದಿಂದಲೂ, ಅವನ ಮಗಳ ಮಗ ನಾದ ಮೌದ್ಗಲ್ಯನು ತನ್ನ ಪುತ್ರರನ್ನು ಮಾರಾಟ ಮಾಡಿದ ಪಾಪದಿಂದಲೂ, ಕುಶನೆಂಬ ಬ್ರಾಹ್ಮಣನು ಅನಾಥ ಪ್ರೇತ ಸಂಸ್ಕಾರ ಮಾಡಿದ ಫಲವನ್ನು ಮಾರಾಟ ಮಾಡಿದ ಪಾಪದಿಂದಲೂ ಡಾಕಿನೀಗಣದ ಪಿಶಾಚಿಗಳಾದದ್ದು—ಪುಣ್ಯಗಳನ್ನು ಮಾರಾಟಮಾಡಿದ ಪಾಪದಿಂದ ಡಾಕಿನೀ ಪಿಶಾಚಿ ಜನ್ಮ ಎಂಬ ತತ್ವದ ಕಥನ.

## ಅಧ್ಯಾಯ ೧೪ (೭೩ ಶ್ಲೋ.)

ಶಾಕಿನೀಗಣದ ಪಿಶಾಚಿಗಳ ಪೂರ್ವೇತಿಹಾಸ—ತುಂದಿಲ ಎಂಬ ಗಂಧರ್ವನು ಮತಂಗನೆಂಬ ಮುನಿಗಳನ್ನು ಅಪಮಾನಿಸಿದ ಪಾಪದಿಂದ ಅವರ ಶಾಪದಿಂದ ಶ್ರುತ ಕೀರ್ತಿ ಎಂಬ ರಾಜನಾಗಿ ಹುಟ್ಟಿ ಆಗ ದಶಮೀ ಮೊದಲಾದ ನಿಷಿದ್ಧದಿನಗಳಲ್ಲಿ ಕ್ಷೌರಾದಿಗಳನ್ನು ಮಾಡಿಸಿಕೊಂಡ ಪಾಪದಿಂದ ವೃಕಾನನ ಎಂಬ ಪಿಶಾಚಿಯಾದದ್ದು —ಊರ್ಮಿಳನೆಂಬ ಬ್ರಾಹ್ಮಣನು ಏಕಾದಶಿಯಂದು ಅಭ್ಯಂಜನ ಮಾಡಿಕೊಂಡ ಪಾಪದಿಂದ ವ್ಯಾಘ್ರಾನನ ಎಂಬ ಪಿಶಾಚಿಯಾದದ್ದು—ಕುಂತಿಭೋಜನ ಪುತ್ರರಾದ ನೀಲಕೇತು, ಪೀತಕೇತು ಮತ್ತು ಚಿತ್ರಕೇತುಗಳು ಬ್ರಾಹ್ಮಣರ ಸ್ವತ್ತಿನ ಅಪಹಾರ, ದತ್ತಾಪಹಾರ ದೋಷದಿಂದ ಗೃಧ್ರಶೀರ್ಷನೆಂಬ ಪಿಶಾಚಿಯಾದದ್ದು—ವಿಘೋಷರು ಎಂಬ ರಾಜಪುತ್ರರು ದುರಾಚಾರಿಗಳಾಗಿ ದುರಾಸೆಯಿಂದ ಶೂದ್ರಪುತ್ರರನ್ನು ಸಂಹರಿ

ಸಿದ ಪಾಪದಿಂದ ಪಿಶಾಚಿಗಳಾದದ್ದು ಮತ್ತು ಅವರು ಕೌಶಿಕನೆಂಬ ಬ್ರಾಹ್ಮಣನನ್ನು ಅವಮಾನಿಸಿದ್ದು—ಪಿಶಾಚಿಗಳ ಪೂರ್ವೇತಿಹಾಸ ಕಥನದ ಮುಕ್ತಾಯ.

### ಅಧ್ಯಾಯ ೧೫ (೧೧೦ ಶ್ಲೋ.)

ಪಿಶಾಚಿಗಳು ಮಾಡಿದ ಸುಯಜ್ಞಮುನಿಯ ಸ್ತೋತ್ರ—ಸುಯಜ್ಞನಿಂದ ಅವರಿಗೆ ಅಭಯಪ್ರಧಾನ—ಮುನಿಯು ಅವರಿಗೋಸ್ಕರ ಮಾಡಿದ ಮಾಘಸ್ನಾನದ ಪುಣ್ಯದಿಂದ ಅವರೆಲ್ಲರೂ ಪಿಶಾಚಿ ಜನ್ಮದಿಂದ ಬಿಡುಗಡೆ ಹೊಂದಿದ್ದು—ಶಿಷ್ಯನನ್ನು ಹುಡುಕುತ್ತಾ ಅಲ್ಲಿಗೆ ಗುರುಗಳಾದ ಶಾಂಡಿಲ್ಯರ ಆಗಮನ—ಪಿಶಾಚಿಜನ್ಮದಿಂದ ಮುಕ್ತರಾದ ದಿವ್ಯಪುರುಷರು ಶಾಂಡಿಲ್ಯರಲ್ಲಿ ಮಾಡಿದ ಅನೇಕ ತಾತ್ವಿಕ ಪ್ರಶ್ನೆಗಳು—ಶಾಂಡಿಲ್ಯರು ಮಾಡಿದ ತತ್ವೋಪದೇಶ—ಜಗದ್ವೃಕ್ಷದ ನಿರೂಪಣೆ—ದೇವತಾ ತಾರತಮ್ಯ—ಕರ್ಮಬಂಧದ ವೈಚಿತ್ರ್ಯ—ಶ್ರೀಹರಿಯ ಸರ್ವಸ್ವಾತಂತ್ರ್ಯ ಇತ್ಯಾದಿ.

### ಅಧ್ಯಾಯ ೧೬ (೬೪ ಶ್ಲೋ.)

ಶಾಂಡಿಲ್ಯ ತತ್ವ—ಶ್ರೀಹರಿಯು ಮಾಡಿದ ಸೃಷ್ಟ್ಯಾದಿಗಳ ವೈಚಿತ್ರ್ಯ—ತತ್ವಾಭಿಮಾನಿ ದೇವತಾ ವಿವರ—ವಾಯುಜೀವೋತ್ತಮತ್ವ—ಇತರ ಜೀವರಿಗೆ ದೇವತೆಗಳು, ದೇವತೆಗಳಿಗೆ ಶ್ರೀ ವಾಯುದೇವರು, ವಾಯುದೇವರಿಗೆ ಶ್ರೀವಿಷ್ಣುವು ನಿಯಾಮಕರು—ಶ್ರದ್ಧೆಯ ಮಹತ್ವ—ಸಾಧನೆಯಲ್ಲಿ ಕರ್ಮಾನುಷ್ಠಾನದ ಸ್ಥಾನ—ಕರ್ಮದ ಅಂಗಗಳು (೨)—ಉಪಾಂಗಗಳು (೭)—ವೇದಾದಿ ಶಾಸ್ತ್ರಗಳ ಮಹಾ ತಾತ್ಪರ್ಯ—ಗುರುಕುಲವಾಸದ ಮಹತ್ವ—ಇಂದ್ರಿಯನಿಗ್ರಹ, ಶಾಸ್ತ್ರಶ್ರವಣಗಳ ಹಿರಿಮೆ—ಹರಿಭಕ್ತಿಯು ವಿಹಿತ, ಹರಿದ್ವೇಷವು ತ್ಯಾಜ್ಯ—ವೈಷ್ಣವ ಪೂಜೆಯೂ ವಿಹಿತ.

## ಭಾಗ ೨

### ಅಧ್ಯಾಯ ೧೭ (೮೫ ಶ್ಲೋ.)

ಶಾಂಡಿಲ್ಯ ತತ್ವ—ವಿಷ್ಣುಜಿಜ್ಞಾಸೆಯ ಮಹತ್ವ—ಜಿಜ್ಞಾಸೆಯ ಅರ್ಥ—ಶಾಸ್ತ್ರಾರ್ಥ ನಿರ್ಣಯದ ಪದ್ಧತಿ (ಉಪಕ್ರಮಾದಿ ತಾತ್ಪರ್ಯ ನಿರ್ಣಾಯಕ ಲಿಂಗಗಳು ಇತ್ಯಾದಿ)—ಶ್ರೀಹರಿಯ ಸರ್ವಶಬ್ದ ವಾಚ್ಯತ್ವ—ಅಧಿಕಾರ ನಿರ್ಣಯ—ಸ್ತ್ರೀಯರ ಅಧಿಕಾರ ವಿಶೇಷ—ಪರಬ್ರಹ್ಮನ ಲಕ್ಷಣ—ಬ್ರಹ್ಮಾದಿಗಳಿಗೆ ಸ್ವತಂತ್ರ ಕರ್ತೃತ್ವವಿಲ್ಲ—ಔಷಧಿ ಮೊದಲಾದವುಗಳಲ್ಲೂ ವಿಷ್ಣುವ್ಯಾಪಾರ—ಶ್ರೀಹರಿಗೆ ಕರ್ಮ ಲೇಪವಿಲ್ಲ—ಭಗವಂತನ ಸೃಷ್ಟಿವೈಚಿತ್ರ್ಯ—ಶ್ರೀಹರಿಯ ಗುಣಪೂರ್ಣತ್ವ—ಶ್ರೀ ಹರಿಯ ಅತ್ಯರ್ಥ ಪ್ರಸಾದದಿಂದಲೇ ಮೋಕ್ಷ—ಹರಿಪ್ರಸಾದದ ವೈಚಿತ್ರ್ಯ—ಮೋಕ್ಷ

ಸ್ವರೂಪದ ನಿರೂಪಣೆ—ಆನಂದ ತಾರತಮ್ಯ—ಶ್ರೀಹರಿಯ ಅಪ್ರಮೇಯತ್ವ—ಶ್ರೀಹರಿಯ ಅನಂತರೂಪಗಳು—ಜೀವರ ಹೃದಯದಲ್ಲಿ ಭಗವಂತನಿರುವ ಪರಿ.

### ಅಧ್ಯಾಯ ೧೮ (೮೩ ಶ್ಲೋ.)

ಶಾಂಡಿಲ್ಯ ತತ್ವ—ವಿವಿಧ ಪ್ರಮೇಯಗಳ ನಿರೂಪಣೆ—ಶ್ರೀಹರಿಯ ನಿಮಿತ್ತ ಕಾರಣತ್ವ—ಸ್ವತಂತ್ರ, ಅಸ್ವತಂತ್ರ ತತ್ವಗಳ ವಿಭಾಗ—ಸ್ವತಂತ್ರ ಶಬ್ದದ ಅರ್ಥ—ಭಾವಾಭಾವ ನಿರೂಪಣೆ—ಚೇತನ ವಿಭಾಗ—ಮುಕ್ತಿಯೋಗ್ಯ ವಿಭಾಗ—ಅಚೇತನ ವಿಭಾಗ—ಸರ್ವವೂ ಭಗವದಧೀನ—ಪ್ರಮಾಣ ನಿರೂಪಣೆ—ಕೇವಲ ಪ್ರಮಾಣ ವಿಭಾಗ—ಈಶ, ಲಕ್ಷ್ಮಿ, ಯೋಗಿ, ಅಯೋಗಿ ಜ್ಞಾನದ ಲಕ್ಷಣ—ಮೋಕ್ಷಸಾಧನೆಗೆ ವೈರಾಗ್ಯದ ಅವಶ್ಯಕತೆ—ಅಹಂಕಾರ ಮಮಕಾರಗಳು ಹೇಯ—ಭಗವದ್ಭಕ್ತಿಯ ಲಕ್ಷಣ—ಮಮತಾ ತ್ಯಾಗಕ್ಕೆ ಜಡಭರತ, ಜನಕಾದಿಗಳ ದೃಷ್ಟಾಂತ—ಜನಕರಾಜನ ಕಥೆ— ವ್ಯಾಸಾವತಾರ ನಿರೂಪಣೆ.

### ಅಧ್ಯಾಯ ೧೯ (೮೫ ಶ್ಲೋ.)

ಶಾಂಡಿಲ್ಯ ತತ್ವ—ಯೋಗ, ಯೋಗಾಸನಾದಿಗಳ ನಿರೂಪಣೆ—ಪ್ರಾಣಾಯಾಮದ ವಿವರಗಳು—ಧ್ಯಾನ ವಿಧಿ—ಬ್ರಹ್ಮಾದಿ ಮಾನುಷಾಂತ ಉಪಾಸನಾ ವಿಧಿ—ಅಪರೋಕ್ಷಜ್ಞಾನಿಗೂ ಕರ್ಮಾಚರಣೆ ವಿಹಿತ—ದೇವತಾ ತಾರತಮ್ಯ—ಅರ್ಚಿರಾದಿ ಮಾರ್ಗ ಕಥನ—ಸುಷುಮ್ನಾದಿ ನಾಡಿಗಳ ವಿವರ.

### ಅಧ್ಯಾಯ ೨೦ (೮೬ ಶ್ಲೋ.)

ಶಾಂಡಿಲ್ಯ ತತ್ವ—ಹರಿಕಥಾ ಶ್ರವಣದ ಅವಶ್ಯಕತೆ ಮತ್ತು ಮಾಹಾತ್ಮ್ಯ—ಪುಣ್ಯಧಾಮನ ಕಥೆ—ಆಗಮಗಳ ವಿವರ—ಜ್ಞಾನಸಿಂಧು ಮತ್ತು ಧೃತವ್ರತರಿಗೆ ಪುಣ್ಯಧಾಮನ ಆತಿಥ್ಯ—ಪುಣ್ಯಧಾಮನನ್ನು ನಿಂದಿಸಿದ ಅವರಿಗೆ ಗಂಗೆಯು ಕಾಣದೇ ಹೋದದ್ದು—ಅವರು ಮಾಡಿದ ಗಂಗಾಸ್ತುತಿ—ಗಂಗೆಯು ಉಪದೇಶಿಸಿದ ಶ್ರವಣಾದಿಗಳ ಮಹಿಮೆ—ಪುಣ್ಯಧಾಮನ ಸಾಧನೆಯ ವರ್ಣನೆ—ಸಕಲ ಕಾರ್ಯಗಳಿಗಿಂತಲೂ ಶ್ರವಣಾದಿಗಳೇ ಮಿಗಿಲು.

### ಅಧ್ಯಾಯ ೨೧ (೩೮ ಶ್ಲೋ.)

ಶಾಂಡಿಲ್ಯ ತತ್ವ—ಮನೋನಿಗ್ರಹದ ಮಹತ್ವ—ವೃತ್ತ ಮತ್ತು ಸುವೃತ್ತ ಎಂಬ ಬ್ರಾಹ್ಮಣರ ಕಥೆ—ವೇಶ್ಯಾಗೃಹದಲ್ಲಿ ಸುವೃತ್ತ, ಕೃಷ್ಣದೇವಾಲಯದಲ್ಲಿ ವೃತ್ತ—ಅವರಿಬ್ಬರ ಆಲೋಚನೆಯ ವೈಖರಿ—ವೃತ್ತನಿಗೆ ನರಕ—ಸುವೃತ್ತನಿಗೆ ಸದ್ಗತಿ—ಸುವೃತ್ತನಿತ್ತ ಮಾಘಸ್ನಾನದ ಪುಣ್ಯದಿಂದ ವೃತ್ತನಿಗೂ ಸದ್ಗತಿ—ಮನೋನಿಗ್ರಹದ ಮಹತ್ವದ ಉಪಸಂಹಾರ.

**ಅಧ್ಯಾಯ ೨೨ (೭೫ ಶ್ಲೋ.)**

ಶಾಂಡಿಲ್ಯ ತತ್ತ್ವ—ಭಗವದ್ಧ್ಯಾನ ವಿಧಿ—ವಿರಾಡ್ರೂಪ ಚಿಂತನೆ—ಶ್ರೀಹರಿ ಸ್ಮರಣೆಯ ಮಹತ್ತ್ವ—ನಾರದರು ನರಕಸ್ಥ ಜನರನ್ನು ಶ್ರೀಹರಿನಾಮದಿಂದ ಉದ್ಧರಿಸಿದ ಕಥೆ—ಕಲಹಪ್ರಿಯರಾಗಲು ನಾರದರಿಗೆ ಯಮನ ಶಾಪ ಇತ್ಯಾದಿ.

**ಅಧ್ಯಾಯ ೨೩ (೧೦೯ ಶ್ಲೋ.)**

ಶಾಂಡಿಲ್ಯ ತತ್ತ್ವ—ಧರ್ಮಫಲ ಪ್ರಾಪ್ತಿಯ ರಹಸ್ಯ—ಮಾಘಸ್ನಾನದ ಮಹಿಮೆ—ಮಾಘದಲ್ಲಿ ಮಾಧವ ಪ್ರತಿಮಾದಾನದ ಮಹತ್ತ್ವ—ಲಕ್ಷಣ ಎಂಬ ವೇಶ್ಯೆಯ ಕಥೆ—ಅವಳು ನೀಡಿದ ಮಾಘಸ್ನಾನದ ಪುಣ್ಯದಿಂದ ಬಾಲವಿಧವೆಯೊಬ್ಬಳ ಮೃತಪತಿಯ ಪುನರುಜ್ಜೀವನ—ಬಾಲವೈಧವ್ಯ, ಮೃತಾಪತ್ಯ, ಪುತ್ರಹೀನತೆ ದೋಷಗಳಿಗೆ ಕಾರಣಗಳು—ರಜಸ್ವಲಾದೋಷದಿಂದ ಬಾಲವೈಧವ್ಯ—ಋಷಿಪಂಚಮೀ, ಲಕ್ಷವರ್ತೀ ವ್ರತ, ಮರದ ಬಾಗಿನ ಮೊದಲಾದವುಗಳಿಂದ ರಜೋದೋಷದ ನಿವೃತ್ತಿ—ಲಕ್ಷವರ್ತೀ ವ್ರತದ ವಿಧಿವಿಧಾನಗಳು—ಅಶಕ್ತರು ದ್ವಾದಶೀ, ರಥಸಪ್ತಮೀ ಮತ್ತು ಹುಣ್ಣಿಮೆಗಳಂದಾದರೂ ಮಾಘಸ್ನಾನ ಮಾಡಲೇಬೇಕು—ಅಶಕ್ತರಿಗೆ ಸ್ನಾನವಿಧಿ.

**ಅಧ್ಯಾಯ ೨೪ (೮೯ ಶ್ಲೋ.)**

ಶಾಂಡಿಲ್ಯ ತತ್ತ್ವ—ಮಾಘಸ್ನಾನದ ಮಹಿಮೆ ಮುಂದುವರೆದದ್ದು—ಮಾಘಮಾಸದಲ್ಲಿ ಮಾಧವ ಪ್ರತಿಮಾ, ಶಿಂಶುಮಾರ ಪ್ರತಿಮಾಗಳ ದಾನದಿಂದ ಮೃತಾಪತ್ಯ ದೋಷಪರಿಹಾರ—ಮಾಘಮಾಸದಲ್ಲಿ ಮಾಡುವ ವಿವಿಧ ಸತ್ಕಾರ್ಯಗಳ ಫಲವಿಶೇಷ—ದಾರುಣ ಎಂಬ ಬೇಡನ ಕಥೆ—ಗಾಲವ ಮುನಿಗಳು ನಿರೂಪಿಸಿದ ಮಾಘಸ್ನಾನದ ಹಿರಿಮೆಯ ಶ್ರವಣದಿಂದ ಕಪಿ ಮತ್ತು ಸಾರಸ ಪಕ್ಷಿಗಳಿಗೆ ಸದ್ಗತಿ—ಅವುಗಳ ಪೂರ್ವವೃತ್ತಾಂತ—ಮಾಘಸ್ನಾನದಿಂದ ಬೇಡನಿಗೂ ಸದ್ಗತಿ.

**ಅಧ್ಯಾಯ ೨೫ (೧೦೧ ಶ್ಲೋ.)**

ಶಾಂಡಿಲ್ಯ ತತ್ತ್ವ—ಗೀತೆಯ ೧೦ ಮತ್ತು ೧೧ನೆಯ ಅಧ್ಯಾಯಗಳ ಪಾರಾಯಣದಿಂದ ವಿಶೇಷ ಫಲ—ವಿಷ್ಣುಸಹಸ್ರನಾಮ ಪಾಠದ ಫಲ—ಭಾಗವತ ಪಠಣದ ಫಲ—ಗಜೇಂದ್ರಮೋಕ್ಷ ಪಾಠದ ಫಲ—ಮಾಧವಸ್ತವರಾಜ—ಫಲಶ್ರುತಿ.

**ಅಧ್ಯಾಯ ೨೬ (೧೩೯ ಶ್ಲೋ.)**

ಶಾಂಡಿಲ್ಯ ತತ್ತ್ವ—ವಸಿಷ್ಠರ ಕಥೆ—ಹರಿಸರ್ವೋತ್ತಮತ್ವ ಮತ್ತು ವಾಯು ಜೀವೋತ್ತಮತ್ವಗಳ ನಿರೂಪಣೆ—ವಸಿಷ್ಠರ ಮೇಲೆ ವಿಶ್ವಾಮಿತ್ರರ ಅಸೂಯೆ—

ವಸಿಷ್ಠರ ಹಿರಿಮೆಯನ್ನು ಬ್ರಹ್ಮದೇವರು ನಿರೂಪಿಸಿದ ಬಗೆ—ಕಲ್ಮಾಷಪಾದರಾಜನ ಕಥೆ—ವಸಿಷ್ಠರ ಶತಪುತ್ರರ ಹನನ—ವಸಿಷ್ಠರ ವ್ಯಥೆ—ಮಾಧವಸ್ತವರಾಜದ ಜಪದಿಂದ ಶಕ್ತಿಪತ್ನಿಯ ಗರ್ಭರಕ್ಷಣೆ—ಪರಾಶರರ ಜನನ—ವ್ಯಾಸಾವತಾರ.

### ಅಧ್ಯಾಯ ೨೭ (೧೧೯ ಶ್ಲೋ.)

ಶಾಂಡಿಲ್ಯ ತತ್ವ—ಬ್ರಹ್ಮಹತ್ಯೆಯು ವಿಶ್ವಾಮಿತ್ರರನ್ನು ಆಕ್ರಮಿಸಿದ್ದು—ಅದರ ಪರಿಹಾರಕ್ಕೆ ವಿಶ್ವಾಮಿತ್ರರ ಪರಿಪರಿ ಪ್ರಯತ್ನ—ವಿಶ್ವಾಮಿತ್ರಕೃತ ಶಿವಸ್ತುತಿ—ಮಾಘದಲ್ಲಿ ಗಾಯತ್ರಿಯನ್ನು ಜಪಿಸಲು ವಿಶ್ವಾಮಿತ್ರರಿಗೆ ಅಶರೀರವಾಣಿಯ ಆದೇಶ—ಗಾಯತ್ರಿಯ ಜಪದಿಂದ ವಿಶ್ವಾಮಿತ್ರರ ಬ್ರಹ್ಮಹತ್ಯಾ ನಿವೃತ್ತಿ—ಊರ್ವಶಿಯಿಂದ ವಿಶ್ವಾಮಿತ್ರರ ತಪೋಭಂಗ—ಮಾಘಸ್ನಾನದಿಂದ ವಿಶ್ವಾಮಿತ್ರರ ಉದ್ಧಾರ.

### ಅಧ್ಯಾಯ ೨೮ (೧೫೪ ಶ್ಲೋ.)

ಶಾಂಡಿಲ್ಯ ತತ್ವ—ಮಾಘಮಾಹಾತ್ಮ್ಯ ಮುಂದುವರೆದದ್ದು—ಸ್ನಾನ, ದಾನ, ಶ್ರಾದ್ಧ, ಬ್ರಾಹ್ಮಣ ಭೋಜನ, ದೀಪದಾನ, ಗೋದಾನ, ಕ್ಷೀರಾಭಿಷೇಕ, ಸಹಸ್ರನಾಮ ಪಠಣ, ಧೂಪ, ಬಾಗಿನ, ಕಂಚಿನ ಪಾತ್ರೆಯ ದಾನ, ಅಶ್ವದಾನ, ಪಂಚಗವ್ಯದಿಂದ ಅಭಿಷೇಕ ಮೊದಲಾದವುಗಳ ಫಲವಿಶೇಷ—ಮಾಘ ಶುಕ್ಲ ತ್ರಯೋದಶಿಯಂದು ಮರದ ಬಾಗಿನದ ಫಲವಿಶೇಷ—ಚಂದ್ರ ತಾರೆಯರ ಕಥೆ—ಬುಧನ ಉತ್ಪತ್ತಿ—ಮಾಘಸ್ನಾನದಿಂದ ಬುಧ ತಾರೆಯರ ಪರಿಶುದ್ಧಿ.

### ಅಧ್ಯಾಯ ೨೯ (೭೯ ಶ್ಲೋ.)

ಧರ್ಮರಾಜನೆಂಬ ವೈಶ್ಯನ ಕಥೆ—ವಿಹ್ವಲ ಮತ್ತು ಶುಚಿವ್ರತೆಯರ ಕಥೆ—ಲಕ್ಷವರ್ತೀ ವ್ರತದ ಮಹಿಮೆ—ಪತಿವ್ರತೆಯ ಪ್ರಭಾವದಿಂದ ಸೂರ್ಯೋದಯಕ್ಕೆ ಅಡ್ಡಿ—ಮಾಘಸ್ನಾನದ ಫಲದಿಂದ ಸಕಲರಿಗೂ ಕಲ್ಯಾಣ.

### ಅಧ್ಯಾಯ ೩೦ (೭೪ ಶ್ಲೋ.)

ಶಾಂಡಿಲ್ಯ ತತ್ವ—ವಸಿಷ್ಠರಿಗೆ ನರಮಾಂಸವಿತ್ತಿದ್ದ ರಾಕ್ಷಸರ ವೃತ್ತಾಂತ—ಅವನು ವಸಿಷ್ಠರನ್ನು ಶರಣುಹೊಕ್ಕದ್ದು—ಶಿವನ ಅನುಗ್ರಹದಿಂದ ಅವನು ಬಾಣಾಸುರನಾಗಿ ಜನಿಸಿದ್ದು—ಬಾಣನಲ್ಲಿ ಬಾಣನೆಂಬ ಅಸುರನ ಆವೇಶ—ವಸಿಷ್ಠರು ನೀಡಿದ ಮಾಘಸ್ನಾನದ ಫಲದಿಂದ ಕಲ್ಮಾಷಪಾದರಾಜನ ರಾಕ್ಷಸಜನ್ಮದ ಪರಿಹಾರ—ಶಾಂಡಿಲ್ಯ ತತ್ವದ ಉಪಸಂಹಾರ—ಮಾಘಮಾಸ ಮಾಹಾತ್ಮ್ಯದ ಫಲಶ್ರುತಿ—ಪರಿಸಮಾಪ್ತಿ.

ಇದರಲ್ಲಿ ಒಟ್ಟು ಮೂವತ್ತು ಅಧ್ಯಾಯಗಳಿದ್ದು, ಅವುಗಳಲ್ಲಿ ೧೬ ರಿಂದ ೩೦ ಅಧ್ಯಾಯಗಳು ಶಾಂಡಿಲ್ಯ ತತ್ತ್ವವೆಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಆ ಭಾಗದಲ್ಲಿ ತತ್ತ್ವಸಂಖ್ಯಾನ, ತತ್ತ್ವವಿವೇಕ, ದ್ವಾದಶಸ್ತೋತ್ರ, ಬ್ರಹ್ಮಸೂತ್ರಭಾಷ್ಯ ಮೊದಲಾದ ಸರ್ವಮೂಲಗ್ರಂಥಗಳಲ್ಲಿರುವ ಅನೇಕ ಪ್ರಮೇಯಗಳು ಅತ್ಯಂತ ಸ್ಫುಟವಾಗಿ ಸಾಕಷ್ಟು ವಿಸ್ತಾರವಾಗಿ ನಿರೂಪಿತವಾಗಿದ್ದು, ಅವೆಲ್ಲ ಜಿಜ್ಞಾಸುಗಳಿಗೆ ತತ್ತ್ವದಾರ್ಢ್ಯಕ್ಕೆ ತುಂಬಾ ಉಪಯುಕ್ತವಾಗಿವೆ. ಇದರಲ್ಲೂ ಅಧ್ಯಾಯ ೧೫ರ ೪೩ನೇ ಶ್ಲೋಕದಿಂದ ೧೯ನೇ ಅಧ್ಯಾಯದ ಮುಕ್ತಾಯದವರೆಗಿನ ಭಾಗ ತುಂಬಾ ಮುಖ್ಯ. ಈ ಭಾಗಕ್ಕೆ ಕೃಷ್ಣದೇವಾರ್ಯರ ಶಿಷ್ಯರಾದ ನರಸಿಂಹಾಚಾರ್ಯ, ಸತ್ಯಾನಂದ ಪುತ್ರ ಕೋನೇರಿಯಾಚಾರ್ಯ ಶಿಷ್ಯ ನರಸಿಂಹಾಚಾರ್ಯ ಮತ್ತು ಶ್ರೀರಾಮಚಂದ್ರತೋಟರ ಶಿಷ್ಯರಾದ ಆತ್ರೇಯಗೋತ್ರದವರೊಬ್ಬರು (ತತ್ತ್ವ ಮಂಜರೀ) ಸಂಸ್ಕೃತ ವ್ಯಾಖ್ಯಾನ ರಚಿಸಿದ್ದು ಅವು ನನ್ನ ಸಂಗ್ರಹ (ಜಯತೀರ್ಥ ಸಂಸ್ಕೃತ ಹಸ್ತಲಿಖಿತ ಗ್ರಂಥಾಲಯ) ದಲ್ಲಿವೆ.

---

ಶ್ರೀಮದಾಚಾರ್ಯರ ಅವತಾರಕಾಲ, ಸಂನ್ಯಾಸಕಾಲ ಮೊದಲಾದವುಗಳ ಬಗ್ಗೆ ಖಚಿತ ಮಾಹಿತಿಯನ್ನೊದಗಿಸುವ 'ಅಣುಮಧ್ವಚರಿತ' ಎಂಬ ಕೃತಿಯು ಮೂಲತಃ ವಾಯುಪುರಾಣದ್ದೆಂದು ನನ್ನ ಸಂಗ್ರಹದಲ್ಲಿನ ಅದರ ಅನೇಕ ಹಸ್ತಪ್ರತಿಗಳಿಂದ ಸ್ಫುಟಪಡುತ್ತದೆ.

ದ್ವಾಪರೇ ಭೀಮಸೇನೇನ ಹತೇಷು ಸುರಶತ್ರುಷು ।
ಮಣಿಮಾನವನೌ ಜಾತೋ ಯತಿರೂಪಃ ಕಲೌ ಯುಗೇ।
ಮಾಯಾಮತಂ ವಿನಿರ್ಮಾಯ ತತಃ ಸರ್ವಾನಮೋಹಯತ್ ॥ ೧ ॥
ತದಾಽಽಜ್ಞಪ್ತೋ ಭಗವತಾ ವಾಯುಃ ಸಂಪ್ರಾರ್ಥಿತಃ ಸುರೈಃ ।
ತ್ರಿಶತಾಬ್ದೋತ್ತರ ಚತುಃಸಹಸ್ರಾಬ್ದೇಭ್ಯ ಉತ್ತರೇ ॥ ೨ ॥
ಏಕೋನಚತ್ವಾರಿಂಶಾಬ್ದೇ ವಿಲಂಬಿಪರಿವತ್ಸರೇ ।
ಆಶ್ವೀನ ಶುಕ್ಲ ದಶಮೀದಿವಸೇ ಭುವಿ ಪಾವನೇ ॥ ೩ ॥
ಪಾಜಕಾಖ್ಯೇ ಶುಚಿಕ್ಷೇತ್ರೇ ದುರ್ಗಯಾ ಚಾಭಿವೀಕ್ಷಿತೇ ।
ಜಾತೋ ಮಧ್ಯಾಹ್ನವೇಲಾಯಂ ಬುಧವಾರೇ ಮರುತ್ತನುಃ ॥ ೪ ॥
ಭೂಸುರೇಂದ್ರೋಪನೀತೋ ಯಸ್ತತ ಏಕಾದಶಾಬ್ದಕೇ ।
ಸೌಮ್ಯೇ ಜಗ್ರಾಹ ಭಗವಾಂಸ್ತುರೀಯಾಶ್ರಮಮುತ್ತಮಮ್ ॥ ೫ ॥
ತತಃ ಸಮಾಸೇ ದಶಕೇ ದಿವಸಾನಾಂ ಗತೇ ಪರಾನ್ ।
ಮಧ್ವನಾಮಾ ಜಿಗಾಯಾಯಂ ವಾದಿನೋ ವಾದಕೌಶಲೀ ॥ ೬ ॥
ಗೀತಾಭಾಷ್ಯಂ ವಿಧಾಯಾದೌ ದೃಷ್ಟ್ವಾ ಚ ಬದರೀತಟೇ ।
ವೇದವ್ಯಾಸಸ್ಯ ಚಾದೇಶಾತ್ ಸೂತ್ರಭಾಷ್ಯಮಥಾಕರೋತ್ ॥ ೭ ॥
ಪುನರ್ಗತ್ವಾ ಚ ಬದರೀಂ ವ್ಯಾಸಮಾನಮ್ಯ ಪೂರ್ಣಧೀಃ ।
ಭಾಷ್ಯಾದಿ ಸೇವಾಂ ವಿಜ್ಞಾಪ್ಯ ರೂಪ್ಯಪೀಠಮಿದಂ ಪುನಃ ॥ ೮ ॥
ಆಗತ್ಯ ಭಾರತಸ್ಯಾಥ ತಾತ್ಪರ್ಯಂ ಕರ್ಮನಿರ್ಣಯಮ್ ।
ಕೃತ್ವಾ ಚ ಚತುರೋ ಮಾಸಾನುಷಿತ್ವಾ ಕಣ್ವತೀರ್ಥಕೇ ॥ ೯ ॥
ಏಕೋನಾಶೀತಿವರ್ಷಾಣಿ ನೀತ್ವಾ ಮಾನುಷದೃಷ್ಟಿಗಃ ।
ಪಿಂಗಲಾಬ್ದೇ ಮಾಘಶುದ್ಧನವಮ್ಯಾಂ ಬದರೀಂ ಯಯೌ ॥ ೧೦ ॥

ಇದರೊಂದಿಗೆ ಶ್ರೀಮದಾಚಾರ್ಯರ ಬಗ್ಗೆ ಇನ್ನೂ ಅನೇಕ ವಿವರಗಳನ್ನು ನೀಡುವ 'ಮಧ್ಯಭಾಗ' ಎಂಬುದು ಸಹ ವಾಯುಪುರಾಣದ ಭಾಗವಾಗಿದ್ದು, ಅದರ ಅನೇಕ ಹಸ್ತಪ್ರತಿಗಳು ಉಪಲಬ್ಧವಿವೆ.

ಶ್ರೀಮದಾಚಾರ್ಯರು ಶ್ರೀವಾಯುದೇವರ ಅವತಾರವೆಂದು ನಿರೂಪಿಸುವ ವಾಯುಪುರಾಣದ ಕೆಲವು ಶ್ಲೋಕಗಳನ್ನು ಶ್ರೀವಾದಿರಾಜಸ್ವಾಮಿಗಳು ಯುಕ್ತಿ ಮಲ್ಲಿಕಾ ಗ್ರಂಥದಲ್ಲಿ ಉದಾಹರಿಸಿರುವರು.

ವಾಯೋರ್ದಿವ್ಯಾನಿ ರೂಪಾಣಿ ಪದ್ಮತ್ರಯಯುತಾನಿ ಚ ।
ತ್ರಿಕೋಟಿಮೂರ್ತಿಸಂಯುಕ್ತಸ್ತ್ರೇತಾಯಾಂ ರಾಕ್ಷಸಾಂತಕಃ ॥
ಹನೂಮಾನಿತಿ ವಿಖ್ಯಾತೋ ರಾಮಕಾರ್ಯಧುರಂಧರಃ ।
ಸ ವಾಯುರ್ಭೀಮಸೇನೋಽಭೂದ್ದ್ವಾಪರಾಂತೇ ಕುರೂದ್ವಹಃ ॥
ಕೃಷ್ಣಂ ಸಂಪೂಜಯಾಮಾಸ ಹತ್ವಾ ದುರ್ಯೋಧನಾದಿಕಾನ್ ।
ದ್ವೈಪಾಯನಸ್ಯ ಸೇವಾರ್ಥಂ ಬದರ್ಯಾಂ ತು ಕಲೌ ಯುಗೇ ॥
ವಾಯುಶ್ಚ ಯತಿರೂಪೇಣ ಕೃತ್ವಾ ದುಃಶಾಸ್ತ್ರಖಂಡನಮ್ ।
ತತಃ ಕಲಿಯುಗೇ ಪ್ರಾಪ್ತೇ ತೃತೀಯೋ ಮಧ್ವನಾಮಕಃ ॥
ಭೂರೇಖಾದಕ್ಷಿಣಾಭಾಗೇ ಮಣಿಮದ್ಗರ್ವಶಾಂತಯೇ ।
ಧಿಕ್ಕುರ್ವಂಸ್ತತ್ರಭಾಂ ಸದ್ಯೋಽವತೀರ್ಣೋಽತ್ರ ದ್ವಿಜಾನ್ವಯೇ ॥
(ಇತ್ಯಾದ್ಯಾಃ ಸೂಕ್ತಯೋ ವಾಯುಪುರಾಣಸ್ಥಾಃ ಸಹಸ್ರಶಃ ॥
ಅವತಾರತ್ರಯಂ ವಾಯೋಃ ಕಥಯಂತಿ ಮಹಾತ್ಮನಃ ॥)

—ಯುಕ್ತಿಮಲ್ಲಿಕಾ—ಫಲಸೌರಭ (೭೧೪_೭೧೯)

ಅಲ್ಲದೆ,

ವಾಯೋರಾಜ್ಞಾಂ ಪುರಸ್ಕೃತ್ಯ ಮಣಿಭದ್ರಃ ಸ ಏವ ಹಿ ।
ಮಧ್ಯಗೇಹಸ್ಯ ಭಾರ್ಯಾಯಾಂ ಪ್ರವೇಶಂ ಕೃತವಾನ್ ಪ್ರಭುಃ ॥
ನವಮಾಸಾವಸಾನೇ ತು ಸ್ವಯಂ ಗತ್ವಾ ಬಲಾತ್ಮಕಃ ।
ಬಹಿರ್ನಿಷ್ಕಾಸಯಾಮಾಸ ನ ತಂ ಜೀವಂ ತಥೈವ ಹಿ ॥
ಸ್ವಯಂ ಪ್ರವೇಶಂ ಕೃತವಾನ್ ಪ್ರಾಣದೇವೋ ಮಹಾಬಲಃ ।
ಸೋಽಪಿ ಸ್ವಾಂಶತ್ವಮಾಪನ್ನೋ ಬಲದೇವಸ್ಯ ಚಾಜ್ಞಯಾ ॥
ಕುಬೇರಭೃತ್ಯಂ ತಂ ಪ್ರಾಹುಃ" ... ... ...

ಎಂಬ ವಾಕ್ಯಗಳು ಸಹ ವಾಯುಪುರಾಣಾಂತರ್ಗತ ಎಂಬುದಾಗಿ ಅನೇಕ ಹಸ್ತಪ್ರತಿಗಳಲ್ಲಿದೆ.

ಶ್ರೀಮದಾಚಾರ್ಯರು 'ಇತಿ ವಾಯುಪ್ರೋಕ್ತೇ' ಎಂಬುದಾಗಿ ಅನೇಕಸಲ ಉದಾಹರಿಸಿರುವ ಶ್ರುತಿಯು ಈ ವಾಯುಪುರಾಣವೇ ಆಗಿರಬಹುದು.

ಮಾಸಗಳಿಗೆಲ್ಲ ವಿಷ್ಣುವಿನ ಕೇಶವಾದಿ ರೂಪಗಳೇ ನಿಯಾಮಕ. ಶಿವಾದಿ ಇತರ ದೇವತೆಗಳು ಹೀಗೆ ಮಾಸ ನಿಯಾಮಕರಾಗಿ ನಿರೂಪಿತರಾಗಿಲ್ಲ. ವಿಷ್ಣುವೇ ಕಾಲ ನಿಯಾಮಕ ಎಂಬುದು ಇದರ ಸಾರ. ಈ ರೀತಿಯಲ್ಲೂ ವಿಷ್ಣುಸರ್ವೋತ್ತಮತ್ವವೇ ಶಾಸ್ತ್ರಗಳ ಸಾರ ಎಂಬ ತತ್ತ್ವ ಮನವರಿಕೆಯಾಗುತ್ತದೆ.

ಹೀಗೆ ವೈಷ್ಣವರಿಗೆಲ್ಲ ಅತ್ಯಂತ ಉಪಯುಕ್ತವಾದ ಇದನ್ನು ಕನ್ನಡ ಅನುವಾದ ಸಮೇತ ಪ್ರಕಟಿಸುತ್ತಿರುವ ಮದರಾಸಿನ ಶ್ರೀಮಾಧ್ವಸಮಾಜವು ಇಡೀ ಮಾಧ್ವ ಸಮಾಜದ ಕೃತಜ್ಞತೆಗೆ ಪಾತ್ರವಾಗಿದೆ. ಶ್ರೀನಿವಾಸ ಕಲ್ಯಾಣವನ್ನು ಅಪೂರ್ವ ಕನ್ನಡ ಕಾವ್ಯವಾಗಿ ರಚಿಸಿದ ವಿದ್ವನ್ಮಣಿಗಳಾದ ಏರೀ ಶೇಷಾಚಾರ್ಯರ ವಂಶಕ್ಕೆ ಸೇರಿದ ಏರೀ ಸುಬ್ಬಣ್ಣಾಚಾರ್ಯರು ಇದರ ಅನುವಾದಕರು. ಅವರ ಅನುವಾದವು ಸರಳವೂ, ಸುಂದರವೂ ಆಗಿದ್ದು ಆಸಕ್ತ ಜನತೆಗೆ ತುಂಬಾ ಉಪಕಾರಕವಾಗಿದೆ. ಸುಲಭಶೈಲಿಯ ಅನುವಾದದೊಂದಿಗೆ ಸೂಕ್ತಸ್ಥಳಗಳಲ್ಲಿ ಆಯಾ ಪ್ರಮೇಯಗಳಿಗೆ ಸಂಬಂಧಿಸಿದ ವಿಶೇಷಾಂಶಗಳನ್ನು ಒದಗಿಸಿರುವುದು ಗ್ರಂಥದ ಮೌಲ್ಯವನ್ನು ಹೆಚ್ಚಿಸಿದೆ. ಹಿಂದೊಮ್ಮೆ ಇದರ ಗೂಢಕರ್ತೃಕ ಕನ್ನಡ ಅನುವಾದವೊಂದು ಬೆಳಗಾಂವ ರಾಮತತ್ವ ಪ್ರಕಾಶ ಪ್ರೆಸ್‌ನಿಂದ ಪ್ರಕಾಶವಾಗಿದ್ದರೂ, ಅದು ದೇವನಾಗರಿಯ ಲಿಪಿಯಲ್ಲಿದ್ದಿತು. ಪ್ರಕೃತ ಅನುವಾದವು ಆಧುನಿಕ ಶೈಲಿಯಲ್ಲಿದ್ದು ಹೆಚ್ಚು ಜನಾ ದರಣೀಯವಿರುವುದರಲ್ಲಿ ಸಂಶಯವಿಲ್ಲ.

ಒಟ್ಟಿನಲ್ಲಿ ಮಾಸಮಾಹಾತ್ಮ್ಯವೊಂದು ಇಷ್ಟು ಅಚ್ಚುಕಟ್ಟಾಗಿ ಅನುವಾದ ಸಮೇತ ಪ್ರಕಟವಾಗುತ್ತಿರುವುದು ಇದೇ ಮೊದಲು ಎಂದು ಹೇಳಬಹುದು. ಅನುವಾದಕರಾದ ಶ್ರೀ ಏರೀ ಸುಬ್ಬಣ್ಣಾಚಾರ್ಯರಿಂದ ಈ ಬಗೆಯ ಉಪಯುಕ್ತ ಕೃತಿಗಳು ಇನ್ನು ಹೆಚ್ಚಿನ ಸಂಚಿಕೆಯಲ್ಲಿ ಮಾಧ್ವಸಮಾಜಕ್ಕೆ ದೊರೆಯಲಿ ಎಂದು ಆಶಿಸುತ್ತೇನೆ.

—ವ್ಯಾಸನಕೆರೆ ಪ್ರಭಂಜನಾಚಾರ್ಯ

|| श्रीः ||

|| श्री गुरुराजो विजयते ||

ಶ್ರೀವಾಯುಪುರಾಣಾಂತರ್ಗತ

# ಶ್ರೀ ಮಾಘಮಾಸ ಮಾಹಾತ್ಮ್ಯೆ

(ದ್ವಿತೀಯ ಭಾಗ)

ನರಸಿಂಹೋಽಖಿಲಾಜ್ಞಾನಮತಧ್ವಾಂತದಿವಾಕರಃ |
ಜಯತ್ಯಮಿತಸದ್‌ಜ್ಞಾನಸುಖಶಕ್ತಿಪಯೋನಿಧಿಃ ||
ಆಚಾರ್ಯಃ ಪವನೋಽಸ್ಮಾಕಂ ಆಚಾರ್ಯಾಣೀ ಚ ಭಾರತೀ |
ದೇವೋ ನಾರಾಯಣಸ್ಸಾಕ್ಷಾತ್ ದೇವೀ ಮಂಗಳದೇವತಾ ||

## ಅಧ್ಯಾಯ ೧೭

**ಶಾಂಡಿಲ್ಯ ಉವಾಚ :**

**ಏವಂ ಭೂತ್ವಾ ಕರ್ಮಯೋಗೀ ಮಹಾತ್ಮಾ**
**ಜ್ಞಾನಂ ಪಶ್ಚಾತ್ ಅಭ್ಯಸೇಚ್ಛುದ್ಧಬುದ್ಧ್ಯಾ |**
**ತಚ್ಚ ಜ್ಞಾನಂ ಲಭ್ಯತೇ ಸಾಧುಸಂಗಾತ್**
**ತೇ ಸಾಧವಃ ಸಮಚಿತ್ತಾಃ ಮಹಾಂತಃ || ೧ ||**

ಶಾಂಡಿಲ್ಯರು ಹೇಳಲಾರಂಭಿಸಿದರು :

ಹೀಗೆ ಕರ್ಮೋಪಾಯದಿಂದ ಅಂತಃಕರಣವನ್ನು ಶುದ್ಧಗೊಳಿಸಿ ನಂತರ ಯಥಾರ್ಥ ತತ್ವಜ್ಞಾನವನ್ನು ಸಂಪಾದಿಸಲು ಪ್ರಯತ್ನಿಸಬೇಕು. ಅಂತಹ ತತ್ವ-ನಿಶ್ಚಯ ಜ್ಞಾನವು ಸಾಧು-ಸಜ್ಜನರ ಸಂಗದಿಂದ ಲಭಿಸುತ್ತದೆ. ಸಾಧುಗಳು ಸುಖ-ದುಃಖಗಳನ್ನೂ, ಮಾನಾಪಮಾನಗಳನ್ನೂ ಒಂದೇ ಸಮವೆಂದು ತಿಳಿಯುತ್ತಾರೆ.

**ಇಂದ್ರಿಯಾಣಿ ನಿಯಮ್ಯಾಥ ಸರ್ವಕಾಮೇಷು ನಿಸ್ಪೃಹಃ |**
**ಶ್ರದ್ಧಾವಾನನಸೂಯಶ್ಚ ಭಕ್ತಿಮಾನಪ್ಯಧೋಕ್ಷಜೇ || ೨ ||**

ಸಾಧು ಸಂಗ ದೊರಕಿದ ನಂತರ ಇಂದ್ರಿಯನಿಗ್ರಹ ಪಡೆದು, ಸಮಸ್ತ ಐಹಿಕ ವಿಷಯಕಾಮನೆಗಳಲ್ಲಿ ಇಚ್ಛೆಯನ್ನು ತೊರೆದು, ಸತ್ಕರ್ಮಾನುಷ್ಠಾನದಲ್ಲಿ ಶ್ರದ್ಧೆ

ಯನ್ನು ಹೊಂದಿ, ಯಾರಲ್ಲಿಯೂ ದ್ವೇಷಾಸೂಯೆಗಳನ್ನು ತಾಳದೆ ಶ್ರೀಹರಿಯಲ್ಲಿ ಭಕ್ತಿಯನ್ನು ಮಾಡಲು ನಿರತನಾಗಬೇಕು.

**ಜಿಜ್ಞಾಸಯೇತ್ತತೋ ವಿಷ್ಣುಂ ಸರ್ವಧರ್ಮಪರಾಯಣಃ ।**
**ಗುಣಪೂರ್ಣಂ ದೋಷದೂರಮುಪಾಸ್ಯಂ ಪ್ರಾಪ್ಯಮಂಜಸಾ ॥ ೩ ॥**

ಶಾಸ್ತ್ರೋಕ್ತವಾದ ಧರ್ಮಮಾರ್ಗದಲ್ಲಿದ್ದು, ಗುಣಪೂರ್ಣನಾಗಿಯೂ, ಸಮಸ್ತ ದೋಷವರ್ಜಿತನೂ, ಉಪಾಸನೆಯಿಂದ ಮಾತ್ರವೇ ಲಭ್ಯನಾಗುವ, ಸರ್ವತ್ರ ವ್ಯಾಪ್ತನಾದ ವಿಷ್ಣುವನ್ನು ಶಾಸ್ತ್ರಗಳ ಮೂಲಕ ವಿಚಾರಿಸಲು ಉದ್ಯುಕ್ತನಾಗಬೇಕು.

[ಬ್ರಹ್ಮಸೂತ್ರಭಾಷ್ಯದ "ಜಿಜ್ಞಾಸಾಧಿಕರಣ"ದಲ್ಲಿ ಜಿಜ್ಞಾಸೆಯನ್ನು ಏತಕ್ಕೆ ಮಾಡಬೇಕು, ಅಧಿಕಾರಿಗಳು ಯಾರು, ಮಾಡುವುದರಿಂದ ದೊರೆಯುವ ಫಲ, ಬ್ರಹ್ಮಶಬ್ದದಿಂದ ಯಾವ ದೇವತೆಯು ಹೇಳಲ್ಪಟ್ಟಿದೆ ಮುಂತಾದ ಹಲವಾರು ವಿಷಯಗಳು ನಿರೂಪಿತವಾಗಿವೆ. ಭಾಗವತದಲ್ಲಿಯೂ ಸಹ ಜಿಜ್ಞಾಸೆಯ ಅವಶ್ಯಕತೆಯು ಒತ್ತಿ ಹೇಳಲ್ಪಟ್ಟಿದೆ:

**ತಸ್ಮಾಜ್ಜಿಜ್ಞಾಸಯಾತ್ಮಾನಮಾತ್ಮಸ್ಥಂ ಕೇವಲಂ ಪರಮ್ ।**
**ಸಂಗಮ್ಯ ನಿರಸೇದಸ್ಯ ವಸ್ತುಬುದ್ಧಿಂ ಯಥಾಕ್ರಮಮ್ ॥** —ಭಾಗವತ

ಸ್ವಾತಂತ್ರ್ಯಾದಿ ಗುಣಗಳನ್ನು ತನ್ನಲ್ಲಿ ಆರೋಪಣೆ ಮಾಡಿಕೊಳ್ಳದೇ ಶ್ರವಣ, ಮನನ, ನಿಧಿಧ್ಯಾಸಾತ್ಮಕವಾದ ವಿಚಾರಮಾಡಿ ಅಂತರ್ಯಾಮಿಯಾದ, ದುಃಖಾದಿ ದೋಷರಹಿತನಾದ, ಜಗದ್ವಿಲಕ್ಷಣನಾದ, ಸರ್ವೋತ್ತಮನಾದ ಶ್ರೀ ಪರಬ್ರಹ್ಮನನ್ನು ತನ್ನ ಸಾಮರ್ಥ್ಯಕ್ಕೆ ಅನುಸಾರವಾಗಿ ತಿಳಿದು, ಇತರ ದೇವತೆಗಳ ತಾರತಮ್ಯವನ್ನು ತಿಳಿದು ತನ್ನಲ್ಲಿರುವ ಸ್ವಯಂಶಕ್ತನೆಂಬ ಭಾವನೆಯನ್ನು ಬಿಡಬೇಕು.]

**ಶ್ರವಣಂ ಮನನಂ ಧ್ಯಾನಂ ಜಿಜ್ಞಾಸೇತ್ಯಭಿಧೀಯತೇ ।**
**ಆದೌ ಶಾಸ್ತ್ರಾತ್ ಜ್ಞೇಯ ವಿಷ್ಣೋ ಮಹಾತ್ಮಾ**
**ನಾನ್ಯಾನ್ಮಾನಾದ್ವೇದಗನ್ಯೋ ಜನ್ಯೈಸ್ತ್ರೈಃ ॥ ೪ ॥**

ಪರಮಾತ್ಮನ ಮಹಾಮಹಿಮೆಗಳನ್ನು ಗುರುಮುಖೇನ ಆದರದಿಂದ ಶ್ರವಣ ಮಾಡುವುದು, ಶ್ರವಣಮಾಡಿದುದನ್ನು ಮನಸ್ಸಿನಲ್ಲಿ ಚೆನ್ನಾಗಿ ಆಲೋಚಿಸಿ ಸಂಶಯಗಳನ್ನು ಪರಿಹರಿಸಿಕೊಳ್ಳುವುದು, ಮತ್ತು ಪರಮಾತ್ಮನನ್ನು ಯಥಾಯೋಗ್ಯವಾಗಿ ಧ್ಯಾನಮಾಡುವುದು—ಈ ಕ್ರಮಕ್ಕೆ "ಜಿಜ್ಞಾಸಾ" ಎಂದು ಹೆಸರು. ಮಹಾಮಹಿಮನಾದ ಶ್ರೀಹರಿಯು ವೇದಾದಿ ಸಚ್ಛಾಸ್ತ್ರಗಳಿಂದಲೇ ತಿಳಿಯಲ್ಪಡಬೇಕಾದವನೇ ಹೊರತು ಬೇರೆ ಮಾರ್ಗಗಳಿಂದ ಅಲ್ಲ.

[**ವಿಶೇಷಾಂಶ:** ಶ್ರೀವಿಷ್ಣುವನ್ನು ತಿಳಿಯಬೇಕಾದರೆ ಶಾಸ್ತ್ರಗಳಿಗೇ ಶರಣು ಹೋಗಬೇಕು. ಪ್ರತ್ಯಕ್ಷಕ್ಕೆ ಗೋಚರನಲ್ಲ. ತರ್ಕದಿಂದಲೂ ತಿಳಿಯಲು ಸಾಧ್ಯವಿಲ್ಲ.

ಶಾಸ್ತ್ರವೆಂದರೆ ಏನು ? ತರ್ಕದಿಂದ ಆಗುವ ಪರಿಣಾಮವೇನು ? ಭಗವಂತನೇ ಇಲ್ಲ ವೆಂದೂ, ವೇದಗಳೆಲ್ಲ ಅಪ್ರಮಾಣವೆಂದೂ ಹೇಳುವ ನಾಸ್ತಿಕವಾದವು ಹೇಗೆ ಹೇಯ ವಾದುದು—ಮುಂತಾದ ವಿವರಗಳು ಬ್ರಹ್ಮಸೂತ್ರಭಾಷ್ಯದ "ಶಾಸ್ತ್ರಯೋನಿತ್ವಾಧಿ-ಕರಣ"ದಲ್ಲಿ ಹೇಳಲ್ಪಟ್ಟಿವೆ.]

**ಯಥಾ ವೇದಾನನುವರ್ತಂತಿ ಯಾನಿ**
**ಶಾಸ್ತ್ರೈರ್ಮಾನ್ಯೈರ್ಜ್ಞಾಯತೇ ವೇದವೇದ್ಯಃ ।**
**ನಾಕ್ಷಾದೇನಂ ನಾನುಮಾನಾಚ್ಚ ತರ್ಕಾ-**
**ನ್ನ ವೈ ಸ್ಮೃತೇರ್ನಾಪಿ ಮಾನಾಂತರಾಚ್ಚ ॥ ೫ ॥**

ವೇದಗಳಿಂದಲೂ, ವೇದಾನುಸಾರಿತ್ವವುಳ್ಳ ಇತರ ಪೌರುಷೇಯ ಸಚ್ಛಾಸ್ತ್ರ ಗಳಿಂದಲೂ ಶ್ರೀಹರಿಯನ್ನು ತಿಳಿಯಬೇಕು. ಪ್ರತ್ಯಕ್ಷದಿಂದಾಗಲೀ, ಅನುಮಾನ ದಿಂದಲಾಗಲೀ, ವೇದಾನುಸಾರಿತ್ವವಿಲ್ಲದ ಸ್ಮೃತಿಗಳಿಂದಲೇ ಆಗಲಿ, ಅಥವಾ ಅನ್ಯ ಪ್ರಮಾಣದಿಂದಲಾಗಲಿ ಪರಬ್ರಹ್ಮನನ್ನು ತಿಳಿಯಲು ಸಾಧ್ಯವಿಲ್ಲ.

**ಅಲಂ ಭವೇಜ್ಜೀವ ಏಷಃ ಕದಾಚಿತ್**
**ಜ್ಞಾನಾಚ್ಚೈನಂ ವೇದಯಂತೀತಿ ವೇದಾಃ ।**
**ಉಪಕ್ರಮಾದಿಲಿಂಗೈಶ್ಚ ತೇsಪಿ ಸಮ್ಯಗ್ವಿಚಾರಿತಾಃ ॥ ೬ ॥**
**ಸ್ವಾರ್ಥಂ ತೇ ಜ್ಞಾಪಯಂತ್ಯದ್ಧಾ ತಾನ್ಯೇತಾನಿ ವಿಬೋಧಯ ।**
**ಉಪಕ್ರಮೋಪಸಂಹಾರೌ ಯುಕ್ತಿರಭ್ಯಾಸ ಏವ ಚ ॥ ೭ ॥**
**ಅಪೂರ್ವತಾ ಸಮಾಖ್ಯಾ ಚ ಸ್ಥಾನಂ ಪ್ರಕರಣಂ ತಥಾ ।**
**ಫಲಂ ಚೈತೈರ್ಮಹಾವಾಕ್ಯಾತ್ತಾತ್ಪರ್ಯಂ ಜ್ಞಾಯತೇ ಬುಧೈಃ ॥**

ಅಧಿಕಾರಿ ಜೀವನು ಪರಬ್ರಹ್ಮನನ್ನು ತಿಳಿದುಕೊಳ್ಳಲು ಸಮರ್ಥನು. ಪರಮಾತ್ಮನ ಸ್ವರೂಪವನ್ನು ತಿಳಿಸಿಕೊಡುವ ಕಾರಣದಿಂದ ಆಗಮಗಳಿಗೆ "ವೇದ" ಎಂದು ಹೆಸರು. ವೇದವಾಕ್ಯಗಳು ಸಾಮಾನ್ಯವಾಗಿ ಪರಮಾತ್ಮನ ಗುಣಪರಿ-ಪೂರ್ಣತೆ, ಸೃಷ್ಟ್ಯಾದಿ ಅಷ್ಟಕರ್ತೃತ್ವಗಳನ್ನು ಸ್ಪಷ್ಟವಾಗಿ ತಿಳಿಸುತ್ತವೆ. ಕೇವಲ ಐದಾರು ವಾಕ್ಯಗಳು ಆಪಾತತಃ ಬೇರೆ ಅರ್ಥಗಳನ್ನು ಹೇಳುವಂತೆ ತೋರುತ್ತವೆ. ಇಂತಹ "ಮಹಾವಾಕ್ಯಗಳನ್ನು" ಉಪಕ್ರಮಾದಿ ಲಿಂಗಗಳಿಂದ ಸರಿಯಾಗಿ ವಿಮರ್ಶೆ ಮಾಡಿದರೆ ಅವುಗಳ ನಿಜವಾದ ಅರ್ಥವು ತಿಳಿಯುತ್ತದೆ. ಆ ಲಿಂಗಗಳು ಯಾವು ವೆಂದರೆ—ಉಪಕ್ರಮ, ಉಪಸಂಹಾರ, ಯುಕ್ತಿ, ಅಭ್ಯಾಸ, ಅಪೂರ್ವತಾ, ಸಮಾಖ್ಯಾ, ಸ್ಥಾನ, ಪ್ರಕರಣ ಮತ್ತು ಫಲ. ಇವುಗಳ ಸಹಾಯದಿಂದ ಜ್ಞಾನಿಗಳು "ಮಹಾವಾಕ್ಯಗಳ" ಅರ್ಥವನ್ನು ಸರಿಯಾಗಿ ಅರಿಯುತ್ತಾರೆ.

*

**ಜಿಜ್ಞಾಸ್ಯೋ ಹರಿರೇವಾನ್ಯೋ ನ ಜಿಜ್ಞಾಸ್ಯ ಉದಾಹೃತಃ ।**
**ಅಸ್ವಾತಂತ್ರ್ಯಾತ್ ಅಜ್ಞಾನಸಾಕಾತ್ ದುಷ್ಟತ್ವಾತ್ ಅಲ್ಪಶಕ್ತಿತಃ ॥ ೯ ॥**

ವಿಷ್ಣುವನ್ನೇ ಜಿಜ್ಞಾಸೆ ಮಾಡಬೇಕು. ಅನ್ಯದೇವತೆಗಳನ್ನಲ್ಲ. ಅನ್ಯ-ದೇವತೆಗಳು ಅಸ್ವತಂತ್ರರು, ಪರಿಪೂರ್ಣಜ್ಞಾನ ಇಲ್ಲದವರು. ಅಲ್ಪಶಕ್ತಿಯುಳ್ಳವರು.

(“ ವಿಷ್ಣುರೇವ ವಿಜಿಜ್ಞಾಸ್ಯಃ ” ಎಂಬ ಅಣುಭಾಷ್ಯದ ವಾಕ್ಯವು ಇದೇ ಅರ್ಥವನ್ನು ಸ್ಪಷ್ಟಪಡಿಸುತ್ತದೆ.)

**ಯಾನ್ಯನ್ಯದೇವಜಿಜ್ಞಾಸ್ಯೋ ಪರಾಣ್ಯತಿಪದಾನಿ ತು ।**
**ತತ್ರಸ್ಥೈರ್ಬಲವಲ್ಲಿಂಗೈಃ ಜ್ಞೇಯೋ ವಿಷ್ಣೌ ಸಮನ್ವಯಃ ॥ ೧೦ ॥**

ಅನ್ಯದೇವತೆಗಳ ಜಿಜ್ಞಾಸೆಗೆ ಇರುವ ವಿಷಯಗಳನ್ನೂ, ಆ ದೇವತೆಗಳ ಯೋಗ್ಯತೆಗೆ ಮೀರಿದ ಗುಣೋತ್ಕರ್ಷತೆಯನ್ನೂ, ಆಯಾ ಶಾಸ್ತ್ರವಾಕ್ಯಗಳಲ್ಲಿನ ಬಲವತ್ತಾದ ಲಿಂಗಗಳಿಂದ ವಿಷ್ಣುವಿನಲ್ಲಿಯೇ ಸಮನ್ವಯ ಮಾಡಬೇಕು.

**ಸ ಏವ ಮುಖ್ಯತಃ ಶಬ್ದೈರ್ವಾಚ್ಯ ಏಕೋ ಜನಾರ್ದನಃ ।**

ಸರ್ವ ಶಬ್ದಗಳಿಂದಲೂ ಮುಖ್ಯತಃ ವಾಚ್ಯನಾಗಿರುವವನು ವಿಷ್ಣುವೇ.
(ನಾಮಾನಿ ಸರ್ವಾಣಿ ಯಮಾವಿಶಂತಿ ತಂ ವೈ ವಿಷ್ಣುಂ ಪರಮಮುದಾಹರಂತೀತಿ ಭಾಲ್ಲವೇಯ ಶ್ರುತಿಃ — ಭಾಷ್ಯೋದಾಹೃತ — ಸಕಲ-ಅಶೇಷ ಲೌಕಿಕ ವೈದಿಕ — ಶಬ್ದಗಳೂ ಯಾರನ್ನು ಮುಖ್ಯವೃತ್ತಿಯಿಂದ ಹೇಳುತ್ತವೆಯೋ ಅಂತಹ ಸರ್ವೋ-ತ್ತಮನು ವಿಷ್ಣುವೇ—ಹೀಗೆಂದು ಭಾಲ್ಲವೇಯ ಶ್ರುತಿಯು ಹೇಳುತ್ತದೆ).

**ಮುಖ್ಯಯಾ ಪರಯಾ ವೃತ್ತ್ಯಾ ಶಬ್ದಾನಾಂ ಬಹುಧಾತ್ಮನಾಂ ॥ ೧೧ ॥**
**ವಾಚಕತ್ವಂ ಹರೇರೇವ ಸ ಚ ಶಬ್ದಸಮನ್ವಯಃ ।**
**ಕೃತೇ ಸಮನ್ವಯೇಽಪ್ಯೇವಂ ನಾನ್ಯೋ ಜಿಜ್ಞಾಸ್ಯ ಇಷ್ಯತೇ ॥ ೧೨ ॥**

ಎಲ್ಲ ಶಬ್ದಗಳೂ ಪರಮ ಮುಖ್ಯವೃತ್ತಿಯಿಂದ ಶ್ರೀಹರಿಯನ್ನೇ ಹೇಳುತ್ತವೆ ಎಂಬುದಾಗಿ ಶಬ್ದಗಳ ಅರ್ಥಗಳನ್ನು ಶ್ರೀಹರಿಯಲ್ಲಿ ಯೋಜಿಸುವುದಕ್ಕೆ “ಸಮನ್ವಯ” ಎಂದು ಹೆಸರು. ಹೀಗೆ ಸಮನ್ವಯ ಮಾಡುವುದರಿಂದ ಶ್ರೀಹರಿಯೇ ಜಿಜ್ಞಾಸ್ಯನು, ಅನ್ಯರಲ್ಲ ಎಂಬುದಾಗಿ ತಿಳಿದುಬರುತ್ತದೆ.

**ಸಮಸ್ತನಾಮಧಾ ವಿಷ್ಣುಃ ಸರ್ವದೋಷವಿವರ್ಜಿತಃ ।**
**ಯತ್ ಪ್ರವೃತ್ತೇರ್ನಿಮಿತ್ತಂ ಚ ವಿಷ್ಣೋರೇವ ಹಿ ಯುಜ್ಯತೇ ॥ ೧೩ ॥**

ಸಮಸ್ತನಾಮಗಳಿಂದ ಕರೆಸಿಕೊಳ್ಳಲ್ಪಡುವವನೂ, ಸಮಸ್ತದೋಷದೂರನೂ, ಶಬ್ದಪ್ರವೃತ್ತಿಗೆ ಮುಖ್ಯ ಕಾರಣನೂ ವಿಷ್ಣುವೇ ಎಂಬುದು ಯುಕ್ತವು.

**ಅತಃ ಸರ್ವಾಣಿ ನಾಮಾನಿ ವಿಶಂತ್ಯೇನಂ ಗುಣಾಕರಮ್ ।**
**ಸಮನ್ವಯಾತ್ತತಾ ಸಮ್ಯಗ್ವಿಷ್ಣೋಶ್ಚ ಗುಣಪೂರ್ಣತಾ ॥ ೧೪ ॥**

ಎಲ್ಲ ಶಬ್ದಗಳೂ ಉಪಕ್ರಮಾದಿ ಲಿಂಗಗಳಿಂದ ಸಮನ್ವಯ ಮಾಡಲು ಸಮಸ್ತ ಶುಭ ಗುಣಗಳಿಗೆ ಆಶ್ರಯನಾದ ವಿಷ್ಣುವನ್ನೇ ಹೇಳುವುದರಿಂದ ಸಮಸ್ತ ಗುಣಗಳಿಂದ ಪರಿಪೂರ್ಣನಾದವನು ಶ್ರೀವಿಷ್ಣುವೇ ಎಂಬುದು ಸಿದ್ಧವಾಗುತ್ತದೆ.

**ಯಥಾಧಿಕಾರಂ ಜೀವೈಸ್ತು ಜಿಜ್ಞಾಸ್ಯಂತೇ ತೇsಧಿಕಾರಿಣಃ ।**
**ಜ್ಞೇಯೋ ಬಹುವಿಧಾ ತತ್ರ ವೇದಜ್ಞೋ ಗತಸಂಶಯಃ ॥ ೧೫ ॥**
**ಶಾಂತೋ ದಾಂತೋ ನಿಸ್ಪೃಹಶ್ಚ ದೃಢಭಕ್ತಿರ್ದೃಢವ್ರತಃ ।**
**ವಿಷ್ಣ್ವರ್ಥಮರ್ಥಯನ್ಮೋಕ್ಷಂ ನ ಮೋಕ್ಷಾರ್ಥೇ ವಿಭುಂ ಚ ಸಃ ॥ ೧೬ ॥**
**ಸ ಉತ್ತಮೋsಧಿಕಾರೀ ಸ್ಯಾತ್ತೇ ತು ದೇವಾ ನ ವೈ ಪರೇ ।**

ಜಿಜ್ಞಾಸೆ ಮಾಡುವ ಅಧಿಕಾರಿ ಜೀವರಲ್ಲಿ ಅಧಿಕಾರ ಇರುವ ಬಗೆ ಹೀಗೆ :— ವೇದಾರ್ಥಗಳನ್ನು ಚೆನ್ನಾಗಿ ಬಲ್ಲವನೂ, ಸಂಶಯರಹಿತನೂ, ಶಾಂತಸ್ವಭಾವದವನೂ, ಇಂದ್ರಿಯನಿಗ್ರಹ ಪಡೆದವನೂ, ವಿಷಯಗಳಲ್ಲಿ ಇಚ್ಛೆಯಿಲ್ಲದವನೂ, ಶ್ರೀವಿಷ್ಣುವಿನಲ್ಲಿ ದೃಢವಾದ ಭಕ್ತಿಯುಳ್ಳವನೂ, ನಿಯಮಗಳಲ್ಲಿ ದೀಕ್ಷೆಯುಳ್ಳವನೂ, ಶ್ರೀವಿಷ್ಣುವಿನ ಪ್ರೀತ್ಯರ್ಥಕ್ಕಾಗಿ ಮೋಕ್ಷಸುಖವನ್ನು ಸ್ವೀಕರಿಸುವವನೂ, ಮೋಕ್ಷ ಬೇಕೆಂಬ ಇಚ್ಛಾರಹಿತನೂ, ಸದಾ ವಿಷ್ಣುವಿನಲ್ಲಿಯೇ ಮನಸ್ಸನ್ನು ಇಟ್ಟಿರುವವನೂ —ಇಂತಹವರು ಉತ್ತಮ ಅಧಿಕಾರಿಗಳು; ಅವರು ಉತ್ತಮದೇವತೆಗಳೇ ವಿನಹ ಅನ್ಯರಲ್ಲ.

[**ವಿಶೇಷಾಂಶ :** ಮೇಲೆ ಹೇಳಿದ ಉತ್ತಮ ಅಧಿಕಾರಿಗಳಿಗೆ "ಏಕಾಂತ ಭಕ್ತ" ರೆಂದು ಹೆಸರು. "ಏಕಾಂತಿನಾಂ ನ ಕಸ್ಯಚಿತ್ ಅರ್ಥೋ ನಾರಾಯಣೋ ದೇವಃ"— ಏಕಾಂತ ಭಕ್ತರಿಗೆ ನಾರಾಯಣನೇ ಪುರುಷಾರ್ಥನು; ಅವರು ಇನ್ನೇನನ್ನೂ ಬಯಸುವುದಿಲ್ಲ.]

**ಯದಿ ದದ್ಯಾದ್ಭಕ್ತಿಯೋಗಫಲಂ ಮೋಕ್ಷಮಪೀಶ್ವರಃ ।**
**ಭಕ್ತಿಯೋಗಫಲತ್ವೇನ ನ ತದ್ಗೃಹ್ಣೀಯುರೇವ ತೇ ॥**
**ನೇಚ್ಛಂತಿ ಸಾಯುಜ್ಯಮಪಿ ಫಲತ್ವೇನ ಹರಿರ್ಯದಿ ।**
**ದದಾತಿ ಭಕ್ತಿಸಂತುಷ್ಟ ಆಜ್ಞಾತ್ವೇನೈವ ಗೃಹ್ಣತೇ ॥**

—ಭಾಗವತ ತಾತ್ಪರ್ಯ ನಿರ್ಣಯ

ಭಕ್ತಿಯೋಗದ ಫಲರೂಪವಾಗಿ ಶ್ರೀಹರಿಯು ಏಕಾಂತ ಭಕ್ತರಿಗೆ ಮೋಕ್ಷಫಲ ಕೊಟ್ಟರೆ ಅವರು ಅದನ್ನು ಫಲತ್ವೇನ ಸ್ವೀಕರಿಸುವುದಿಲ್ಲ, ಸಾಯುಜ್ಯ ಮೋಕ್ಷವನ್ನೂ

ಸಹ ಆ ದೃಷ್ಟಿಯಿಂದ ಸ್ವೀಕರಿಸುವುದಿಲ್ಲ; ಆದರೆ ಭಕ್ತಿಯಿಂದ ಸಂತುಷ್ಟನಾದ ಪರಮಾತ್ಮನ ಆಜ್ಞೆಯಿಂದು ಅಂತಹ ಮೋಕ್ಷವನ್ನು ಸ್ವೀಕರಿಸುತ್ತಾರೆ.

**ಏಕಾಂತಭಕ್ತಾಸ್ತೇ ಪ್ರೀತಿಮಾತ್ರೋದ್ದೇಶ್ಯಾಸ್ತಥಾ ಹರೇಃ ।**
**ಸರ್ವೇ ಚ ಸೋಮಪಾಃ ಪ್ರೋಕ್ತಾಃ ಸಭಾರ್ಯಾಸ್ತ್ರಿದಿವೌಕಸಃ ॥**

—ಸತ್ತತ್ವರತ್ನಮಾಲಾ

ಶ್ರೀಹರಿಯ ಅನುಗ್ರಹ ಮಾತ್ರವನ್ನೇ ಬಯಸುವ ಏಕಾಂತಭಕ್ತರೆಂದರೆ, ಸೋಮಪಾನಾರ್ಹರಾದ ದೇವತೆಗಳು ಮತ್ತು ಅವರ ಪತ್ನಿಯರು. ಇಂತಹ ದೇವತೆಗಳ ವಿವರಗಳು ಬ್ರಹ್ಮಸೂತ್ರಭಾಷ್ಯದ 'ಅಸಾರ್ವತ್ರಿಕಾಧರಣ'ದಲ್ಲಿ ನಿರೂಪಿಸಲ್ಪಟ್ಟಿವೆ.

ಅಧಿಕಾರಿಗಳ ಲಕ್ಷಣಗಳು ಬ್ರಹ್ಮಸೂತ್ರಭಾಷ್ಯದ "ಜಿಜ್ಞಾಸಾಧಿಕರಣ"ದಲ್ಲಿ ವಿವರಿಸಲ್ಪಟ್ಟಿವೆ.

**ಪೂರ್ವೋಕ್ತತದ್ಗುಣೋಪೇತೋ ಮೋಕ್ಷಾರ್ಥಂ ವಿಷ್ಣುಮರ್ಚಯೇತ್ ॥ ೧೭ ॥**
**ಸ ಮಧ್ಯಮೋಽಧಿಕಾರೀ ಸ್ಯಾತ್ಸೋಽಪಿ ಲೋಕೇ ಸುದುರ್ಲಭಃ ।**

ಹಿಂದೆ ಹೇಳಿದ ಗುಣಯುಕ್ತನಾಗಿ ಮೋಕ್ಷ ಬೇಕೆಂಬ ಇಚ್ಛೆಯಿಂದ ವಿಷ್ಣುವನ್ನು ಉಪಾಸನೆಮಾಡುವ ಅಧಿಕಾರಿಯು ಮಧ್ಯಮನೆಂದು ಹೇಳಲ್ಪಡುತ್ತಾನೆ. ಇಂತಹ ಮಧ್ಯಮ ಅಧಿಕಾರಿಗಳೂ ದುರ್ಲಭರು.

**ವೇದಾಧ್ಯಯನಹೀನಸ್ತು ಪೂರ್ವೋಕ್ತಗುಣಸಂಯುತಃ ॥ ೧೮ ॥**
**ಅಧಮಂ ತಂ ವಿಜಾನೀಯಾತ್ ಸೋಽಪಿ ಮೋಕ್ಷಾಯ ಕಲ್ಪತೇ ।**

ಹಿಂದೆ ಹೇಳಿದ ಗುಣಗಳಿಂದ ಯುಕ್ತನಾಗಿದ್ದರೂ ವೇದಾಧ್ಯಯನರಹಿತನಾಗಿದ್ದರೆ ಅಂತಹ ಅಧಿಕಾರಿಯು ಅಧಮನೆಂದು ಕರೆಯಲ್ಪಡುತ್ತಾನೆ. ಅವನೂ ಸಹ ಮೋಕ್ಷಯೋಗ್ಯನೇ.

**ನಾರೀಣಾಂ ಚೈವ ಶೂದ್ರಾಣಾಂ ತತ್ರ ಮಾರ್ಗೇ ಅಧಿಕಾರಿತಾ ॥ ೧೯ ॥**

ಅಧಮಾಧಿಕಾರಿಗಳು ಸ್ತ್ರೀಯರೂ ಹಾಗೂ ಶೂದ್ರರೂ.

**ತಂತ್ರಜ್ಞಾನೇಽಪಿ ಶೂದ್ರಾಣಾಂ ನ ತು ಗ್ರಂಥಪುರಃಸರಮ್ ।**
**ತತ್ರ ಯಾ ಬ್ರಾಹ್ಮಣೀ ನಾರೀ ತಸ್ಯಾ ಗ್ರಂಥಪುರಃಸರಮ್ ॥ ೨೦ ॥**

ಶೂದ್ರರಿಗೆ ತಂತ್ರಜ್ಞಾನ ಪಡೆಯುವ ಅಧಿಕಾರವೇ ಹೊರತು ಸಚ್ಛಾಸ್ತ್ರ ಗ್ರಂಥಗಳ ಪಾಠದ ಮೂಲಕ ಜ್ಞಾನ ಪಡೆಯುವ ಅಧಿಕಾರವಿಲ್ಲ. ಬ್ರಾಹ್ಮಣ ಸ್ತ್ರೀಯರಿಗೆ ಸಚ್ಛಾಸ್ತ್ರಗ್ರಂಥಗಳ ಶ್ರವಣದಿಂದ ಜ್ಞಾನಹೊಂದುವ ಅಧಿಕಾರವಿದೆ.

(ಸ್ತ್ರೀ, ಶೂದ್ರ, ಬ್ರಹ್ಮಬಂಧುಗಳ ಅಧಿಕಾರ ಯಾವರೀತಿ ಇರುತ್ತದೆಯೆಂಬು ದನ್ನು ಬ್ರಹ್ಮಸೂತ್ರಭಾಷ್ಯದ ಜಿಜ್ಞಾಸಾಧಿಕರಣದಲ್ಲಿ ವಿವರಿಸಲಾಗಿದೆ.)

**ತಂತ್ರಜ್ಞಾನೇsಧಿಕಾರೋಸ್ತಿ ಕೇಚಿತ್ ಸಂಕರಜಾತಯಃ ।**
**ಏತೇಷಾಂ ನಾನುಪೂರ್ವೇಣ ಕಥಾಮಾತ್ರಾಧಿಕಾರಿತಾ ॥ ೨೧ ॥**

ಮಿಶ್ರಜಾತಿಯವರಿಗೆ ತಂತ್ರಜ್ಞಾನದಲ್ಲಿ ಅಧಿಕಾರವಿರುತ್ತದೆ. ಸಚ್ಛಾಸ್ತ್ರಗಳ ಪಾಠಮೂಲಕ ಜ್ಞಾನ ಪಡೆಯುವ ಅಧಿಕಾರವಿಲ್ಲ. ಕಥಾಗಳ ಶ್ರವಣದ ಮೂಲಕ ಜ್ಞಾನ ಸಂಪಾದಿಸಿಕೊಳ್ಳಲು ಅಧಿಕಾರವಿದೆ.

(ಬ್ರಾಹ್ಮಣಾದಿ ಸ್ತ್ರೀಪುರುಷರು, ಕ್ಷತ್ರಿಯ, ವೈಶ್ಯ, ಶೂದ್ರ ಈ ಸ್ತ್ರೀಪುರುಷರು ಇವರ ಸಂಪರ್ಕದಿಂದ ಉತ್ಪನ್ನರಾದ ಜನರಿಗೆ ಅನುಲೋಮ-ಪ್ರತಿಲೋಮ ಎಂದು ಹೆಸರು. ಮಿಶ್ರಜಾತಿಯವರೆಂದೂ ಹೇಳಲ್ಪಡುತ್ತಾರೆ. ಬ್ರಾಹ್ಮಣಾದಿ ನಾಲ್ಕು ವರ್ಣಗಳು, ಅನುಲೋಮ ಪ್ರತಿಲೋಮಗಳು ಒಟ್ಟು ಹದಿನಾರು. ಇವುಗಳ ಪೂರ್ಣವಿವರಗಳನ್ನು "ವಿಷ್ಣುರಹಸ್ಯ" ಗ್ರಂಥದಲ್ಲಿ ಕಾಣಬಹುದು.)

**ಚಂಡಾಲಪುಲ್ಕಸಾದೀನಾಂ ನಾಮಮಾತ್ರಾಧಿಕಾರತಾ ।**
**ತತ್ರಾಧಿಕಾರಿಣೋ ದೇವಾ ಉತ್ತಮಾಃ ಪರಿಕೀರ್ತಿತಾಃ ॥ ೨೨ ॥**

ಚಂಡಾಲರು ಮತ್ತು ಅವರಿಗಿಂತ ನೀಚರೂ ಆದವರಿಗೂ ಪರಮಾತ್ಮನ ನಾಮ ಸ್ಮರಣೆ, ಉಚ್ಚಾರಣೆ ಇವುಗಳಲ್ಲಿ ಮಾತ್ರ ಅಧಿಕಾರ. ಹೀಗೆ ಮೇಲೆ ಹೇಳಲ್ಪಟ್ಟ ವಿವಿಧರಾದ ಅಧಿಕಾರಿಗಳಲ್ಲಿ ದೇವತೆಗಳು ತುಂಬ ಶ್ರೇಷ್ಠರೆಂದು ಹೇಳಲ್ಪಡುತ್ತಾರೆ.

**ಋಷಯಃ ಪಿತರೋ ದೇವಾ ಮಧ್ಯಮಾಃ ಪರಿಕೀರ್ತಿತಾಃ ।**
**ತತ್ರಾಧಿಕಾರಿಣಃ ಸರ್ವೇ ಅಧಮಾ ಮನುಜೋತ್ತಮಾಃ ॥ ೨೩ ॥**

ಋಷಿಗಳು, ಪಿತೃದೇವತೆಗಳು, ಮಧ್ಯಮ ಅಧಿಕಾರಿಗಳೆಂದೂ, ಮನುಷ್ಯರಲ್ಲಿ ಶ್ರೇಷ್ಠರಾದವರು ಅಧಮಾಧಿಕಾರಿಗಳೆಂದೂ ಹೇಳಲಾಗಿದೆ.

**ವಿಷ್ಣುಭಕ್ತಿವಿಹೀನಾ ಯೇ ನ ತೇಷಾಮಧಿಕಾರಿತಾ ।**
**ಯಸ್ಮಾದ್ಧರಿಪ್ರಸಾದೇನ ಲಭ್ಯೋ ಮೋಕ್ಷ ಉದಾಹೃತಃ ॥ ೨೪ ॥**

ವಿಷ್ಣುಭಕ್ತಿಯಿಲ್ಲದ ಜನರಿಗೆ ಎಂದಿಗೂ ಅಧಿಕಾರವಿಲ್ಲ. ಮೋಕ್ಷ ದೊರಕಲು ಶ್ರೀಹರಿಯ ಪ್ರಸಾದವೇ ಮುಖ್ಯ. ಭಕ್ತರಲ್ಲದವರಿಗೆ ಭಗವಂತನು ಅನುಗ್ರಹ ಮಾಡುವುದಿಲ್ಲ.

(**ಯಮೇವೈಷ ವೃಣುತೇ ತೇನ ಲಭ್ಯಃ**–ಪರಮಾತ್ಮನು ಯಾರನ್ನು ತನ್ನ ಪ್ರಸಾದದಿಂದ ಸ್ವೀಕರಿಸುತ್ತಾನೆಯೋ ಅವನಿಗೆ ಮಾತ್ರವೇ ಪರಮಾತ್ಮನು ಲಭ್ಯ,

**ಯತೋ ನಾರಾಯಣಪ್ರಸಾದಮೃತೇ ನ ಮೋಕ್ಷಃ**—ನಾರಾಯಣನ ಪ್ರಸಾದ ಇಲ್ಲದಿದ್ದಲ್ಲಿ ಮೋಕ್ಷವಿಲ್ಲ—ಮುಂತಾದ ಭಾಷ್ಯೋದಾಹೃತ ಪ್ರಮಾಣಗಳು ಇದನ್ನೇ ಸ್ಪಷ್ಟಪಡಿಸುತ್ತವೆ.)

**ಜಿಜ್ಞಾಸ್ಯೋ ಭಗವಾನ್ ಯಸ್ಮಾತ್ ಜ್ಞಾತ್ವಾ ಲಕ್ಷಣತೋ ಹರಿಮ್ ।**
**ಜನ್ಮಾದಿಜಗತೋ ಯಸ್ಮಾತ್ತದ್ಬ್ರಹ್ಮ ಸ ಹರಿಃ ಸ್ವಯಮ್ ॥ ೨೫ ॥**

ಶಾಸ್ತ್ರಗಳಲ್ಲಿ ಹೇಳಿರುವ ಲಕ್ಷಣಗಳನ್ನುಳ್ಳ ಶ್ರೀಹರಿಯನ್ನು ಜಿಜ್ಞಾಸಾ ಮಾಡಬೇಕು. ಲಕ್ಷಣವು ಯಾವುದೆಂದರೆ ಈ ಸತ್ಯಭೂತವಾದ ಜಗತ್ತಿಗೆ ಸೃಷ್ಟಿಯೇ ಮೊದಲಾದ ಅಷ್ಟಕರ್ತೃತ್ವವನ್ನು ನಿರ್ವಹಿಸುವವನು. ಅಂತಹವನು ಸ್ವಯಂ ಶ್ರೀಹರಿಯೇ ವಿನಹ ಅನ್ಯರಲ್ಲ. ಅವನೇ ಪರಬ್ರಹ್ಮನು.

[**ವಿಶೇಷಾಂಶ :** ಲಕ್ಷಣ ಸೂತ್ರವಾದ '**ಓಂ ಜನ್ಮಾದ್ಯಸ್ಯ ಯತಃ ಓಂ**' ಎಂಬ ಸೂತ್ರವೂ, ಅದರ ಭಾಷ್ಯವೂ ಪರಬ್ರಹ್ಮನ ಲಕ್ಷಣವಾದ ಸೃಷ್ಟ್ಯಾದಿ (ಸೃಷ್ಟಿ, ಸಂಹಾರ, ಸ್ಥಿತಿ, ನಿಯಮನ, ಜ್ಞಾನ, ಅಜ್ಞಾನ, ಬಂಧ ಮತ್ತು ಮೋಕ್ಷ) ಅಷ್ಟ ಕರ್ತೃತ್ವವನ್ನು ನಿರೂಪಿಸುತ್ತವೆ. ಅಂತಹ ಲಕ್ಷಣಗಳಿಂದ ಯುಕ್ತನಾದವನು ಸಾಕ್ಷಾತ್ ಶ್ರೀವಿಷ್ಣುವೇ ವಿನಹ ಇತರರಲ್ಲ. ಬ್ರಹ್ಮಸೂತ್ರಭಾಷ್ಯದ ಜನ್ಮಾಧಿ-ಕರಣದಲ್ಲಿ ವಿವರಗಳನ್ನು ಕಾಣಬಹುದು.

**ಯಸ್ಮಾದಿಮಾನಿ ಭೂತಾನಿ ಜಾಯಂತೇ ತದ್ಭವಾನಿ ಚ ।**
**ಜೀವಂತೇ ತೇನ ಮುನಿನಾ ಸಂಹೃತಾನಿ ಯುಗಾತ್ಯಯೇ ॥ ೨೬ ॥**

**ತದ್ಬ್ರಹ್ಮ ಪರಮಂ ಜ್ಞೇಯಂ ಸ ವಿಷ್ಣುಃ ಪರಿಕೀರ್ತಿತಃ ।**
**ಉದಯತ್ರಾಣನಾಶಾನಾಂ ಪ್ರಕಾಶಸ್ಯಾವೃತೇಸ್ತಥಾ ॥ ೨೭ ॥**

**ಬಂಧಸ್ಯ ಮೋಕ್ಷಸ್ಯ ಚ ತಥಾ ಕರ್ತಾ ಯೋ ನಿಯಮಸ್ಯ ಚ ।**
**ತದ್ಬ್ರಹ್ಮ ಪರಮಂ ಜ್ಞೇಯಂ ನಾನ್ಯತ್ ಬ್ರಹ್ಮ ಸಮೀರಿತಮ್ ॥ ೨೮ ॥**

ಯಾರಿಂದ ಈ ಜಗತ್ತಿನಲ್ಲಿರುವ ಪ್ರಾಣಿಗಳು ಉತ್ಪತ್ತಿಯನ್ನು ಪಡೆಯುತ್ತವೆಯೋ, ಯಾರಿಂದ ಪಾಲನೆಯನ್ನು ಹೊಂದುತ್ತವೆಯೋ, ಮತ್ತು ಸಂಹಾರ ಕಾಲದಲ್ಲಿ ಯಾರಿಂದ ಸಂಹಾರವನ್ನು ಪಡೆಯುತ್ತವೆಯೋ, ಅವನೇ "ಬ್ರಹ್ಮ" ಶಬ್ದದಿಂದ ವಾಚ್ಯನು, ಅವನನ್ನೇ ತಿಳಿಯಬೇಕು, ಅವನೇ ವಿಷ್ಣು. ಉತ್ಪತ್ತಿ, ಸ್ಥಿತಿ, ನಾಶ, ಜ್ಞಾನ, ಅಜ್ಞಾನ, ಬಂಧ, ಮೋಕ್ಷ ನಿಯಮನ—ಈ ಎಂಟೂ ಕಾರ್ಯಗಳು ಯಾರಿಂದ ನಿರ್ವಹಿಸಲ್ಪಡುತ್ತವೆಯೋ ಅವನೇ "ಬ್ರಹ್ಮ". ಅವನನ್ನೇ ತಿಳಿದುಕೊಳ್ಳಲು ಪ್ರಯತ್ನಿಸಬೇಕು. ಜಿಜ್ಞಾಸಾರ್ಹನು ಅವನೇ. ಇತರ ದೇವತೆಗಳು ಯಾರೂ ಅಲ್ಲ. ಇತರರನ್ನು "ಬ್ರಹ್ಮ"ನೆಂದು ಕರೆಯಲಾಗುವುದಿಲ್ಲ.

[ವಿಶೇಷಾಂಶ : **ಸರ್ವಭೂತಾನಿ ಕೌಂತೇಯ ಪ್ರಕೃತಿಂ ಯಾಂತಿ ಮಾಮಿಕಾಮ್ |**
**ಕಲ್ಪಕ್ಷಯೇ ಪುನಸ್ತಾನಿ ಕಲ್ಪಾದೌ ವಿಸೃಜಾಮ್ಯಹಮ್ ||**
**ಪ್ರಕೃತಿಂ ಸ್ವಾಮವಷ್ಟಭ್ಯ ವಿಸೃಜಾಮಿ ಪುನಃ ಪುನಃ |**
**ಭೂತಗ್ರಾಮಮಿಮಂ ಕೃತ್ಸ್ನಮವಶಂ ಪ್ರಕೃತೇರ್ವಶಾತ್ ||**
**ಮಯಾಧ್ಯಕ್ಷೇಣ ಪ್ರಕೃತಿಃ ಸೂಯತೇ ಸಚರಾಚರಮ್ |**
**ಹೇತುನಾನೇನ ಕೌಂತೇಯ ಜಗದ್ವಿಪರಿವರ್ತತೇ ||** —ಗೀತಾ

ಪ್ರಳಯಕಾಲದಲ್ಲಿ ಸಮಸ್ತಭೂತಗಳೂ ನನ್ನ ಅಧೀನವಾದ ಪ್ರಕೃತಿಯಲ್ಲಿ ಲಯಹೊಂದುತ್ತವೆ. ಸೃಷ್ಟಿಕಾಲದಲ್ಲಿ ಆ ಭೂತಗಳನ್ನು ಪುನಃ ವಿಧವಿಧವಾಗಿ ಸೃಷ್ಟಿಮಾಡುತ್ತೇನೆ. ನನ್ನ ಅಧೀನವಾದ ಪ್ರಕೃತಿಯನ್ನು ಉಪಾದಾನ ಕಾರಣ ಮಾಡಿಕೊಂಡು ಪರತಂತ್ರವಾದ ಈ ಸಮಸ್ತ ಭೂತಸಮುದಾಯವನ್ನು ಸೃಷ್ಟಿಸುತ್ತೇನೆ. ಪ್ರಭುವಾದ ನನ್ನಿಂದ ಜಡಪ್ರಕೃತಿಯು ಚರಾಚರವಾದ ಈ ಜಗತ್ತನ್ನು ಹುಟ್ಟಿಸುತ್ತದೆ. ನನ್ನಿಂದ ಪ್ರೇರೇಪಿಸಲ್ಪಟ್ಟ ಈ ಪ್ರಕೃತಿಯ ಕಾರಣದಿಂದ ಜಗತ್ತು ಪುನಃ ಪುನಃ ಹುಟ್ಟುತ್ತದೆ.

ಗೀತೆಯ ಈ ಶ್ಲೋಕಗಳು ಮೇಲೆ ಹೇಳಿದ ಬ್ರಹ್ಮನ ಲಕ್ಷಣವನ್ನೇ ಸ್ಪಷ್ಟಪಡಿಸುತ್ತವೆ.]

**ಕರ್ಮಾವಿದ್ಯಾಪ್ರಧಾನಂ ಚ ತಥಾ ಕಾಲೋ ಗುಣಾಶ್ಚ ಯೇ |**
**ನ ತೇಷಾಂ ಕರ್ತೃತಾ ಕ್ವಾಪಿ ಹ್ಯಸ್ಮಾದೇತೇ ಹ್ಯಚೇತನಾಃ || ೨೯ ||**

ಕರ್ಮ, ಅವಿದ್ಯಾ, ಪ್ರಧಾನ, ಕಾಲ, ಗುಣಗಳು—ಇವುಗಳಿಗೆ ಕರ್ತೃತ್ವವು ಇಲ್ಲದ ಪ್ರಯುಕ್ತ ಅಚೇತನಗಳೆಂದು ಹೇಳಲ್ಪಡುತ್ತವೆ. (ಇಚ್ಛಾ, ಜ್ಞಾನ, ಪ್ರಯತ್ನ – ಇವುಗಳು ಚೇತನನ ಸ್ವಭಾವಗಳು. ಇವು ಇಲ್ಲದ ವಸ್ತುಗಳು ಅಚೇತನ ಅಥವಾ ಜಡ ವಸ್ತುಗಳು. ಕರ್ಮ, ಪ್ರಕೃತಿ, ಕಾಲ, ಸತ್ವ ರಜಸ್ ತಮೋ ಗುಣಗಳು ಒಬ್ಬ ಚೇತನನ ಸಹಾಯವಿಲ್ಲದೆ ಪ್ರವೃತ್ತಿಸುವುದಿಲ್ಲವಾದ ಕಾರಣದಿಂದ ಅವು ಅಚೇತನ ವಸ್ತುಗಳು.)

**ಯತ್ರ ಬ್ರಹ್ಮಾದಯಶ್ಶೋಕ್ತಾ ಕರ್ತಾರ ಇತಿ ಚ ಸ್ಮೃತೌ |**
**ತತ್ರ ಬ್ರಹ್ಮಾದಿಶಬ್ದೇಭ್ಯೋ ಲಿಂಗಾದಿಭ್ಯೋ ಹರಿಂ ವದೇತ್ || ೩೦ ||**

ಸ್ಮೃತಿಗಳಲ್ಲಿ ಎಲ್ಲೆಲ್ಲಿ ಬ್ರಹ್ಮಾದಿಗಳು ಕರ್ತೃಗಳೆಂದು ಹೇಳಿದೆಯೋ ಅಲ್ಲೆಲ್ಲಾ ಬ್ರಹ್ಮಾದಿ ಶಬ್ದಗಳಿಂದಲೂ ಶ್ರೀಹರಿಯ ಲಕ್ಷಣಗಳಿಂದಲೂ ಕರ್ತೃವು ಶ್ರೀಹರಿಯೇ ಎಂದು ತಿಳಿದುಕೊಳ್ಳಬೇಕು. (ಸ್ವತಂತ್ರಕರ್ತೃತ್ವವು ಶ್ರೀಹರಿಗೆ ವಿನಹ ಅನ್ಯರಿಗೆ ಇಲ್ಲ).

**ನಾನ್ಯೋಽಸ್ತಿ ಕರ್ತಾ ಜಗತಶ್ಚ ವಿಷ್ಣೋಃ**
**ಪೂರ್ಣಜ್ಞಾನಾತ್ ಪೂರ್ಣಶಕ್ತೇಃ ಕದಾಪಿ ।**
**ಲೀಲಾ ಹ್ಯೇಷಾ ಪೂರ್ಣಕಾಮಸ್ಯ ಕಾ ವಾ**
**ಕಾಂಕ್ಷಾ ವಾ ಸ್ಯಾತ್ ಸೈವ ತಸ್ಯ ಸ್ವಭಾವಃ ॥ ೩೧ ॥**

ಜ್ಞಾನ, ಶಕ್ತಿ ಇವುಗಳಿಂದ ಪರಿಪೂರ್ಣನಾದ ಶ್ರೀಹರಿಯ ವಿನಹ ಈ ಜಗತ್ತನ್ನು ಸೃಷ್ಟಿಸುವುದೇ ಮೊದಲಾದ ಕರ್ತೃತ್ವವು ಇತರರಿಗೆ ಇಲ್ಲ. ಶ್ರೀಹರಿಯಾದರೋ ಸೃಷ್ಟ್ಯಾದಿಗಳನ್ನು ತನ್ನ ಪ್ರಯೋಜನಕ್ಕಾಗಿ ಮಾಡುವುದಿಲ್ಲ. ಈ ವ್ಯಾಪಾರಗಳು ಶ್ರೀಹರಿಗೆ ಕೇವಲ ಲೀಲೆ ಅಥವಾ ಕ್ರೀಡಾ. ಅದು ಅವನ ಸ್ವಭಾವ. ಪೂರ್ಣ ಕಾಮನಾದ ನಿರಪೇಕ್ಷನಾದ ಶ್ರೀಹರಿಗೆ ಸೃಷ್ಟ್ಯಾದಿಗಳಿಂದ ಪ್ರಯೋಜನತಾನೇ ಏನು ? ಏನೂ ಇಲ್ಲ.

[**ವಿಶೇಷಾಂಶ :** ಪರಮಾತ್ಮನು ಮಾಡುವ ಸೃಷ್ಟ್ಯಾದಿ ವ್ಯಾಪಾರಗಳು ಅವನ ಪ್ರಯೋಜನಕ್ಕೆ ಅಲ್ಲ; ಕೇವಲ ಲೀಲೆ_ಇಚ್ಛೆಯಿಂದ ಎಂಬುದಾಗಿ ಬ್ರಹ್ಮಸೂತ್ರ ಭಾಷ್ಯದ "**ನ ಪ್ರಯೋಜನವತ್ವಾಧಿಕರಣ**"ದಲ್ಲಿ ವಿವರಿಸಲ್ಪಟ್ಟಿದೆ.

**"ಭೋಗಾರ್ಥಂ ಸೃಷ್ಟಿರಿತ್ಯನ್ಯೇ ಕ್ರೀಡಾರ್ಥಮಿತಿ ಚಾಪರೇ ।**
**ದೇವಸ್ಯೈಷ ಸ್ವಭಾವೋಽಯಂ ಆಪ್ತಕಾಮಸ್ಯ ಕಾ ಸ್ಪೃಹಾ"**

ಎಂಬ ಶ್ರುತಿಯು ಪೂರ್ಣಕಾಮನಾದ ಶ್ರೀಹರಿಗೆ ಸ್ವಪ್ರಯೋಜನದ ಇಚ್ಛೆಯೇ ಇಲ್ಲವೆಂದು ತಿಳಿಸುತ್ತದೆ.

**"ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿಃ ಇತಿ ಸೃಷ್ಟೌ ವಿನಿಶ್ಚಿತಾಃ"**

ಎಂಬುದಾಗಿ ಜಗತ್ತಿನ ಸೃಷ್ಟ್ಯಾದಿಗಳು ಶ್ರೀಹರಿಯ ಇಚ್ಛಾಧೀನವೆಂದು ಹೇಳಲ್ಪಟ್ಟಿವೆ. ಅದು ಶ್ರೀಹರಿಗೆ ಕೇವಲ ಲೀಲೆಯೆಂಬುದಾಗಿ ನಿರ್ಣಯಿಸಲ್ಪಟ್ಟಿದೆ.

**ನ ಚ ಮಾಂ ತಾನಿ ಕರ್ಮಾಣಿ ನಿಬಧ್ನಂತಿ ಧನಂಜಯ ।**
**ಉದಾಸೀನವದಾಸೀನಮಸಕ್ತಂ ತೇಷು ಕರ್ಮಸು ॥** —ಗೀತಾ

ಜಗತ್ತಿನ ಸೃಷ್ಟ್ಯಾದಿ ಕರ್ಮಗಳಲ್ಲಿ ಯಾವ ವಿಧವಾದ ಆಸೆಯಾಗಲೀ ಪ್ರಯೋಜನವಾಗಲೀ ನನಗೆ ಇಲ್ಲವಾದಕಾರಣದಿಂದ ಉದಾಸೀನನಂತೆ ಇರುವ ನನ್ನನ್ನು ಆ ಕರ್ಮಗಳು ಬಂಧಿಸುವುದಿಲ್ಲ. ಆ ಕರ್ಮಗಳಿಂದ ನನಗೆ ಸುಖ ದುಃಖಾದಿಗಳು ಉಂಟಾಗುವುದಿಲ್ಲ.]

**ಜಾತಾ ಯಸ್ಮಾತ್ ಬ್ರಹ್ಮರುದ್ರೇಂದ್ರಪೂರ್ವಾಃ**
**ಕಥಂ ತೇಷಾಂ ಸಾ ಭವೇತ್ ಕರ್ತೃತಾ ಚ ।**
**ಸೃಷ್ಟ್ವಾ ಚೈತಾನನುವಿಶ್ಯೇವ ಸರ್ವಂ**
**ಕರೋತ್ಯದ್ಧಾ ಲೋಕಕೃತ್ಯಂ ಸಮಸ್ತಮ್ ॥ ೩೨ ॥**

ಬ್ರಹ್ಮ, ರುದ್ರ, ಇಂದ್ರ ಮುಂತಾದವರೆಲ್ಲರೂ ಯಾವ ಶ್ರೀಹರಿಯಿಂದ ಉತ್ಪತ್ತಿಯನ್ನು ಪಡೆದು ಅವನ ಅಧೀನದಲ್ಲಿರುತ್ತಾರೆಯೋ ಅಂತಹ ದೇವತೆಗಳಿಗೆ ಜಗತ್ತಿನ ಸೃಷ್ಟ್ಯಾದಿ ಕರ್ಮಗಳು ಹೇಗೆ ಸಾಧ್ಯ ? ಶ್ರೀಹರಿಯಾದರೋ ದೇವತೆಗಳನ್ನು ಸೃಷ್ಟಿಸಿ ತಾನು ಅವರಲ್ಲಿ ನಿಂತು ಎಲ್ಲ ವ್ಯಾಪಾರಗಳನ್ನೂ ನಡೆಸುತ್ತಾನೆ.

**ಬ್ರಹ್ಮೇಶಾದ್ಯಾಃ ಪ್ರೇರಣಾದ್ಯಸ್ಯ ವಿಶ್ವಂ**
**ಕೃತ್ಯಂ ಸರ್ವಂ ಕರ್ತುಮಲಂ ಸಮರ್ಥಾಃ ।**
**ವಿನಾ ವಿಷ್ಣೋಃ ಪ್ರೇರಣಂ ಕ್ವಾಪಿ ತೇ ತು**
**ಸರ್ವೇ ದೇವಾಶ್ಚಾಲನೇ ಚಾಪ್ಯಶಕ್ತಾಃ ॥ ೩೩ ॥**

[ಬ್ರಹ್ಮರುದ್ರಾದಿ ದೇವತೆಗಳು ಯಾರ ಪ್ರೇರಣೆಯಿಂದಲೇ ಜಗತ್ತಿನ ಸರ್ವ ವ್ಯಾಪಾರಗಳನ್ನೂ ನಡೆಸುವರೋ ಅಂತಹ ವಿಷ್ಣುವಿನ ಪ್ರೇರಣೆ ಇಲ್ಲದೇ ಯಾರೂ ಯಾವ ಕಾಲದಲ್ಲಿಯೂ ಚಲನಾದಿಗಳನ್ನೂ ಸಹ ಮಾಡಲು ಸಮರ್ಥರಲ್ಲ.

[**ವಿಶೇಷಾಂಶ : ನ ಋತೇ ತ್ವತ್ಕ್ರಿಯತೇ ಕಿಂಚನಾರೇ, ತೇನ ವಿನಾ ತೃಣಮಪಿ ನ ಚಲತಿ** ಇತ್ಯಾದಿ ಪ್ರಮಾಣಗಳು ಪರಮಾತ್ಮನ ಪ್ರೇರಣೆ ಇಲ್ಲದೆ ಯಾರೂ ಸಹ ಚಲನಾದಿಗಳನ್ನೂ ಮಾಡಲು ಶಕ್ತರಲ್ಲ ಎಂಬುದಾಗಿ ಘೋಷಿಸುತ್ತವೆ.

**ಪಿತಾಮಹಸ್ಯ ಜಗತೋ ಮಾತಾ ಧಾತಾ ಪಿತಾಮಹಃ ।**
**ವೇದ್ಯಂ ಪವಿತ್ರಮೋಂಕಾರಃ ಋಕ್ಸಾಮಯಜುರೇವ ಚ ॥**
**ಗತಿರ್ಭರ್ತಾ ಪ್ರಭುಃ ಸಾಕ್ಷೀ ನಿವಾಸಃ ಶರಣಂ ಸುಹೃತ್ ।**
**ಪ್ರಭವಃ ಪ್ರಲಯಃ ಸ್ಥಾನಂ ನಿಧಾನಂ ಬೀಜಮವ್ಯಯಮ್ ॥** —ಗೀತಾ

ಈ ಜಗತ್ತಿಗೆ ನಾನೇ ತಂದೆ, ತಾಯಿ, ಪೋಷಕ, ಪೂಜ್ಯ, ತಿಳಿಯಲ್ಪಡತಕ್ಕವನು, ಪವಿತ್ರನು, ಓಂಕಾರವಾಚ್ಯ, ಋಕ್‌ನಾಮಕನು, ಸರ್ವರೂಪಗಳಲ್ಲಿಯೂ ಒಂದೇ ಸಮನಾಗಿರುವುದರಿಂದ ಸಾಮನಾಮಕನು, ಯಾಗಕ್ಕೆ ಉದ್ದೇಶನಾದುದರಿಂದ ಯಜು ಎಂಬ ಹೆಸರಿನವನು, ಮೋಕ್ಷದಾತೃವಾದುದರಿಂದ ಗತಿಶಬ್ದವಾಚ್ಯನು, ಪೋಷಕ, ಸ್ವಾಮಿ, ಸರ್ವವನ್ನೂ ನೋಡುತ್ತಿರುವವನು, ಉಪಕಾರವನ್ನು ನಿರೀಕ್ಷೆ ಮಾಡದೇ ಉಪಕಾರ ಮಾಡುವವನು, ಜಗತ್ತನ್ನು ಸೃಷ್ಟಿಸುವವನು, ನಾಶ

ಮಾಡುವವನು, ಸರ್ವಕ್ಕೂ ಆಧಾರನು, ಪ್ರಳಯಕಾಲದಲ್ಲಿ ಜಗತ್ತನ್ನು ತನ್ನ ಉದರದಲ್ಲಿ ಇಟ್ಟುಕೊಳ್ಳುವವನು, ನಾಶರಹಿತನು, ಎಲ್ಲಕ್ಕೂ ಕಾರಣನು.

ಈ ಪ್ರಮಾಣಗಳೂ ಬ್ರಹ್ಮಸೂತ್ರಭಾಷ್ಯದ "ಜನ್ಮಾದ್ಯಧಿಕರಣವೂ" ಇದೇ ಪ್ರಮೇಯವನ್ನೇ ಪುಷ್ಟೀಕರಿಸುತ್ತವೆ.]

**ಸೂತ್ರಪ್ರೋತಾ ಪ್ರತಿಮಾಚಾಲನಾದಿ-**
**ಕರೋತ್ಯೇಷಾ ಕರ್ಮ ತದ್ವತ್ ಸಮಸ್ತಮ್ ।**
**ವಿಶ್ವಂ ಚೈತತ್ ಪ್ರೇರಿತಂ ವಿಷ್ಣುನೈವ**
**ಕರೋತ್ಯೇವಂ ಸ್ನೇಹಿತಂ ಕರ್ಮ ಜಾತಮ್ ॥ ೩೪ ॥**

ಸೂತ್ರದ ಬೊಂಬೆಗಳು ಹೇಗೆ ಕುಣಿಸಿದಂತೆ ಕುಣಿಯುತ್ತವೆಯೋ ಹಾಗೆಯೇ ವಿಷ್ಣುವು ಹೇಗೆ ಪ್ರೇರಿಸುತ್ತಾನೆಯೋ ಹಾಗೆ ಸಮಸ್ತರೂ ನಡೆಯುತ್ತಾರೆ: ಸಮಸ್ತ ಕರ್ಮಗಳನ್ನೂ ನಡೆಸುವವನು ಅವನೇ.

(ಜೀವರ ಅಸ್ವಾತಂತ್ರ್ಯ, ಪರಾಧೀನತೆ, ಶ್ರೀಹರಿಯೇ ಸಮಸ್ತ ಚೇಷ್ಟಾ-ಕರ್ತಾ ಎಂಬ ಪ್ರಮೇಯವು ಬ್ರಹ್ಮಸೂತ್ರಭಾಷ್ಯದ "ಇತರವ್ಯಪದೇಶಾಧಿಕರಣ" ದಲ್ಲಿ ಸ್ಪಷ್ಟಪಡಿಸಲ್ಪಟ್ಟಿದೆ).

**ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।**
**ಭ್ರಾಮಯನ್ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥** –ಗೀತಾ

ಸರ್ವವನ್ನೂ ನಿಯಮಿಸುವ ನಾರಾಯಣನು ಶರೀರವೆಂಬ ಯಂತ್ರದಲ್ಲಿರುವ ಸಮಸ್ತ ಪ್ರಾಣಿಗಳನ್ನೂ ತನ್ನ ಇಚ್ಛೆಯಿಂದ ನಾನಾಕರ್ಮಗಳಲ್ಲಿ, ಪ್ರವರ್ತಿಸುವಂತೆ ಮಾಡುತ್ತಾ ಸಮಸ್ತ ಪ್ರಾಣಿಗಳ ಹೃದಯದಲ್ಲಿ ಇರುತ್ತಾನೆ.

**ಯದಿ ನಾಮ ಪರೋ ನ ಸ್ಯಾತ್ ಕಥಮೇತತ್ ಜಗದ್ವಶೇ ।**
**ವಶೇ ಯದಿ ಜಗನ್ನಃ ಸ್ಯಾತ್ ನಿತ್ಯಾನಂದಃ ಕಥಂ ಭವೇತ್ ॥ ೩೫ ॥**

ಶ್ರೀಹರಿಯು ಸರ್ವೋತ್ತಮನು ಆಗದಿದ್ದಲ್ಲಿ ಈ ಜಗತ್ತು ಅವನ ವಶದಲ್ಲಿ ಇರಲು ಹೇಗೆ ಸಾಧ್ಯ ? ಜಗತ್ತು ಶ್ರೀಹರಿಯ ವಶದಲ್ಲಿ ಇಲ್ಲದೇ ಹೋದರೆ ಅವನು ನಿತ್ಯಾನಂದಮಯನು ಹೇಗೆ ಆಗುವನು ?

(ಈ ಪ್ರಮೇಯದ ಹೆಚ್ಚಿನ ವಿವರಗಳನ್ನು ಬ್ರಹ್ಮಸೂತ್ರಭಾಷ್ಯದ "ಆಕಾಶಾಧಿ-ಕರಣ"ದಲ್ಲಿ ಕಾಣಬಹುದು).

**ಅಥವಾ ಜಗದೇತನ್ನ ನಿತ್ಯಾನಂದಃ ಕಥಂ ಭವೇತ್ ।**

ಈ ಜಗತ್ತೇ ಅವನ ವಶದಲ್ಲಿ ಇಲ್ಲವೆಂದು ಹೇಳಿದರೆ, ಜಗತ್ತಿನಲ್ಲಿರುವ ಸಮಸ್ತರೂ ನಿತ್ಯವೂ ಆನಂದಯುಕ್ತರಾಗಿಯೇ ಏತಕ್ಕೆ ಆಗಿಲ್ಲ ?

ಜಗತ್ತು ಶ್ರೀಹರಿಯ ವಶದಲ್ಲಿ ಇಲ್ಲದೇ ಎಲ್ಲರೂ ಸ್ವತಂತ್ರರಾಗಿದ್ದರೆ ಸಮಸ್ತರೂ ಯಾವಾಗಲೂ ಸುಖವನ್ನೇ ಅನುಭವಿಸಬೇಕಾಗಿತ್ತು. ಆದರೆ ವಸ್ತುಸ್ಥಿತಿ ಹಾಗಿಲ್ಲ. ಸಮಸ್ತರೂ ದುಃಖಪ್ರಾಚುರ್ಯದ ಸುಖವನ್ನೇ ಅನುಭವಿಸುವುದು ಅನುಭವಸಿದ್ಧ. ಆದುದರಿಂದ ಜಗತ್ತಿಗೆ ಸುಖದುಃಖಾದಿಗಳನ್ನು ನೀಡುವ ಜಗದೊಡೆಯನು ಇರುವನೆಂದು ಸಿದ್ಧವಾಗುತ್ತದೆ. ಇದನ್ನೇ ಶ್ರೀಮದಾಚಾರ್ಯರು ದ್ವಾದಶಸ್ತೋತ್ರದಲ್ಲಿ ಹೀಗೆ ಹೇಳಿರುತ್ತಾರೆ :

**ಯದಿ ನಾಮ ಪರೋ ನ ಭವೇತ್ ಸ ಹರಿಃ**
**ಕಥಮಸ್ಯ ವಶೇ ಜಗದೇತದಭೂತ್ ।**
**ಯದಿ ನಾಮ ನ ತಸ್ಯ ವಶೇ ಸಕಲಂ**
**ಕಥಮೇವ ತು ನಿತ್ಯಸುಖಂ ನ ಭವೇತ್ ॥**

ಶ್ರೀಹರಿಯು ಸರ್ವೋತ್ತಮನೂ, ಸಮಸ್ತ ವಿಶ್ವಕ್ಕೆ ಪ್ರಭುವೂ ಆಗಿಲ್ಲದಿದ್ದರೆ ಈ ಜಗತ್ತು ಅವನ ವಶದಲ್ಲಿರುವುದು ಹೇಗೆ ಸಾಧ್ಯ ? ಈ ಜಗತ್ತು ಅವನ ವಶದಲ್ಲಿ ಇಲ್ಲದೇ ಇದ್ದರೆ ಎಲ್ಲರಿಗೂ ಎಲ್ಲ ಕಾಲದಲ್ಲಿಯೂ ಸುಖವೇ ಏಕೆ ಅನುಭವಕ್ಕೆ ಬರುತ್ತಿಲ್ಲ ?

**ಪೃಥಿವೀ ವಟಬೀಜಂ ಚ ಸೇಕ ಉಪ್ತಂ ತಥೈವ ಚ ॥ ೩೬ ॥**
**ಕಾಲಶ್ಚ ವರ್ತತೇಽದ್ಯಾಪಿ ನ ಪ್ರರೋಹತಿ ಚಾಂಕುರಮ್ ।**
**ಜಾನೀಯಾತ್ತೇನ ಜೀವಾನ್ಯಂ ಕರ್ತಾರಂ ಪರಮೇಶ್ವರಮ್ ॥ ೩೭॥**

ಪಕ್ಷಿಗಳು ತಮ್ಮ ಮಲದ ಮೂಲಕ ವಟ ಬೀಜವನ್ನು ವಿಸರ್ಜನೆ ಮಾಡಿದರೆ ಪೃಥ್ವಿಯಲ್ಲಿ ವಟ ವೃಕ್ಷವು ಉತ್ಪನ್ನವಾಗುವುದು. ಕಾಲವು ಪ್ರವಾಹದಂತೆ ನಿತ್ಯವಾಗಿರುತ್ತದೆ. ಆದರೂ ಪೃಥ್ವಿಯಲ್ಲಿ ಯಾವ ವಿಧವಾದ ವಸ್ತುವೂ ಅಂಕುರವಾಗುವುದಿಲ್ಲ. ಇದರಿಂದ ಜಗತ್ತೆಂಬ ವಸ್ತುವಿನ ಉತ್ಪತ್ತಿಗೆ ಜೀವರಿಂದ ಭಿನ್ನನಾದ, ಎಲ್ಲರಿಗೂ ಪ್ರಭುವಾದ ಪರಮ ಚೇತನನು ಒಬ್ಬನು ಇರಬೇಕೆಂದು ಸಿದ್ಧವಾಗುತ್ತದೆ.

(ಜೀವರ ಅಲ್ಪಶಕ್ತಿಯನ್ನು ಮನಗೊಂಡು ಯಾರಿಂದಲೂ ಈ ಜಗತ್ತು ಸೃಷ್ಟಿಸಲ್ಪಟ್ಟಿಲ್ಲವೆಂಬುದು ಎಲ್ಲರ ಅನುಭವಸಿದ್ಧ. ಆದರೆ ಜಗತ್ತು ಮಾತ್ರ ಇದೆ. ಆದುದರಿಂದ ಚಿತ್ರ-ವಿಚಿತ್ರವಾದ ಅಸಂಖ್ಯಾತ ವಸ್ತುಗಳಿಂದ ತುಂಬಿರುವ ಈ ಜಗತ್ತನ್ನು ಜೀವರಿಂದ ಭಿನ್ನನಾದ ಚೇತನನೊಬ್ಬನು ಸೃಷ್ಟಿಸಿರಬೇಕು. ಆ ಚೇತನನಾದರೋ ತನ್ನಿಂದ ಸೃಷ್ಟಿಸಲ್ಪಟ್ಟ ಜಗತ್ತಿಗೆ ಪ್ರಭುವಾಗಿರಲೇಬೇಕು).

**ಔಷಧವ್ಯಾಧಿಶಮಯೋಸ್ತಥಾ ವೈ ಶುಕ್ಲದೇಹಯೋಃ ।**
**ಜಾನೀಯಾತ್ ವಿಷ್ಣುವ್ಯಾಪಾರಂ ಇತ್ಯಾದೇಶ್ಚ ಸಕಾಶತಃ ॥ ೩೮ ॥**

ಔಷಧ ಸೇವನೆಯಿಂದ ರೋಗವು ಗುಣವಾಗುತ್ತದೆ. ರೇತಸ್ಸಿನ ಸೇಚನದಿಂದ ಪುತ್ರೋತ್ಪತ್ತಿಯಾಗುತ್ತದೆ ಮುಂತಾದ ದೃಷ್ಟಾಂತಗಳಿಂದ ಸಕಲ ವ್ಯಾಪಾರಗಳಿಗೂ ಆ ಪರಮೇಶ್ವರನಾದ ವಿಷ್ಣುವೇ ಕಾರಣನೆಂದು ತಿಳಿಯಬೇಕು.

(ಔಷಧಸೇವನೆಯಿಂದ ರೋಗವು ವಾಸಿಯಾಗುವುದು ಕಂಡುಬಂದಿದೆ. ಆದರೆ ಅದೇ ಔಷಧವನ್ನು ಅದೇ ರೋಗದಿಂದ ನರಳುತ್ತಿರುವ ಇನ್ನೊಬ್ಬನಿಗೆ ಕೊಟ್ಟರೆ ರೋಗ ಗುಣವಾಗದೇ ಇರುವುದು ಕಂಡಿದೆ. ಅಷ್ಟೇಕೆ ? ಅದೇ ಔಷಧವನ್ನು ಅದೇ ವ್ಯಕ್ತಿಗೆ ಅದೇ ರೋಗ ಇನ್ನೊಮ್ಮೆ ಬಂದಾಗ ಕೊಟ್ಟರೆ ರೋಗವು ಗುಣವಾಗಿಲ್ಲದೇ ಇರುವುದು ಸಹ ಅನುಭವಕ್ಕೆ ಬಂದಿದೆ. ದಂಪತಿಗಳ ಸಂಭೋಗವಾದಾಗಲೆಲ್ಲ ರೇತಸ್ಸೇಚತನವಾದರೂ ಪುತ್ರೋತ್ಪತ್ತಿಯಾಗುವುದಿಲ್ಲವೆಂಬುದು ಎಲ್ಲರಿಗೂ ತಿಳಿದಿರುವ ವಿಷಯ. ಯಾವಾಗಲೋ ಒಂದು ಸಲ ಮಾತ್ರ ರೇತಸ್ಸೇಚತನದಿಂದ ಪುತ್ರೋತ್ಪತ್ತಿಯಾಗುತ್ತದೆ. ಅದು ಯಾವಾಗ ಎಂಬುದನ್ನು ಹೇಳಲು ಬರುವುದಿಲ್ಲ. ಕೆಲವು ದಂಪತಿಗಳಿಗೆ ಎಷ್ಟು ಸಲ ರೇತಸ್ಸೇಚತನವಾದರೂ ಮಕ್ಕಳೇ ಉತ್ಪನ್ನವಾಗದೇ ಇರುವುದು ಕಂಡಿದೆ. ಆದುದರಿಂದ ಔಷಧ ಸೇವನೆಯಿಂದ ಉಪಯೋಗ, ರೇತಸ್ಸೇಚತನದಿಂದ ಪುತ್ರೋತ್ಪತ್ತಿ ಇವುಗಳು ಜೀವರ ಸ್ವಾತಂತ್ರ್ಯದಲ್ಲಿ ಇಲ್ಲ. ಇವೆಲ್ಲಕ್ಕೂ ಕಾರಣನಾದವನು ಆ ಜಗದೊಡೆಯನಾದ ಶ್ರೀವಿಷ್ಣುವೇ ಎಂದು ತಿಳಿಯಬೇಕು.

ಬ್ರಹ್ಮಸೂತ್ರಭಾಷ್ಯದ "ಶಾಸ್ತ್ರಯೋನಿತ್ವಾಧಿಕರಣದಲ್ಲಿ" ಶ್ರೀಮದಾಚಾರ್ಯರು ಇನ್ನೂ ಕೆಲವು ದೃಷ್ಟಾಂತಗಳನ್ನು ಕೊಟ್ಟು ಜಗತ್ತಿನಲ್ಲಿ ನಡೆಯುವ ಸಮಸ್ತ ವ್ಯಾಪಾರಗಳಿಗೂ ಶ್ರೀಹರಿಯೇ ಕಾರಣನು, ಜೀವರೆಲ್ಲರೂ ನಿಮಿತ್ತಮಾತ್ರರು ಎಂಬುದಾಗಿ ಸಾಧಿಸಿ "ದೇವರೆಂಬ ವಸ್ತುವೇ ಇಲ್ಲ"ವೆಂದು ಹೇಳುವ ನಾಸ್ತಿಕ್ಯ ವಾದವನ್ನು ಅಲ್ಲಗಳೆದಿರುತ್ತಾರೆ).

**ಕುರ್ವನ್ ಸರ್ವಂ ಜಗತ್ಕರ್ಮ ತತ್ರಸ್ಥೋಽಪಿ ಮಹಾಪ್ರಭುಃ ।**
**ನ ಲಿಪ್ಯತೇ ಸ್ವತಂತ್ರತ್ವಾದಸಂಗತ್ವಾದ್ವಿಭುತ್ವತಃ ॥ ೩೯ ॥**

ಎಲ್ಲ ವಸ್ತುಗಳಲ್ಲಿಯೂ ವ್ಯಾಪ್ತವಾಗಿರುವ ಮಹಾಪ್ರಭುವಾದ ಶ್ರೀಹರಿಯು ಜಗತ್ತಿನ ಸಕಲ ವ್ಯಾಪಾರಗಳನ್ನೂ ತಾನೇ ಮಾಡುತ್ತಿದ್ದರೂ ಆ ಕರ್ಮಗಳ ಬಂಧನವು ಅವನಿಗೆ ಎಂದಿಗೂ ಆಗುವುದಿಲ್ಲ. ಏಕೆಂದರೆ ಅವನು ಸ್ವತಂತ್ರನು, ಫಲಾಪೇಕ್ಷೆ ಇಲ್ಲದವನು, ನಿಸ್ಪೃಹನು ಮತ್ತು ಚತುರ್ದಶ ಭುವನಗಳಿಗೆ ಒಡೆಯನು,

[ವಿಶೇಷಾಂಶ : ಓಂ ಸಂಭೋಗಪ್ರಾಪ್ತಿರಿತಿ ಚೇನ್ನ ವೈಶೇಷ್ಯಾತ್ ಓಂ ಎಂಬ ಬ್ರಹ್ಮಸೂತ್ರದಲ್ಲಿಯೂ ಅದರ ಭಾಷ್ಯದಲ್ಲಿಯೂ ಶ್ರೀಹರಿಗೆ ಯಾವ ವಿಧವಾದ ಕರ್ಮಲೇಪವೂ ಯಾವ ಕಾಲದಲ್ಲಿಯೂ ಇಲ್ಲವೆಂಬುದನ್ನು ಸ್ಪಷ್ಟಪಡಿಸಲಾಗಿದೆ.

**ನ ಮಾಂ ಕರ್ಮಾಣಿ ಲಿಂಪಂತಿ ನ ಮೇ ಕರ್ಮಫಲೇ ಸ್ಪೃಹಾ ।**
**ಇತಿ ಮಾಂ ಯೋಽಭಿಜಾನಾತಿ ಕರ್ಮಭಿರ್ನ ಸ ಬಧ್ಯತೇ ॥** —ಗೀತಾ

ಕರ್ಮಗಳು ನನ್ನನ್ನು ಸಂಬಂಧಿಸುವುದಿಲ್ಲ, ನಾನು ನಿರ್ಲಿಪ್ತನು, ನನಗೆ ಕರ್ಮಗಳ ಫಲದಲ್ಲಿ ಇಚ್ಛೆಯಿಲ್ಲ ಹೀಗೆಂದು ನನ್ನನ್ನು ಯಾರು ತಿಳಿದುಕೊಳ್ಳುತ್ತಾರೆಯೋ ಅವರಿಗೂ ಸಹ ಕರ್ಮಗಳಿಂದ ಬಂಧನವಿಲ್ಲ.]

**ಸಂಪೂರ್ಣಜ್ಞಾನವತ್ವಾಚ್ಚ ನಿಸ್ಪೃಹತ್ವಾಚ್ಚ ಕರ್ಮಣಾಮ್ ।**
**ಊರ್ಣನಾಭಿರ್ಯಥಾ ಸೃಷ್ಟ್ವಾ ತಂತುಜಾಲಂ ತು ತದ್ಗತಃ ॥ ೪೦ ॥**
**ಅಬದ್ಧ ಏವ ಸರ್ವಾಂಶ್ಚ ಜಂತೂನ್ ಬಂಧಯತಿ ಸ್ವಯಮ್ ।**
**ಪಶ್ಚಾತ್ತದೇವ ಗ್ರಸತಿ ತದ್ವದೇವ ಹರಿಃ ಸ್ವಯಮ್ ॥ ೪೧ ॥**

ಸಂಪೂರ್ಣ ಜ್ಞಾನಯುಕ್ತನಾದ ಕಾರಣದಿಂದಲೂ, ಫಲಾಪೇಕ್ಷಾರಹಿತನಾದುದರಿಂದಲೂ ಶ್ರೀಹರಿಗೆ ಕರ್ಮಲೇಪವಿಲ್ಲ. ಜೇಡರಹುಳು ತಾನೇ ತಂತುಗಳಿಂದ ಬಲೆಯನ್ನು ನಿರ್ಮಿಸಿ, ತಾನುಮಾತ್ರ ಅದರಲ್ಲಿ ಸಿಕ್ಕಿಕೊಳ್ಳದೇ, ಇತರ ಸಣ್ಣ ಸಣ್ಣ ಹುಳುಗಳು ಆ ಜಾಲದಲ್ಲಿ ಸಿಕ್ಕಿದಾಗ ಅವುಗಳನ್ನು ತಿನ್ನುತ್ತದೆ. ಅದರಂತೆ ಶ್ರೀಹರಿಯು ತನ್ನಿಂದಲೇ ನಿರ್ಮಿತವಾದ ಜಗತ್ತಿನಲ್ಲಿ ಯಾವ ಕರ್ಮಲೇಪವನ್ನೂ ಹೊಂದುವುದಿಲ್ಲ. ಅಂತ್ಯದಲ್ಲಿ ಜಗತ್ತನ್ನೇ ನುಂಗುತ್ತಾನೆ.

**ತತ್ ಪ್ರವಿಶ್ಯ ಚ ತದ್ಗೋಽಪಿ ಕರ್ತಾಪ್ಯೇವಂ ನ ಲಿಪ್ಯತೇ ।**
**ನಿದರ್ಶನಾರ್ಥಂ ಲೋಕಾನಾಂ ಸ್ವಶಕ್ತ್ಯಾ ಬೃಂಹಿತಾಃ ಪರೇ ॥ ೪೨ ॥**

ತಾನೇ ಸೃಷ್ಟಿಸಿದ ಜಗತ್ತಿನಲ್ಲಿ ಪ್ರವೇಶಿಸಿ, ಎಲ್ಲೆಡೆಯಲ್ಲಿಯೂ ವ್ಯಾಪಿಸಿದ್ದರೂ ಕರ್ಮಗಳು ಅವನನ್ನು ಲೇಪಿಸುವುದಿಲ್ಲ. ತನ್ನ ಸ್ವರೂಪಭೂತವಾದ ಸಾಮರ್ಥ್ಯವನ್ನು ತನ್ನ ಅಸಂಖ್ಯಾತವಾದ ವ್ಯಾಪಾರಗಳಿಂದ ಪ್ರದರ್ಶಿಸಿ ಅನೇಕ ನಿದರ್ಶನಗಳ ಮೂಲಕ ತನ್ನ ಸಾಮರ್ಥ್ಯವೇನೆಂಬುದನ್ನು ಜನರಿಗೆ ತಿಳಿಯಪಡಿಸುತ್ತಾನೆ.

**ಅತೀವಾಟಿತಶಕ್ತೇಶ್ಚ ಪ್ರಾಕಟ್ಯಾಯ ಮಹಾತ್ಮನಾ ।**
**ತೇನ ಸೃಷ್ಟಸ್ಯ ಜೀವಸ್ಯ ಶಕ್ತಿರ್ನೈತಾದೃಶೀ ಖಲು ॥ ೪೩ ॥**
**ಕಿಮು ಸ್ರಷ್ಟುರಿತಿ ಜ್ಞಾತುಂ ಸೃಷ್ಟ್ವಾ ಊರ್ಣಾದಯೋಸವಃ ।**
**ಅಪಾದಗಮನೇ ಚೈವ ಚಕ್ಷುಷಾ ಶ್ರವಣೇಽಪಿ ಚ ॥ ೪೪ ॥**

ತನ್ನ ಅಪಾರ ಸಾಮರ್ಥ್ಯವನ್ನು ತೋರಿಸಲು ಶ್ರೀಹರಿಯು ತನ್ನಿಂದ ಸೃಷ್ಟಿಸಲ್ಪಟ್ಟ ಜೀವರ ಶಕ್ತಿಗಳನ್ನು ವಿಚಿತ್ರವಾಗಿರುವಂತೆ ಮಾಡಿರುತ್ತಾನೆ. ಜೇಡರಹುಳುವೇ ಮೊದಲಾದ ಪ್ರಾಣಿಗಳು, ಕಾಲಿಲ್ಲದೆ ನಡೆಯುವ ಪ್ರಾಣಿಗಳು, ಕಣ್ಣುಗಳಿಂದಲೇ ಶ್ರವಣಮಾಡುವ ಜಂತುಗಳು,

**ದೃಷ್ಟಾಂತಾಯ ಸ ವೈ ಸೃಷ್ಟೋ ಮಹಾಸರ್ಪೋ ಮಹಾತ್ಮನಾ ।**
**ದ್ರಷ್ಟುಂ ವಿನಾ ಪಿ ವೈ ಚಕ್ಷುಃ ಸಮರ್ಥೋsಹಮಿತಿ ಸ್ಫುಟಮ್ ॥ ೪೫ ॥**

ಮಹಾಸರ್ಪಗಳು, ಕಣ್ಣುಗಳಿಲ್ಲದೆಯೇ ನೋಡಬಲ್ಲ ಜಂತುಗಳು ಇವನ್ನು ಸೃಷ್ಟಿಸಿ ತಾನು ಎಂತಹ ಮಹಾಮಹಿಮನೆಂಬುದನ್ನು ತೋರಿಸಿರುತ್ತಾನೆ.

**ಜ್ಞಾಪನಾಯ ಸೃಜನ್ ಮೂರ್ಧ್ನಾ ಕೃಮಿಂ ಚಕ್ಷುವಿವರ್ಜಿತಮ್ ।**
**ಸೌಧಾನಿ ಸುರಭಿರ್ಲೋಕೇ ಗಿರತ್ಯದ್ಗಿರತಿ ಸ್ವಯಮ್ ॥ ೪೬ ॥**

ಇದೇ ಕಾರಣಕ್ಕಾಗಿ ತಲೆಯಿಂದಲೇ ನಡೆಯುವ, ಕಣ್ಣುಗಳಿಲ್ಲದ ಕ್ರಿಮಿಗಳನ್ನು ಸೃಷ್ಟಿಸಿರುತ್ತಾನೆ. ಸುವಾಸನೆಯನ್ನು ಬೀರುವ ಸಸ್ಯವರ್ಗವನ್ನು ಸೃಷ್ಟಿಸಿ ಅಂತಹ ಸುವಾಸನೆಯನ್ನು ತಾನೇ ಸ್ವೀಕರಿಸುತ್ತಾನೆ.

**ದದಾತ್ಯಭಿಮತಾನ್ ಕಾಮಾನ್ ತಥಾಯಂ ಭಗವಾನ್ ಹರಿಃ ।**
**ಅತಿ ದೌರ್ಘಟ್ಯಕರಣಜ್ಞಾಪನಾಯ ಚ ತಂ ಪಶುಮ್ ॥ ೪೭ ॥**
**ತಥಾ ಸಮಸ್ತಫಲದಜ್ಞಾಪನಾಯ ಚ ಸೃಷ್ಟವಾನ್ ।**
**ಜಡೈಶ್ಚೇತಾನಿ ಕೃತ್ಯಾನಿ ಚೇತನೈಶ್ಚ ಜಡಕ್ರಿಯಾಮ್ ॥ ೪೮ ॥**

ತನ್ನ ಅಘಟನಘಟನಾ ಶಕ್ತಿಯನ್ನು ಪ್ರದರ್ಶಿಸಲು ಶ್ರೀಹರಿಯು ಅನೇಕ ವಿಧವಾದ ಪಶುಗಳನ್ನು ಸೃಷ್ಟಿಸಿರುತ್ತಾನೆ, ಭಕ್ತರ ಮನೋಭೀಷ್ಟಗಳನ್ನು ಈಡೇರಿಸುತ್ತಾನೆ, ವಿಧವಿಧವಾದ ವಸ್ತುಗಳನ್ನು ನಿರ್ಮಾಣಮಾಡಿರುತ್ತಾನೆ, ಜಡವಸ್ತುಗಳಿಂದ ಚೇತನನು ಮಾಡುವ ಕರ್ಮಗಳನ್ನು ಮಾಡಿಸುತ್ತಾನೆ, ಚೇತನ ದಿಂದ ಜಡವಸ್ತುಗಳ ಕರ್ಮಗಳನ್ನು ಮಾಡಿಸುತ್ತಾನೆ.

**ಅಹಂಕಾರಯಿತುಂ ದಕ್ಷ ಇತಿ ಜ್ಞಾನಾಯ ಸ ಪ್ರಭುಃ ।**
**ಚಿಂತಾಮಣಿಂ ಕಲ್ಪತರುಂ ಪರ್ವತಾನ್ ಸೃಷ್ಟವಾನ್ ಪ್ರಭುಃ ॥ ೪೯ ॥**

ತಾನು ಸರ್ವ ಸಮರ್ಥನೆಂಬುದನ್ನು ಜ್ಞಾಪಿಸಲು ಪ್ರಭುವಾದ ಶ್ರೀಹರಿಯು ಚಿಂತಾಮಣಿ, ಕಲ್ಪವೃಕ್ಷ ದೊಡ್ಡ ದೊಡ್ಡ ಪರ್ವತಗಳನ್ನು ಸೃಷ್ಟಿಸಿರುತ್ತಾನೆ.

**ಜಡಂ ಚ ಚೇತನಂ ಕರ್ತುಂ ಚೇತನಂ ಜಡತಾಂ ತಥಾ ।**
**ಕರ್ತುಂ ಸಮರ್ಥೋ ಭಗವಾನಚಿಂತ್ಯಾದ್ಭುತಶಕ್ತಿಮಾನ್ ॥ ೫೦ ॥**

ಕಲ್ಪನಾತಾತೀತವಾದ ಸಾಮರ್ಥ್ಯವುಳ್ಳ ಶ್ರೀಹರಿಯು ಜಡವನ್ನು ಚೇತನವನ್ನಾಗಿಯೂ, ಚೇತನವನ್ನು ಜಡವನ್ನಾಗಿಯೂ ಮಾಡಬಲ್ಲ.

[**ವಿಶೇಷಾಂಶ : ಓಂ ಆತ್ಮನಿ ಚೈವಂ ವಿಚಿತ್ರಾಶ್ಚ ಹಿ ಓಂ** ಎಂಬ ಸೂತ್ರದಲ್ಲಿಯೂ ತದ್ಗತ ಭಾಷ್ಯದಲ್ಲಿಯೂ ಶ್ರೀಹರಿಯು ಅಚಿಂತ್ಯಾದ್ಭುತಶಕ್ತಿಯುಕ್ತನೆಂದು ಪ್ರತಿಪಾದಿಸಲ್ಪಟ್ಟಿದೆ.]

**ಗುಣಾಃ ಸುಮಂಗಲಾಃ ಪೂರ್ಣಾಃ ಸುವಿರುದ್ಧಾಶ್ಚ ಲೋಕತಃ ।**
**ಸಂತಿ ವಿಷ್ಣೋರ್ಜಗದ್ ವ್ಯಾಪ್ತೇರ್ಜ್ಞಾತಾಽಜ್ಞಾತಾಃ ಶ್ರುತಾಶ್ರುತಾಃ ॥೩೧**

ಈ ಜಗತ್ತಿನಲ್ಲಿ ವ್ಯಾಪ್ತನಾಗಿರುವ ವಿಷ್ಣುವಿನಲ್ಲಿ ಲೋಕವಿರುದ್ಧಗಳಾದ, ಅಪ್ರಾಕೃತಗಳಾದ, ಅತ್ಯಂತ ಶುಭಗಳಾದ, ಪೂರ್ಣವಾದ, ಅಸಂಖ್ಯಾತವಾದ, ತಿಳಿದಿರುವ, ತಿಳಿಯದೇ ಇರುವ, ಕೇಳಲ್ಪಟ್ಟ, ಕೇಳಲ್ಪಡದ ಗುಣಗಳು ತುಂಬಿವೆ. ಪ್ರತಿಯೊಂದು ಗುಣವೂ ಪೂರ್ಣವಾಗಿದೆ.

**ಅನಂತಗುಣವತ್ವಾಚ್ಚ ತತ್ಪ್ರವೃತ್ತಿನಿಮಿತ್ತಿಕಾಃ ।**
**ಶಬ್ದಾಃ ಸರ್ವೇ ವಿಷ್ಣುಮೇವ ವದಂತ್ಯನ್ಯೋಽನ್ಯಮುಖ್ಯತಃ ॥ ೩೨ ॥**

ಶ್ರೀವಿಷ್ಣುವು ಅಸಂಖ್ಯಾತಗುಣಗಳಿಂದ ಪರಿಪೂರ್ಣನಾಗಿರುವ ಪ್ರಯುಕ್ತ ಇದನ್ನು ಪ್ರತಿಪಾದಿಸಲು ಸಮಸ್ತ ಶಬ್ದಗಳೂ ಪರಮಮುಖ್ಯವೃತ್ತಿಯಿಂದ ಶ್ರೀವಿಷ್ಣುವನ್ನೇ ತಿಳಿಸುತ್ತವೆ.

(ನಾಮಾನಿ ಸರ್ವಾಣಿ ಯಮಾವಿಶಂತಿ ತಂ ವೈ ವಿಷ್ಣುಂ ಪರಮಮುದಾಹರಂತೀತಿ ಭಾಲ್ಲವೇಯ ಶ್ರುತಿಃ—ಭಾಷ್ಯೋದಾಹೃತ. ಹೆಸರೇ ಮೊದಲಾದ ಸಮಸ್ತ ಶಬ್ದಗಳೂ ಯಾರನ್ನು ಪರಮ ಮುಖ್ಯವೃತ್ತಿಯಿಂದ ಹೇಳುತ್ತವೆಯೋ ಅಂತಹ ಸರ್ವೋತ್ತಮನನ್ನು ವಿಷ್ಣುವೆಂದು ಹೇಳುತ್ತಾರೆ.)

**ಏಕೇನ ಗುಣಯೋಗೇನ ಶಬ್ದೈಃ ಕತಿಪಯೈಃ ಪರೈಃ ।**
**ವೃತ್ತ್ಯಾ ತ್ವಮುಖ್ಯಯಾ ವಾಚ್ಯಾ ಜಿಜ್ಞಾಸಾ ವಿಷಯಾ ನ ಚ ॥ ೩೩ ॥**

ಕೇವಲ ಒಂದೇ ಗುಣವಿದ್ದು ಕೆಲವು ಶಬ್ದಗಳಿಂದ ಮಾತ್ರ ಅಮುಖ್ಯವೃತ್ತಿಯಿಂದ ನಿರ್ದೇಶಿಸಲ್ಪಡುವವನಾಗಿದ್ದರೆ ಅಂತಹವನು ಜಿಜ್ಞಾಸ್ಯಕ್ಕೆ ವಿಷಯನಾಗಲಾರನು.

**ದುಃಖೈಕರೂಪಸಂಸಾರಾತ್ ಪ್ರಸಾದೇನ ಚ ಚಕ್ರಿಣಃ ।**
**ಮುಚ್ಯತೇ ಕರ್ಮಪಾಶೈಸ್ತು ನಾನ್ಯೋಪಾಯೈಃ ಕದಾಚನ ॥ ೩೪ ॥**

ಕೇವಲ ದುಃಖಪ್ರಚುರವಾದ ಸಂಸಾರದಿಂದ ಬಿಡುಗಡೆಯಾಗಿ ಕರ್ಮಪಾಶ ಗಳಿಂದ ಮುಕ್ತಿ ಪಡೆಯಬೇಕಾದಲ್ಲಿ ಆ ಚಕ್ರಪಾಣಿಯಾದ ಶ್ರೀಹರಿಯ ಪ್ರಸಾದ ವಲ್ಲದೇ ಅನ್ಯ ಮಾರ್ಗವಿಲ್ಲ.

(ಯಮೇವೈಷ ವೃಣುತೇ ತೇನ ಲಭ್ಯಃ ; ನಾನ್ಯಃ ಪಂಥಾ ಅಯನಾಯ ವಿದ್ಯತೇ—ಭಾಷ್ಯೋದಾಹೃತ. ಶ್ರೀಹರಿಯು ಅನುಗ್ರಹದಿಂದ ಯಾರನ್ನು ಸ್ವೀಕರಿಸು ತ್ತಾನೆಯೋ ಅಂತಹವನಿಗೆ ಮಾತ್ರ ಲಭ್ಯ ; ಮೋಕ್ಷಕ್ಕೆ ಬೇರೆ ಮಾರ್ಗವಿಲ್ಲ).

**ತಸ್ಮಾತ್ ಮುಮುಕ್ಷುಭಿಃ ಕರ್ಮಪಾಶಾದಸ್ಮಾದನರ್ಥದಾತ್ ।**
**ನಾರಾಯಣಸ್ತು ಜಿಜ್ಞಾಸ್ಯಃ ಪರಮೋ ವಿಷ್ಣುರವ್ಯಯಃ ॥ ೫೫ ॥**

ಕರ್ಮಪಾಶದಿಂದ ಬಿಡುಗಡೆ ಹೊಂದಿ ಮೋಕ್ಷವನ್ನು ಅಪೇಕ್ಷಿಸುವ ಅಧಿಕಾರಿ ಗಳು, ಸರ್ವಗುಣಪರಿಪೂರ್ಣನಾದ, ಸಮಸ್ತದೋಷರಹಿತನಾದ, ಸರ್ವೋತ್ತಮ ನಾದ, ನಾಶರಹಿತನಾದ ವಿಷ್ಣುವನ್ನು ಜಿಜ್ಞಾಸೆ ಮಾಡಬೇಕು. (ಶ್ರವಣ, ಮನನ, ಧ್ಯಾನರೂಪವಾದ ಕರ್ಮ—ಪರಮಾತ್ಮನ ಮಹಾಮಹಿಮೆಯನ್ನು ಯಥಾಮತಿ ತಿಳಿಯಲು ಪ್ರಯತ್ನ.)

**ಪ್ರಸಾದಃ ಕರ್ಮಣಾ ಜಾತಃ ಸ ಹರೇರಧಮಃ ಸ್ಮೃತಃ ।**
**ಜಾತಸ್ತು ಶ್ರವಣಾದಿಭ್ಯೋ ಮಧ್ಯಮಃ ಪರಿಕೀರ್ತಿತಃ ॥ ೫೬ ॥**

ಕೇವಲ ಸಾಮಾನ್ಯ ಸತ್ಕರ್ಮಾನುಷ್ಠಾನದಿಂದ ಬರುವ ಶ್ರೀಹರಿಯ ಅನುಗ್ರಹವು ಅಧಮವೆಂದು ಹೇಳಲ್ಪಡುತ್ತದೆ ; ಉತ್ತಮ ಸತ್ಕರ್ಮಾನುಷ್ಠಾನದ ಜೊತೆಗೆ ಶ್ರೀಹರಿಯ ಕಥಾಶ್ರವಣವನ್ನು ಆದರದಿಂದ ಮಾಡಿದರೆ ದೊರೆಯುವ ಶ್ರೀಹರಿಯ ಅನುಗ್ರಹವು ಮಧ್ಯಮವೆಂದು ಹೇಳಲ್ಪಡುತ್ತದೆ.

**ಅಪರೋಕ್ಷದೃಶಾ ಜಾತಃ ಪ್ರಸಾದೋ ಹ್ಯುತ್ತಮೋತ್ತಮಃ ।**
**ಅಧಮಾತ್ ಸ್ವರ್ಗಲೋಕಾದಿ ಮಧ್ಯಮಾತ್ ಬ್ರಹ್ಮಣಃ ಪದಮ್ ॥ ೫೭ ॥**
**ಉತ್ತಮಾನ್ಮೋಕ್ಷಮಾಪ್ನೋತಿ ಪ್ರಸಾದಾಚ್ಚಕ್ರಪಾಣಿನಃ ।**
**ಗುಣೋತ್ಕರ್ಷಂ ಹರೇರ್ಜ್ಞಾತುರಪರೋಕ್ಷಂ ಭವೇತ್ ಧ್ರುವಮ್ ॥ ೫೮ ॥**

ಅಪರೋಕ್ಷಜ್ಞಾನಕ್ಕೆ (ಭಗವಂತನ ಬಿಂಬರೂಪ ಸಾಕ್ಷಾತ್ಕಾರಕ್ಕೆ) ಅವಶ್ಯಕ ವಾದ ಪ್ರಸಾದವು ಅತ್ಯುತ್ತಮ. ಅಧಮಾನುಗ್ರಹದಿಂದ ಸ್ವರ್ಗಾದಿ ಲೋಕಗಳಲ್ಲಿ ಸುಖಾನುಭವವೂ, ಮಧ್ಯಮಾನುಗ್ರಹದಿಂದ ಸತ್ಯಲೋಕದಲ್ಲಿ ಸುಖಾನುಭವವೂ ಚಕ್ರಪಾಣಿಯ ಅತ್ಯುತ್ತಮ ಪ್ರಸಾದದಿಂದ ಮೋಕ್ಷವೆಂಬ ಪುರುಷಾರ್ಥವೂ ಲಭಿಸು ತ್ತದೆ. ಯಾರು ಶ್ರೀಹರಿಯ ಅಸದೃಶವಾದ ಗುಣಗಳನ್ನು ಅರಿತು ಉಪಾಸನೆಯನ್ನು ಮಾಡುತ್ತಾನೆಯೋ ಅವನಿಗೆ ಅಪರೋಕ್ಷ ಜ್ಞಾನವು ನಿಶ್ಚಯವಾಗಿ ಆಗುತ್ತದೆ.

(ಸ್ವರ್ಗಾದಿ ಲೋಕಗಳಿಂದಲೂ, ಸತ್ಯಲೋಕದಿಂದಲೂ, ಪುಣ್ಯಕ್ಷಯವಾದ ಕೂಡಲೇ ಭೂಲೋಕಕ್ಕೆ ಬರುತ್ತಾರೆ. ಆದರೆ ಅಪರೋಕ್ಷ ಜ್ಞಾನಾನಂತರ ಮುಕ್ತಿ ಸ್ಥಾನಕ್ಕೆ ಹೋದವರು ಸಂಸಾರಾವಸ್ಥೆಗೆ ಎಂದಿಗೂ ಬರುವುದಿಲ್ಲ.)

[ವಿಶೇಷಾಂಶ : **ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ**
**ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ ॥** —ಗೀತಾ

ಸಾಮಾನ್ಯ ಪುಣ್ಯಶಾಲಿಗಳು ವಿಶಾಲವಾದ ಸ್ವರ್ಗಲೋಕದಲ್ಲಿ ಸುಖವನ್ನು ಅನುಭವಿಸಿ ಪುಣ್ಯನಾಶವಾಗಲು ಮನುಷ್ಯಲೋಕವನ್ನು ಹೊಂದುತ್ತಾರೆ.]

(ಮುಖ್ಯವಾದ ಮೋಕ್ಷಫಲಕ್ಕೆ **ಓಂ ಆನಂದಾದಯಃ ಪ್ರಧಾನಸ್ಯ ಓಂ** ಎಂಬ ಬ್ರಹ್ಮಸೂತ್ರದಲ್ಲಿ ಹೇಳಿರುವಂತೆ ಪರಮಾತ್ಮನು ಆನಂದರೂಪನು, ಜ್ಞಾನರೂಪನು, ನಿರ್ದೋಷಿಯು, ಸದಾ ಸರ್ವನಿಯಾಮಕನು ಎಂಬ ನಾಲ್ಕು ಗುಣಗಳಿಂದ ಉಪಾಸನೆ ಮಾಡಲೇಬೇಕು.)

**ನ ಜ್ಞಾಯತೇ ಗುಣೋತ್ಕರ್ಷೋ ವಿನಾ ಶಬ್ದಸಮನ್ವಯಮ್ ।**
**ತತ್ಸಮನ್ವಯವಿಜ್ಞಪ್ತಿರ್ಬಹುಧಾ ಶ್ರವಣೇನ ಚ ॥ ೫೯ ॥**

ಪರಮಾತ್ಮನಿಗೆ ಸರ್ವಶಬ್ದ ವಾಚ್ಯತ್ವವನ್ನು ಅರಿತು ಸಕಲ ಶಬ್ದಗಳನ್ನೂ ಪರಮಾತ್ಮನ ಪರವಾಗಿ ಸಮನ್ವಯಃ ಮಾಡಲು ತಿಳಿಯದಿದ್ದರೆ ಪರಮಾತ್ಮನ ಸಮಸ್ತ ಗುಣಪರಿಪೂರ್ಣತ್ವವು ಸಿದ್ಧಿಸುವುದಿಲ್ಲ. ಈ ರೀತಿ ಸಮನ್ವಯ ಮಾಡಲು ಶ್ರೀಹರಿಯ ಕಥಾಗಳನ್ನೂ, ಮಹಾಮಹಿಮೆಗಳನ್ನೂ ಅನೇಕಬಾರಿ ಶ್ರವಣ ಮಾಡಬೇಕು.

[**ವಿಶೇಷಾಂಶ :** ಸಮನ್ವಯವೆಂದರೆ, ಉಪಕ್ರಮ (ಪ್ರಾರಂಭ), ಉಪಸಂಹಾರ (ಅಂತ್ಯ), ಅಭ್ಯಾಸ (ಪದ್ಧತಿ), ಅಪೂರ್ವತಾ (ಹೊಸ ವಿಷಯಗಳನ್ನು ನಿರೂಪಿಸುವುದು), ಫಲಂ (ಫಲ), ಅರ್ಥವಾದ, ಉಪಪತ್ತಿ (ಯುಕ್ತಿಗೆ ವಿರೋಧವಿಲ್ಲದಿರುವುದು) ಎಂಬ ಲಕ್ಷಣಗಳನ್ನು ತಿಳಿದು ಅವುಗಳ ಪ್ರಕಾರ ವಾಕ್ಯಗಳಿಗೆ, ಶಬ್ದಗಳಿಗೆ, ತಾತ್ಪರ್ಯನಿರ್ಣಯಮಾಡುವ ಕ್ರಮ.

ಪರಮಾತ್ಮನ ಕಥಾಗಳನ್ನೂ ಮಹಿಮೆಗಳನ್ನೂ ತಿಳಿಸುವ ಭಾಗವತಾದಿ ಗ್ರಂಥಗಳನ್ನು ಗುರುಮುಖೇನ ಅನೇಕ ಬಾರಿ (ಪ್ರತಿ ನಿತ್ಯವೂ) ಶ್ರವಣ ಮಾಡಬೇಕು. ಈ ಸಾಧನಕ್ರಮವು ಬ್ರಹ್ಮಸೂತ್ರಭಾಷ್ಯದ ಆವೃತ್ತ್ಯಧಿಕರಣದಲ್ಲಿ ಒತ್ತಿ ಹೇಳಲ್ಪಟ್ಟಿದೆ. ಒಂದೆರಡು ಬಾರಿ ಶ್ರವಣದಿಂದ ಶ್ರೀಹರಿಯ ಸರ್ವೋತ್ತಮತ್ವವೇ ಮೊದಲಾದ ಗುಣಗಳು ಮನಸ್ಸಿನಲ್ಲಿ ದೃಢವಾಗಿ ನಿಲ್ಲಲಾರವು.]

*

**ಮನನೇನ ಭವತ್ಯದ್ಧಾ ಶೃಣುಯಾತ್ಸತತಂ ತತಃ ।**
**ಬ್ರಹ್ಮಾದಿಮಾನುಷಾಂತಾಶ್ಚ ಜ್ಞೇಯಾಸ್ತರತಮಾಃ ಕ್ರಮಾತ್ ॥ ೬೦ ॥**

ನಿತ್ಯದಲ್ಲಿಯೂ ಶ್ರವಣಮಾಡುವುದರಿಂದಲೂ ಮತ್ತು ಶ್ರವಣಮಾಡಿದುದನ್ನು ಮನನ ಮಾಡುವುದರಿಂದಲೂ ಸಂಶಯ, ಭ್ರಾಂತಿಗಳು ಹೋಗಿ ನಿಶ್ಚಿತವಾದ ಜ್ಞಾನವು ದೃಢವಾಗುತ್ತದೆ. ಆದುದರಿಂದ ಸತತವಾಗಿ ಶ್ರವಣಮಾಡಬೇಕು. ಚತುರ್ಮುಖಬ್ರಹ್ಮದೇವರಿಂದ ಮನುಷ್ಯೋತ್ತಮರವರೆಗೂ ಇರುವ ಅನೇಕ ತಾರತಮ್ಯಜ್ಞಾನವನ್ನು ಪಡೆಯಬೇಕು.

**ಜ್ಞಾತೇ ತರತಮೇ ಭಾವೇ ವಿಷ್ಣೋರ್ಮಾಹಾತ್ಮ್ಯಮಂಜಸಾ ।**
**ಜ್ಞಾಯತೇ ನಿಷ್ಫಲಂ ಕರ್ತುಂ ತಸ್ಮಾದೇತನ್ನಿಶಮ್ಯತಾಮ್ ॥ ೬೧ ॥**

ತಾರತಮ್ಯಜ್ಞಾನ ಬರಲು ವಿಷ್ಣುವೇ ಸರ್ವೋತ್ತಮನೆಂಬ ವಿಷಯವೂ, ವಿಷ್ಣುವಿನ ಮಾಹಾತ್ಮ್ಯೆಯು ಕಲ್ಪನಾತೀತವೆಂಬ ವಿಚಾರವೂ ಚೆನ್ನಾಗಿ ಮನಸ್ಸಿನಲ್ಲಿ ನಿಲ್ಲುತ್ತವೆ. ಇತರ ದೇವತೆಗಳನ್ನು ಸರ್ವೋತ್ತಮಜ್ಞಾನದಿಂದ ಭಜಿಸುವುದು ನಿಷ್ಫಲವೆಂಬ ಜ್ಞಾನವೂ ಉತ್ಪನ್ನವಾಗುತ್ತದೆ. ಅಂತಹ ತಾರತಮ್ಯ ಲಕ್ಷಣವನ್ನು ಶ್ರವಣಮಾಡು.

**ಕೋಶಶೌರ್ಯವಯಃಪುತ್ರದೇಹದಾರ್ಢ್ಯಯುತಸ್ಯ ಚ ।**
**ಸಪ್ತದ್ವೀಪವತೀಭರ್ತುಃ ಯತ್ಸುಖಂ ಜಾಯತೇಽತುಲಮ್ ॥ ೬೨ ॥**
**ಸ ಏಕೋ ಮಾನುಷಾನಂದೋ ಮೋಕ್ಷೇ ತು ಪ್ರತಿಪದ್ಯತೇ ।**

ಐಶ್ವರ್ಯ, ಶೌರ್ಯ, ಯೌವನ, ಸತ್ಪುತ್ರ, ದೇಹಾರೋಗ್ಯ, ಬಲ ಇವುಗಳಿಂದ ಯುಕ್ತನಾದವನು ಸಪ್ತದ್ವೀಪಗಳಿಗೆ ರಾಜನಾಗಿದ್ದರೆ ಎಷ್ಟು ಸುಖವು ಲಭಿಸುತ್ತದೆಯೋ ಅದು ಮೋಕ್ಷದಲ್ಲಿ ಒಂದು ಮನುಷ್ಯಾನಂದವೆಂದು ಹೇಳಲ್ಪಡುತ್ತದೆ.

(ಮೇಲೆ ತಿಳಿಸಿದ ಈ ಜಗತ್ತಿನಲ್ಲಿರುವ ಆನಂದವು ಪ್ರಕೃತಿಸಂಬಂಧವುಳ್ಳದ್ದು. ಮೋಕ್ಷದಲ್ಲಿ ಸ್ವಸ್ವರೂಪದ ಆವಿರ್ಭಾವದಿಂದ ಅನುಭವಕ್ಕೆ ಬರುವ ಆನಂದವು ಅಲೌಕಿಕವಾದುದು. ಅದರ ಲಕ್ಷಣವೇ ಬೇರೆ. ತಾರತಮ್ಯದ ಕಲ್ಪನೆ ಬರಲು ಲೌಕಿಕ ಆನಂದದ ಉದಾಹರಣೆಯು ಕೊಡಲ್ಪಟ್ಟಿದೆ ಎಂಬ ವಿಷಯವನ್ನು ಮರೆಯಬಾರದು.)

**ತಸ್ಮಾತ್ ಶತಗುಣಾನಂದೋ ಮಹೀಶಾನಾಂ ನಿಗದ್ಯತೇ ॥ ೬೩ ॥**

ಮನುಷ್ಯಾನಂದದ ನೂರರಷ್ಟು ಆನಂದವು ಚಕ್ರವರ್ತಿಗಳಿಗೆ ದೊರೆಯುತ್ತದೆ. (ಇಲ್ಲಿ ಚಕ್ರವರ್ತಿಯೆಂದರೆ ಸ್ವರೂಪದಿಂದಲೇ ಚಕ್ರವರ್ತಿಗಳಾದವರು—ಉತ್ತಾನ-ಪಾದ, ಮಾಂಧಾತ ಮುಂತಾದವರಂತೆ.)

**ತಸ್ಮಾತ್ ಶತಗುಣಾನಂದಾ ಗಂಧರ್ವಾ ಮಾನುಷಾತ್ಮಕಾಃ ।**
**ತಸ್ಮಾತ್ ಶತಗುಣಾನಂದಾ ಗಂಧರ್ವಾ ದೇವಸಂಜ್ಞಕಾಃ ॥ ೬೪ ॥**

ಚಕ್ರವರ್ತಿಗಳ ಆನಂದದ ನೂರರಷ್ಟು ಮನುಷ್ಯ-ಗಂಧರ್ವರಿಗೆ; ಅದಕ್ಕಿಂತಲೂ ನೂರರಷ್ಟು ದೇವ-ಗಂಧರ್ವರಿಗೆ.

**ತಸ್ಮಾತ್ ಶತಗುಣಾನಂದೋ ಭವೇತ್ ಪಿತೃಗಣಸ್ಯ ಚ ।**
**ಪಿತೃಭ್ಯಶ್ಚ ಶತಾನಂದಃ ಕರ್ಮಜಾನಾಮಿತೀರಿತಮ್ ॥ ೬೫ ॥**

ದೇವ-ಗಂಧರ್ವರ ಆನಂದದ ನೂರರಷ್ಟು ಪಿತೃದೇವತೆಗಳಿಗೆ, ಅದಕ್ಕಿಂತಲೂ ನೂರರಷ್ಟು ಕರ್ಮಜದೇವತೆಗಳಿಗೆ.

**ಕರ್ಮಜೇಭ್ಯಃ ಶತಾನಂದಾಃ ಮುಕ್ತಾಶ್ಚಾಜಾನಜಾಃ ಸುರಾಃ ।**
**ಅಜಾನಜೇಭ್ಯೋ ಧನಪವಿಷ್ವಕ್ಸೇನಗಣಾಧಿಪಾಃ ॥**
**ಶತಾನಂದಾಸ್ತಥೈತೇಭ್ಯ ಋಷಯಸ್ತೇಭ್ಯ ಏವ ಚ ॥ ೬೬ ॥**

ಕರ್ಮಜದೇವತೆಗಳಿಗಿಂತಲೂ ನೂರರಷ್ಟು ಆನಂದವು ಅಜಾನಜದೇವತೆಗಳಿಗೆ; ಅವರಿಗಿಂತ ನೂರರಷ್ಟು ಕುಬೇರ, ವಿಷ್ವಕ್ಸೇನ, ಗಣಪತಿ ಇವರಿಗೆ ; ಇವರಿಗಿಂತಲೂ ನೂರರಷ್ಟು ಋಷಿಗಳಿಗೆ.

**ಶತಾನಂದಾಸ್ತು ನಿರ್ದಿಷ್ಟಾ ಭೃಗುವಹ್ನಿಪ್ರಸೂತಯಃ ।**
**ತೇಭ್ಯಸ್ತು ನಾರದೋ ಹ್ಯಬ್ಧಿಃ ಶತಾನಂದಸ್ತತೋSಪಿ ಚ ॥ ೬೭ ॥**

ಋಷಿಗಳಿಗಿಂತಲೂ ನೂರರಷ್ಟು ಭೃಗು, ಅಗ್ನಿ, ಪ್ರಸೂತಿ ಇವರಿಗೆ. ಇವರಿಗಿಂತಲೂ ನೂರರಷ್ಟು ನಾರದ, ವರುಣರಿಗೆ.

**ಚಂದ್ರಸೂರ್ಯೌ ಮಾನವೀ ಚ ಯಮವಾಯೂ ತಥೈವ ಚ ।**
**ಶತಾನಂದಾಸ್ತತೋ ದಕ್ಷೋ ಧಿಷಣೋ ಮನುರೇವ ಚ ॥ ೬೮ ॥**
**ರತಿಶಕ್ರ್ಯನಿರುದ್ಧಾಶ್ಚ ಶತಾನಂದಾಸ್ತತಃ ಪರಮ್ ।**
**ಶತಾನಂದಾವಿಂದ್ರಕಾಮೌ ತತಸ್ತೂಮಾ ಚ ವಾರುಣೀ ॥ ೬೯ ॥**
**ಸೌಪರ್ಣೀ ಚ ಶತಾನಂದಾ ವೀಂದ್ರಾಹೀಂದ್ರಮೃಡಾಸ್ತತಃ ।**
**ಶತಾನಂದಾಸ್ತತೋ ಬುದ್ಧಿರ್ಗಿರೇತಾಭ್ಯಾಂ ತತಃಪರಮ್ ॥ ೭೦ ॥**
**ವಿಧಿಸೂತ್ರೌ ಶತಾನಂದೌ ಲಕ್ಷ್ಮೀಃ ಕೋಟಿಗುಣಾಧಿಕಾ ।**
**ಏತೇಭ್ಯೋ ಭಗವಾನ್ ವಿಷ್ಣುಃ ಅನಂತಗುಣವಾನ್ ವಿಭುಃ ॥ ೭೧ ॥**

ಚಂದ್ರ, ಸೂರ್ಯ, ಮನುಪತ್ನಿ, ಯಮ, ವಾಯು (ಭೂತವಾಯು) ಇವರಿಗೆ ಇನ್ನೂ ನೂರರಷ್ಟು ಹೆಚ್ಚು, ದಕ್ಷಪ್ರಜಾಪತಿ, ಗುರು, ವೈವಸ್ವತಮನು, ರತಿ, ಶಚಿ, ಅನಿರುದ್ಧ ಇವರಿಗೆ ಇನ್ನೂ ನೂರರಷ್ಟು ಹೆಚ್ಚು, ಇವರಿಗಿಂತಲೂ ನೂರರಷ್ಟು ಹೆಚ್ಚು ಆನಂದ ಇಂದ್ರ ಕಾಮರು ; ಇವರಿಗಿಂತಲೂ ನೂರರಷ್ಟು ಹೆಚ್ಚು ಆನಂದ ಪಾರ್ವತೀ, ವಾರುಣೀ, ಗರುಡಪತ್ನಿ, ಸೌಪರ್ಣಿ ಇವರಿಗೆ. ಇವರಿಗಿಂತ ನೂರು ಪಾಲು ಹೆಚ್ಚು ಆನಂದ ಇಂದ್ರ, ಶೇಷ, ರುದ್ರದೇವರಿಗೆ. ಇವರಿಗಿಂತ ನೂರುಪಾಲು ಅಧಿಕ ಸರಸ್ವತೀ ಭಾರತೀದೇವಿಯರಿಗೆ. ಇವರಿಗಿಂತ ನೂರುಪಾಲು ಅಧಿಕ ಆನಂದ ಜೀವೋತ್ತಮರಾದ ವಾಯುದೇವರು, ಚತುರ್ಮುಖಬ್ರಹ್ಮದೇವರಿಗೆ. ಇವರಿಗೆ ಕೋಟಿಯಷ್ಟು ಆನಂದ ಲಕ್ಷ್ಮೀದೇವಿಯರಿಗೆ. ಇವರೆಲ್ಲರ ಆನಂದವನ್ನು ಸೇರಿಸಿದರೆ ಎಷ್ಟಾಗುವುದೋ ಅದಕ್ಕಿಂತ ಅನಂತಪಾಲು ಅಧಿಕ ಆನಂದ ಶ್ರೀವಿಷ್ಣುವಿಗೆ.

**ಅನಂತಶಕ್ತಿರ್ಭಗವಾನನಂತ-**
**ಗುಣೈರ್ಹ್ಯನಂತೋಽಮಿತರೂಪಧಾಮಾ ।**
**ಸರ್ವೇಷು ರೂಪೇಷು ಸಮಾನಶಕ್ತಿ-**
**ರ್ಗುಣೈಃ ಸಮಾನೋಽಖಿಲಲೋಕಕರ್ತಾ ॥ ೭೨ ॥**

ಶ್ರೀಹರಿಯು ಅನಂತ ಶಕ್ತಿಯುಕ್ತನು, ಅನಂತ ಶುಭಗುಣಗಳಿಂದ ಪರಿಪೂರ್ಣನು, ಅನಂತ ರೂಪಗಳನ್ನುಳ್ಳವನು ; ಎಲ್ಲ ರೂಪಗಳಲ್ಲಿಯೂ ಒಂದೇ ವಿಧವಾದ ಶಕ್ತಿ, ಗುಣ, ಜ್ಞಾನ, ಆನಂದ ಮೊದಲಾದುವುಗಳಿಂದ ಪರಿಪೂರ್ಣನು ; ಈ ಚತುರ್ದಶ ಭುವನಗಳ ಸೃಷ್ಟ್ಯಾದಿಕರ್ತನು.

**ಪ್ರತ್ಯೇಕಶೋ ಗುಣಾ ವ್ಯಾಪ್ತಾಸ್ತಥೈವಾಂಗಾನಿ ಸರ್ವಶಃ ।**
**ಜ್ಞಾನಾನಿ ಶಕ್ತಯಶ್ಚಾಪಿ ತೇಽನಂತಾಶ್ಚ ನ ಸಂಶಯಃ ॥ ೭೩ ॥**

ವ್ಯಾಪ್ತಿಯಿಂದಲೂ, ಗುಣಗಳಿಂದಲೂ, ಶಕ್ತಿಯಿಂದಲೂ, ಇವನು ಪರಿಪೂರ್ಣನೆಂಬುದು ಮಾತ್ರವಲ್ಲ ; ಶ್ರೀಹರಿಯ ಪ್ರತಿಯೊಂದು ಅವಯವವೂ ಅನಂತ ಸಂಖ್ಯೆಗಳಲ್ಲಿದ್ದು, ಅನಂತ ಶಕ್ತಿಯುತವಾಗಿವೆ.

**ಸತ್ವಾದಿಗುಣಹೀನತ್ವಾತ್ ನಿರ್ಗುಣೋ ಹರಿರೀಶ್ವರಃ ।**
**ಅಪ್ರಾಕೃತಶರೀರತ್ವಾತ್ ಅರೂಪೋ ಭಗವಾನ್ ಪ್ರಭುಃ ॥ ೭೪ ॥**

ಸತ್ವರಜಸ್ತಮೋಗುಣಗಳಿಂದ ರಹಿತನಾಗಿರುವ ಕಾರಣದಿಂದ ಶ್ರೀಹರಿಯು "ನಿರ್ಗುಣ"ನೆಂದೂ, ಅಪ್ರಾಕೃತಶರೀರ ಉಳ್ಳವನಾದುದರಿಂದ (ಪ್ರಾಕೃತದೇಹರಹಿತನಾದುದರಿಂದ) "ಅರೂಪ"ನೆಂದೂ ಕರೆಯಲ್ಪಡುತ್ತಾನೆ.

**ಅಸಂಖ್ಯಾವಯವೈರ್ಯೋಗಾನ್ನಿರಂಗಂ ತಂ ವಿದುರ್ಜನಾಃ ।**
**ಅಕ್ಲಿಷ್ಟಕರಣಾದ್ವಿಷ್ಣುಃ ಅಕರ್ತೇತ್ಯಭಿಧೀಯತೇ ॥ ೭೫ ॥**

ಅಸಂಖ್ಯ ಅವಯವಗಳಿಂದ ಯುಕ್ತನಾದ ಪ್ರಯುಕ್ತ "ನಿರಂಗ"ನೆಂದೂ, ತನಗೆ ಯಾರೂ ಕರ್ತನಿಲ್ಲದ ಕಾರಣ "ಅಕರ್ತ"ನೆಂತಲೂ ಹೇಳುವರು. (ಪರಮಾತ್ಮನನ್ನು ಸೃಷ್ಟಿಸುವವರೂ ಯಾರೂ ಇಲ್ಲ)

**ಜ್ಞಾನಾನಂದಸ್ವರೂಪಸ್ಯ ನಾಽಜ್ಞಾತಾ ತು ಕದಾಚನ ।**
**ಬದ್ಧವದ್ದುಃಖಿವಚ್ಚೈನಂ ವಿದ್ಧವದ್ ಬಲಹೀನವತ್ ॥ ೭೬ ॥**
**ಪ್ರಪಶ್ಯಂತ್ಯಬುಧಾಃ ಪಾಪಾ ಮಾಯಯಾವೃತಚೇತಸಃ ।**
**ನ ಕಶ್ಚಿತ್ತತ್ವತೋ ವೇತ್ತಿ ಪೂರ್ಣಷಾಡ್ಗುಣ್ಯವಿಗ್ರಹವತ್ ॥ ೭೭ ॥**

ಜ್ಞಾನ, ಆನಂದ ಇವುಗಳೇ ಸ್ವರೂಪದೇಹವಾಗಿಯುಳ್ಳ ಶ್ರೀಹರಿಗೆ ಅಜ್ಞಾನವೆಂಬುದು ಯಾವ ಕಾಲಕ್ಕೂ ಇಲ್ಲವೇ ಇಲ್ಲ. ಹೀಗಿದ್ದರೂ ಪಾಪಾತ್ಮರು, ಭ್ರಾಂತಿಯಿಂದ ಯುಕ್ತರಾಗಿ ಷಡ್ಗುಣೈಶ್ವರ್ಯಪೂರ್ಣನಾದ ಶ್ರೀಹರಿಯು ಕಟ್ಟಿಸಿಕೊಳ್ಳಲ್ಪಟ್ಟನು(ಕೃಷ್ಣಾವತಾರದಲ್ಲಿ ಯಶೋದೆಯಿಂದ), ದುಃಖಪಟ್ಟನು(ರಾಮಾವತಾರದಲ್ಲಿ ಸೀತಾಪಹರಣವಾದಾಗ), ಬಲಹೀನನು (ಕೃಷ್ಣಾವತಾರದಲ್ಲಿ ಜರಾಸಂಧನಿಂದ ಸೋತಂತೆ ನಟಿಸಿದ್ದರಿಂದ), ಮುಂತಾದ ರೀತಿಯಲ್ಲಿ ತಿಳಿಯುತ್ತಾರೆ. (ಇದೆಲ್ಲ ಲೋಕ-ವಿಡಂಬನೆಗಾಗಿ ಎಂಬುದನ್ನು ಮರೆಯುತ್ತಾರೆ.) ಆದರೆ ಶ್ರೀಹರಿಯ ಮಾಹಾತ್ಮ್ಯೆಯನ್ನು ಪೂರ್ಣವಾಗಿ ತಿಳಿಯಲು ಯಾರಿಗೂ ಸಾಧ್ಯವಿಲ್ಲ.

**ಸರ್ವವೇದೇಷು ಯೋ ಚೋಕ್ತಾ ಗುಣಾ ವಿಷ್ಣೋಃ ಸುಮಂಗಲಾಃ ।**
**ತಾನೇವ ಭಗವಾನ್ ಬ್ರಹ್ಮ ವೇತ್ತಿ ಲಕ್ಷ್ಮೀಸ್ತತೋಽಧಿಕಾನ್ ॥ ೭೮ ॥**

ಸಮಸ್ತ ವೇದಗಳಲ್ಲಿ ಶ್ರೀವಿಷ್ಣುವಿನ ಮಂಗಳಕರವಾದ ಗುಣಗಳು ಏನು ವರ್ಣಿಸಲ್ಪಟ್ಟಿವೆಯೋ ಅದೆಲ್ಲವನ್ನೂ ಚತುರ್ಮುಖಬ್ರಹ್ಮದೇವರು ಅರಿತಿರುವರು. ವೇದಗಳಲ್ಲಿ ಹೇಳದೇ ಇರುವ ಭಗವಂತನ ಅದ್ಭುತಗುಣಗಳನ್ನೂ ಮಹಾಲಕ್ಷ್ಮೀದೇವಿಯು ತಿಳಿದಿರುವಳು.

**ಅಜ್ಞಾತಾಶ್ಚ ತಥಾ ಲಕ್ಷ್ಮ್ಯಾಃ ಕೋಟಿಶಃ ಸಂತಿ ತೇ ಗುಣಾಃ ।**
**ನಾನೇನ ಸದೃಶಃ ಕ್ವಾಪಿ ನಾನೇನಾಭ್ಯಧಿಕೋಽಪಿ ವಾ ॥ ೭೯ ॥**

ಮಹಾಲಕ್ಷ್ಮೀದೇವಿಗೂ ತಿಳಿಯದಿರುವ ಅಸಂಖ್ಯಕೋಟಿಗುಣಗಳು ಶ್ರೀಹರಿಯಲ್ಲಿವೆ. ಇವನಿಗೆ ಸದೃಶರು ಯಾರೂ ಇಲ್ಲ; ಇವನಿಗಿಂತ ಅಧಿಕರಂತೂ ಇಲ್ಲವೇ ಇಲ್ಲ.

[ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯೋ ಲೋಕತ್ರಯೇಽಪ್ಯಪ್ರತಿಮ-ಪ್ರಭಾವ ||—ಗೀತಾ. ಮೂರು ಲೋಕಗಳಲ್ಲಿಯೂ ಸಹ ಅಸದೃಶವಾದ ಐಶ್ವರ್ಯವುಳ್ಳ ಕೃಷ್ಣನೇ, ನಿನಗೆ ಸಮಾನನಾದ ಮತ್ತೊಬ್ಬನು ಇಲ್ಲ, ನಿನಗಿಂತ ಅಧಿಕನಾಗಿ ಇರುವವನು ಎಲ್ಲಿ ? (ಇಲ್ಲವೇ ಇಲ್ಲ.)]

**ಭೂತೋ ಭವಿಷ್ಯದ್ವರ್ತಮಾನೋ**
**ದೃಶ್ಯತೇ ಶ್ರೂಯತೇಽಪಿ ವಾ ।**
**ಬಿಭರ್ತಿ ರೂಪಾಣಿ ಸಹಸ್ರಶೋಽಯಂ**
**ಕ್ಷೇಮಾಯ ಲೋಕಸ್ಯ ಚರಾಚರಸ್ಯ || ೬೦ ||**

ಶ್ರೀಹರಿಯು ಅನಾದಿಕಾಲದಿಂದ—ಹಿಂದೆ, ಈಗ, ಇನ್ನುಮುಂದೆಯೂ ಸಹ ನಿತ್ಯನಾಗಿ—ಇರುತ್ತಾನೆಂದೂ, ಅವತಾರಾದಿಗಳಿಂದ ಕಾಣಿಸುತ್ತಾನೆಂದೂ, ವೇದಗಳ ಮೂಲಕ ಕೇಳಲ್ಪಡುತ್ತಾನೆಂದೂ ತಿಳಿದುಬರುತ್ತದೆ. ಚರಾಚರ ಪ್ರಪಂಚದ ಸುಖಕ್ಕಾಗಿ ಅನೇಕ ಸಂಖ್ಯೆಯ ಅನೇಕ ರೂಪಗಳನ್ನು ಧರಿಸುತ್ತಾನೆ.

**ಅಭಿನ್ನಶಕ್ತ್ಯಂಗಗುಣಾನಿ ವಿಷ್ಣು-**
**ರ್ನಿತ್ಯಾನಿ ದೋಷರಹಿತಾನಿ ಶಶ್ವತ್ ।**
**ಅವಿದ್ಯಯಾ ಸಂವೃತಚೇತಸೋ ಯೇ**
**ಪಶ್ಯಂತಿ ನಾನಾ ಹ್ಯವತಾರರೂಪಮ್ || ೬೧ ||**

ಶ್ರೀಹರಿಯ ಶಕ್ತಿ, ಗುಣಾದಿಗಳು ಅವನ ಅಪ್ರಾಕೃತ ದೇಹದಿಂದ ಅಭಿನ್ನ ; ಅವನ ಅಸಂಖ್ಯಾತ ಶುಭಗುಣಗಳೆಲ್ಲವೂ ನಿತ್ಯ ; ಅವನು ಎಲ್ಲ ರೂಪಗಳಲ್ಲಿಯೂ ನಿರ್ದೋಷ ; ಶಶ್ವದೇಕಪ್ರಕಾರವಾಗಿ ಇರುವನು. ಆದರೆ ಅಜ್ಞಾನಿಗಳು ಶ್ರೀಹರಿಯ ನಾನಾ ಅವತಾರಗಳಲ್ಲಿ ಮೂಲರೂಪದಿಂದಲೂ, ಪರಸ್ಪರವಾಗಿಯೂ ಭಿನ್ನನೆಂದು ತಿಳಿಯುತ್ತಾರೆ.

[**ವಿಶೇಷಾಂಶ :** ಶ್ರೀಹರಿಯ ಗುಣಗಳಿಗೂ ಅವನ ಸ್ವರೂಪಕ್ಕೂ, ಶ್ರೀಹರಿಯ ಮೂಲರೂಪಕ್ಕೂ ಅವತಾರಗಳಿಗೂ, ಅವತಾರಗಳಲ್ಲಿ ಪರಸ್ಪರ ರೂಪಗಳಿಗೂ ಭೇದವನ್ನು ತಿಳಿಯುವುದು ನವವಿಧವಾದ ದ್ವೇಷಗಳಲ್ಲಿ ಒಂದು. ನವವಿಧವಾದ ದ್ವೇಷಗಳು ಯಾವುವೆಂಬುದನ್ನು ಶ್ರೀಮದಾಚಾರ್ಯರು ಹೀಗೆ ವರ್ಣಿಸಿರುತ್ತಾರೆ—

**ಜೀವಾಭೇದೋ ನಿರ್ಗುಣತ್ವಂ ಅಪೂರ್ಣಗುಣತಾ ತಥಾ ।**
**ಸಾಮ್ಯಾಧಿಕ್ಯೇ ತದನ್ಯೇಷಾಂ ಭೇದಃ ತದ್ಗತ ಏವ ಚ ||**
**ಪ್ರಾದುರ್ಭಾವ ವಿಪರ್ಯಾಸಃ ತದ್ಭಕ್ತದ್ವೇಷ ಏವ ಚ ।**
**ತತ್ಪ್ರಮಾಣಸ್ಯ ನಿಂದಾ ಚ ದ್ವೇಷಾ ಏತೇಽಖಿಲಾ ಮತಾಃ ||**

(ಭಾರತ ತಾತ್ಪರ್ಯನಿರ್ಣಯ)

ಜೀವನು ಶ್ರೀಹರಿಯಿಂದ ಅಭಿನ್ನನೆಂದು ತಿಳಿಯುವುದು, ಶ್ರೀಹರಿಗೆ ಯಾವ ವಿಧವಾದ ಗುಣಗಳೂ ಇಲ್ಲವೆಂದು ಹೇಳುವುದು, ಗುಣವಿದ್ದರೂ ಅದು ಪೂರ್ಣವಲ್ಲ ವೆಂದು ವಾದಿಸುವುದು, ಬ್ರಹ್ಮರುದ್ರಾದಿಗಳು ಶ್ರೀಹರಿಗೆ ಸಮರೆಂದೂ ಅಥವಾ ಅಧಿಕರೆಂದೂ ಬೋಧಿಸುವುದು, ಶ್ರೀಹರಿಯ ರೂಪಕ್ಕೂ, ಅವಯವಗಳಿಗೂ ಭೇದ ವನ್ನು ತಿಳಿಯುವುದು, ಶ್ರೀಹರಿಯ ಅವತಾರರೂಪಗಳಿಗೂ ಮೂಲರೂಪಕ್ಕೂ ಹಾಗೂ ಪರಸ್ಪರವಾಗಿಯೂ ಭೇದವನ್ನು ತಿಳಿಯುವುದು, ಶ್ರೀಹರಿಯ ಅವತಾರ ಗಳನ್ನು ಸಾಮಾನ್ಯ ಮನುಷ್ಯನೆಂದು ಬಗೆಯುವುದು, ಹರಿಭಕ್ತರನ್ನು ದ್ವೇಷಮಾಡು ವುದು, ವೇದಾದಿ ಸಚ್ಛಾಸ್ತ್ರಗಳನ್ನು ನಿಂದಿಸುವುದು.]

**ವಿಪಶ್ಚಿತಸ್ತಂ ಜಗದೀಶಮಚ್ಯುತಂ**
**ಪಶ್ಯಂತಿ ನಿರ್ಭೇದಮನಂತರೂಪಮ್ ।**
**ಭೂತೇಷು ದೇಹೇಷು ತಥೇಂದ್ರಿಯೇಷು**
**ಚಿತ್ತೇಷು ಜೀವೇಷು ಚ ಶೇಮುಷೀಷು ॥ ೬೨ ॥**

**ತಥೈವ ದೇವೇಷು ಚ ವಸ್ತುಜಾತೇ ಸತ್ತಾದಿಹೇತುರ್ಭಗವಾನನಂತಃ ।**
**ಅಂತರ್ಯಾಮಿಸ್ವರೂಪೇಣ ಬಿಂಬನಾಮಾ ಹ್ಯಸೌ ಹರಿಃ ॥ ೬೩ ॥**
**ಸ್ಥೂಲಾಂಗುಷ್ಟಪ್ರಮಾಣೇನ ಹೃತ್ಪದ್ಮೇಷು ವಸತ್ಯಯಮ್ ।**
**ದೇಹೇ ಪುರುಷನಾಮಾಸೌ ಸ್ಥಿತ್ವಾ ಪ್ರೇರಯತಿ ಪ್ರಭುಃ ॥ ೬೪ ॥**

ಜಗದೊಡೆಯನಾದ, ನಾಶರಹಿತನಾದ, ಶ್ರೀಹರಿಯ ನಾನಾರೂಪಗಳಲ್ಲಿ ಜ್ಞಾನಿಗಳು ಅಭೇದವನ್ನೇ ಕಾಣುವರು; ಸರ್ವಭೂತಗಳಲ್ಲಿಯೂ, ಸರ್ವರ ದೇಹ ಗಳಲ್ಲಿಯೂ, ಸರ್ವರ ಸಮಸ್ತ ಇಂದ್ರಿಯಗಳಲ್ಲಿಯೂ, ಸರ್ವರ ಮನಸ್ಸಿನಲ್ಲಿಯೂ, ಜೀವರಲ್ಲಿಯೂ, ಬುದ್ಧಿಯಲ್ಲಿಯೂ ಇರುವ ಪರಮಾತ್ಮನಲ್ಲಿ ಜ್ಞಾನಿಗಳು ಯಾವ ಭೇದವನ್ನೂ ಕಾಣುವುದಿಲ್ಲ. ಹಾಗೆಯೇ ದೇವತೆಗಳಲ್ಲಿ ಸ್ಥಿತನಾಗಿರುವ ಪರಮಾತ್ಮ ನಲ್ಲಿಯೂ ಸಹ ಭೇದವಿಲ್ಲ. ಬಿಂಬರೂಪದಿಂದ ಶ್ರೀಹರಿಯು ಸಮಸ್ತರ ಹೃದಯ ಕಮಲದಲ್ಲಿ ಅಂತರ್ಯಾಮಿಯಾಗಿದ್ದು ಸಮಸ್ತ ಜಡವಸ್ತುಗಳಲ್ಲಿಯೂ ಇದ್ದು ಪುರುಷನಾಮಕನಾಗಿ ಅಂಗುಷ್ಟದಷ್ಟು ಗಾತ್ರದ ರೂಪದಿಂದ ಎಲ್ಲರಿಗೂ ಸತ್ತಾಪ್ರದ ನಾಗಿರುತ್ತಾನೆ (ವಸ್ತುಗಳು ತಾವಿರುವ ಸ್ಥಿತಿಯಲ್ಲಿ ಇರುವಿಕೆ). ಎಲ್ಲರನ್ನೂ ಸಕಲ ಕರ್ಮಗಳಲ್ಲಿಯೂ ಪ್ರೇರಿಸುತ್ತಾನೆ.

[**ವಿಶೇಷಾಂಶ:** ಶ್ರೀಹರಿಯು ಸಮಸ್ತ ಚೇತನರಲ್ಲಿಯೂ, ಸಮಸ್ತ ಜಡವಸ್ತು ಗಳಲ್ಲಿಯೂ ಅವುಗಳಿಂದ ಭಿನ್ನನಾಗಿ ಸತ್ತಾಪ್ರದನಾಗಿದ್ದರೂ ಪರಮಾತ್ಮನ ಇಂತಹ ಅಸಂಖ್ಯಾತವಾದ ರೂಪಗಳಲ್ಲಿ ಯಾವ ವಿಧವಾದ ಭೇದವೂ ಇಲ್ಲ. ಈ ಮುಖ್ಯ

ವಾದ ಪ್ರಮೇಯವು ಬ್ರಹ್ಮಸೂತ್ರಭಾಷ್ಯದ "ನಸ್ಥಾನತೋಽಪ್ಯಧಿಕರಣ"ದಲ್ಲಿ ವಿವರಿಸಲ್ಪಟ್ಟಿದೆ.

**ಸರ್ವಭೂತಸ್ಥಿತಂ ಯೋ ಮಾಂ ಭಜತ್ಯೇಕತ್ವಮಾಸ್ಥಿತಃ ।**
**ಸರ್ವಥಾ ವರ್ತಮಾನೋಽಪಿ ಸ ಯೋಗೀ ಮಯಿ ವರ್ತತೇ ॥** —ಗೀತಾ

ಯಾರು ಸಮಸ್ತ ಪ್ರಾಣಿ ಮತ್ತು ವಸ್ತುಗಳಲ್ಲಿ ನಿಯಾಮಕನಾಗಿರುವ ನನ್ನನ್ನು ಒಬ್ಬನೇ (ಪರಸ್ಪರ ಭೇದರಹಿತನೆಂದು) ಎಂದು ತಿಳಿದು ಭಜಿಸುತ್ತಾನೆಯೋ ಅಂತಹ ಯೋಗಿಯು ಯಾವ ಪ್ರಕಾರವಾಗಿದ್ದರೂ ನನ್ನಲ್ಲಿಯೇ ಇರುತ್ತಾನೆ; ಅಂದರೆ ಮೋಕ್ಷವು ನಿಶ್ಚಿತ.]

**ತಸ್ಮಾತ್ಸ ಏವ ಜಿಜ್ಞಾಸ್ಯಃ ಪರಮಂ ಮೋಕ್ಷಮಿಚ್ಛತಾ ॥ ೮೫ ॥**

ಈ ಕಾರಣಗಳಿಂದ ಮೋಕ್ಷಾಪೇಕ್ಷಿಗಳು ಸರ್ವೋತ್ತಮನಾದ ಶ್ರೀವಿಷ್ಣುವನ್ನೇ ಜಿಜ್ಞಾಸೆ ಮಾಡಬೇಕು. ಅವನೊಬ್ಬನೇ ಜಿಜ್ಞಾಸಾಕ್ಕೆ ಯೋಗ್ಯ.

ಇತಿ ಶ್ರೀ ವಾಯುಪುರಾಣೇ ಮಾಘಮಾಸಮಾಹಾತ್ಮ್ಯೇ ಸಪ್ತದಶೋಽಧ್ಯಾಯಃ

ಶ್ರೀ ವಾಯುಪುರಾಣಾಂತರ್ಗತ ಮಾಘಮಾಸಮಾಹಾತ್ಮ್ಯೆಯಲ್ಲಿ
ಹದಿನೇಳನೇ ಅಧ್ಯಾಯವು ಸಮಾಪ್ತಿಯಾಯಿತು.

**ಶಾಂಡಿಲ್ಯ ಉವಾಚ :**

**ನಿಮಿತ್ತತ್ವೇನ ಸ ಜ್ಞೇಯಃ ಸೃಷ್ಟ್ಯಾದೀನಾಂ ಜಗತ್ಪತಿಃ ।**
**ತಸ್ಮಾತ್ತತ್ತ್ವಂ ಚ ವಿಜ್ಞೇಯಂ ಜಂಗಮಾಜಂಗಮಾದಿಕಮ್ ॥ ೧ ॥**

ಶಾಂಡಿಲ್ಯರು ಹೇಳಿದರು :

ಈ ಸತ್ಯಭೂತವಾದ ಜಗತ್ತಿನ ಸೃಷ್ಟಿಯೇ ಮೊದಲಾದ ಕಾರ್ಯಗಳಿಗೆ ಜಗತ್ಪತಿಯಾದ ಶ್ರೀಹರಿಯು ನಿಮಿತ್ತಕಾರಣನೆಂದು ತಿಳಿಯಬೇಕು. ಇದಕ್ಕಾಗಿ ಸ್ಥಾವರಜಂಗಮಾತ್ಮಕವಾದ ತತ್ವಗಳನ್ನೂ ಚೆನ್ನಾಗಿ ತಿಳಿಯಬೇಕು.

[**ವಿಶೇಷಾಂಶ :** ಈ ಜಗತ್ತಿಗೆ ಶ್ರೀಹರಿಯು ನಿಮಿತ್ತಕಾರಣನೇ ವಿನಹ, ಕೆಲವರು ಹೇಳುವಂತೆ, ಉಪಾದಾನಕಾರಣನಲ್ಲ. ಅಂದರೆ ಚಿನ್ನದ ಸರ ಮಾಡಲು ಚಿನ್ನವು ಉಪಾದಾನ, ಅಕ್ಕಸಾಲಿಗನು ನಿಮಿತ್ತಕಾರಣನು. ಅದರಂತೆ ಪರಮಾತ್ಮನು ಪ್ರಕೃತಿಯನ್ನು ಉಪಾದಾನವನ್ನಾಗಿ ಮಾಡಿಕೊಂಡು ಈ ಜಗತ್ತನ್ನು ಸೃಷ್ಟಿಸುತ್ತಾನೆ.

**ಪ್ರಕೃತಿಂ ಸ್ವಾಮವಷ್ಟಭ್ಯ ವಿಸೃಜಾಮಿ ಪುನಃ ಪುನಃ ।**
**ಭೂತಗ್ರಾಮಮಿಮಂ ಕೃತ್ಸ್ನಮವಶಂ ಪ್ರಕೃತೇರ್ವಶಾತ್ ॥** —ಗೀತಾ

ನನ್ನ ಅಧೀನವಲ್ಲಿರುವ ತ್ರಿಗುಣಾತ್ಮಕವಾದ ಪ್ರಕೃತಿಯನ್ನು ಉಪಾದಾನ ಕಾರಣವನ್ನಾಗಿ ಮಾಡಿಕೊಂಡು ನನ್ನ ಅಧೀನವಾದ ಪ್ರಕೃತಿಗೆ ಅಧೀನವಾಗಿರುವುದರಿಂದ ಪರತಂತ್ರವಾದ ಈ ಸಮಸ್ತವಾದ ಭೂತಸಮುದಾಯವನ್ನು ತಿರುಗಿ ತಿರುಗಿ ಸೃಷ್ಟಿಮಾಡುತ್ತೇನೆ.]

**ಬಧ್ಯಂ ಚ ಬಂಧಕಂ ಚೈವ ತತ್ಕರ್ತಾರಂ ವಿಚಿಂತಯೇತ್ ।**
**ಜೀವಾನಾಂ ಚ ಜಡಾನಾಂ ಚ ಜೀವಾನಾಂ ಚ ಪರಸ್ಪರಮ್ ॥ ೨ ॥**
**ತಥಾನ್ಯೋನ್ಯಂ ಜಡಾನಾಂ ಚ ತಥಾ ಜೀವೇಶಯೋರಪಿ ।**
**ಭೇದಂ ಜ್ಞಾತ್ವಾ ತು ಮೋಕ್ಷೇಚ್ಛುಃ ತಥೈವ ಜಡಜೀವಯೋಃ ॥ ೩ ॥**

ಬಧ್ಯನೂ, ಬಂಧಕನೂ, ಇವಕ್ಕೆಲ್ಲ ಕಾರಣಕರ್ತನೂ ಶ್ರೀಹರಿಯೇ ಎಂದು ತಿಳಿಯಬೇಕು. ಜೀವನಿಗೂ ಜಡಕ್ಕೂ, ಜೀವರಲ್ಲಿ ಪರಸ್ಪರವಾಗಿಯೂ, ಜಡಗಳಲ್ಲಿ ಪರಸ್ಪರವಾಗಿಯೂ, ಜೀವ-ಈಶರಲ್ಲಿಯೂ ಮತ್ತು ಜಡ-ಈಶರಲ್ಲಿಯೂ ಸತ್ಯವಾದ ಭೇದವನ್ನು ಮೋಕ್ಷಾಪೇಕ್ಷಿಗಳು ಅವಶ್ಯಕವಾಗಿ ತಿಳಿದಿರಬೇಕು.

**ತದ್ಭೇದಪ್ರತಿಯೋಗಿತ್ವಾತ್ ಜ್ಞಾತವ್ಯಂ ತತ್ವಮಂಜಸಾ ।**
**ಸ್ವತಂತ್ರಪರತಂತ್ರಾಭ್ಯಾಂ ದ್ವಿವಿಧಂ ತತ್ವಮಿಷ್ಯತೇ ॥ ೪ ॥**

ಒಂದಕ್ಕೊಂದರಲ್ಲಿ ಭೇದವುಳ್ಳ ತತ್ವಗಳನ್ನು (ವಸ್ತುಸ್ವರೂಪವನ್ನು) ಚೆನ್ನಾಗಿ ಅರಿಯಬೇಕು. ತತ್ವಗಳಲ್ಲಿ "ಸ್ವತಂತ್ರ", "ಪರತಂತ್ರ" ಎಂದು ಎರಡು ವಿಧ.

**ಪರಾನಪೇಕ್ಷಂ ಯತ್ತತ್ವಂ ರೂಪಜ್ಞಾನಪ್ರವೃತ್ತಿಷು ।**
**ಸ್ವತಂತ್ರಂ ತತ್ವಮಿತ್ಯಾಹ ಸ ಹರಿರ್ಭಗವಾನ್ ಪ್ರಭುಃ ॥ ೫ ॥**

ರೂಪ, ಜ್ಞಾನ ಪ್ರವೃತ್ತಿಗಳಲ್ಲಿ ಅನ್ಯರ ಅಪೇಕ್ಷೆಯಿಲ್ಲದೇ ಇರುತ್ತಾನೆಯೋ ಅವನು ಸ್ವತಂತ್ರನು. ಅಂತಹ ಸ್ವತಂತ್ರನು ಜಗದೊಡೆಯನಾದ ಶ್ರೀಹರಿಯೊಬ್ಬನೇ.

**ಪರಾಪೇಕ್ಷ್ಯಂ ಸ್ವರೂಪೇ ಚ ಪ್ರವೃತ್ತೌ ಪ್ರಮಿತೌ ಚ ಯತ್ ।**
**ಅಸ್ವತಂತ್ರಂ ದ್ವಿಧಾ ತಚ್ಚ ಭಾವಾಭಾವಸ್ಯ ರೂಪವಿತ್ ॥ ೬ ॥**

ಸ್ವರೂಪ, ಜ್ಞಾನ, ಪ್ರವೃತ್ತ್ಯಾದಿಗಳಲ್ಲಿ ಇನ್ನೊಬ್ಬರಮೇಲೆ ಅವಲಂಬನೆ ಯಾರಿಗೆ ಇರುತ್ತದೆಯೋ ಅವರಿಗೆ ಅಸ್ವತಂತ್ರತತ್ವವೆಂದು ಹೆಸರು. ಅದು ಎರಡು ವಿಧ—ಭಾವ, ಅಭಾವ.

**ವಿದ್ಧಿ ಪ್ರತೀತಿವಿಷಯೋ ಭಾವ ಇತ್ಯಭಿಧೀಯತೇ ।**
**ಅಭಾವಸ್ತು ನಿಷೇಧಾತ್ಮಾ ತತ್ರಾಭಾವಸ್ತ್ರಿಧಾ ಮತಃ ॥ ೭ ॥**

ವಸ್ತುವನ್ನು ಕಂಡೊಡನೆ "ಇದೆ" ಎಂಬ ಜ್ಞಾನಕ್ಕೆ ವಿಷಯವಾಗುವುದು "ಭಾವ" ; ನಾಸ್ತಿ ಅಥವಾ "ಇಲ್ಲ"ವೆಂಬ ಜ್ಞಾನಕ್ಕೆ ವಿಷಯುವಾಗುವುದು "ಅಭಾವ" ; ಇದು ನಿಷೇಧರೂಪ. ಈ ಅಭಾವದಲ್ಲಿ ಮೂರು ವಿಧ.

**ಪ್ರಾಗಸತ್ತಾ ಕಾರ್ಯನಾಶಃ ಸದಾಭಾವ ಇತಿ ತ್ರಯಮ್ ।**
**ಚೇತನಾಚೇತನತ್ವೇನ ಸ ಭಾವೋ ದ್ವಿವಿಧೋ ಮತಃ ॥ ೮ ॥**

ಘಟಪಟಾದಿ ಯಾವದೊಂದು ವಸ್ತುವಿನ ಉತ್ಪತ್ತಿಗೆ ಪೂರ್ವದ ಅದರ "ಅಭಾವ"ವು–"ಪ್ರಾಗಭಾವ" ; ಅದರ ನಾಶದನಂತರ ಆಗುವ ವಸ್ತುವಿನ ನಾಶಕ್ಕೆ "ಪ್ರಧ್ವಂಸಾಭಾವ"; ಎಂದೆಂದಿಗೂ ಅಭಾವವಾದುದಕ್ಕೆ (ಮೊಲದ ಕೊಂಬು) "ಸದಾಭಾವ" ಎಂದು ಹೆಸರು. ಭಾವ ವಸ್ತುಗಳಲ್ಲಿ ಎರಡು ಬಗೆ—ಚೇತನ, ಅಚೇತನ.

**ದುಃಖಸ್ಪೃಷ್ಟಂ ತದಸ್ಪೃಷ್ಟಂ ದ್ವಿವಿಧಂ ಚೇತನಂ ಭವೇತ್ ।**
**ದುಃಖಸ್ಪೃಷ್ಟಾಕ್ಷರಾ ದೇವೀ ದುಃಖಾಸ್ಪೃಷ್ಟಾಸ್ತಥಾಪರೇ ॥ ೯ ॥**

ದುಃಖಸ್ಪೃಷ್ಟರು (ದುಃಖದಸಂಬಂಧ ಇರುವವರು), ದುಃಖಾಸ್ಪೃಷ್ಟರು (ದುಃಖದ ಸಂಬಂಧ ಇಲ್ಲದವರು) ಎಂಬುದಾಗಿ ಚೇತನದಲ್ಲಿ ಎರಡು ವಿಧ. ದುಃಖ-ಸ್ಪೃಷ್ಟರು "ಕ್ಷರ"ರು—ನಾಶಹೊಂದುವವರು ; ದುಃಖಾಸ್ಪೃಷ್ಟರು ನಾಶವನ್ನೇ ಹೊಂದದವರು—ಮಹಾಲಕ್ಷ್ಮೀ ದೇವಿ.

**ಮುಕ್ತಾಮುಕ್ತಪ್ರಭೇದೇನ ದುಃಖಸ್ಪೃಷ್ಟಂ ದ್ವಿಧಾ ಮತಮ್ ।**
**ತತ್ರ ಮುಕ್ತಂ ಮುಕ್ತಿಯೋಗ್ಯಂ ಅಯೋಗ್ಯಮಿತಿ ಚ ದ್ವಿಧಾ ॥ ೧೦ ॥**

ದುಃಖಸ್ಪೃಷ್ಟರಲ್ಲಿ ಎರಡು ವಿಧ—ಮುಕ್ತಿಯೋಗ್ಯರು, ಮುಕ್ತಿಗೆ ಅಯೋಗ್ಯರು—ಮುಕ್ತಾಮುಕ್ತ ಪ್ರಭೇದದಿಂದ.

**ಮುಕ್ತಿಯೋಗ್ಯಂ ಪಂಚವಿಧಂ ದೇವತಾ ಋಷಯಸ್ತಥಾ ।**
**ತಥೈವ ಪಿತರೋ ಜ್ಞೇಯಾ ಗಂಧರ್ವಾ ಮಾನುಷೋತ್ತಮಾಃ ॥ ೧೧ ॥**

ಮುಕ್ತಿಯೋಗ್ಯರು (ಮೋಕ್ಷಕ್ಕೆ ಹೋಗುವ ಅಧಿಕಾರವುಳ್ಳವರು) ಐದು ಬಗೆ—ದೇವತೆಗಳು, ಋಷಿಗಳು, ಪಿತೃದೇವತೆಗಳು ಗಂಧರ್ವರು, ಮನುಷ್ಯೋತ್ತಮರು.

**ದ್ವಿವಿಧಂ ಮುಕ್ತ್ಯಯೋಗ್ಯಂ ಚ ತಮೋಯೋಗ್ಯಂ ಸೃತಿಸ್ಥಿತಮ್ ।**
**ಚತುರ್ವಿಧಂ ತಮೋಯೋಗ್ಯಂ ದೈತ್ಯರಕ್ಷಃಪಿಶಾಚಕಾಃ ॥ ೧೨ ॥**

**ಮರ್ತ್ಯಾಧಮಾಶ್ಚ ತೇ ಸರ್ವೇ ಪ್ರತ್ಯೇಕಂ ದ್ವಿವಿಧಾ ಮತಾಃ ।**
**ಪ್ರಾಪ್ತಾಂಧತಮಸಃ ಕೇಚಿತ್ ಸೃತಿಸಂಸ್ಥಾಸ್ತಥಾ ಪರೇ ॥ ೧೩ ॥**

ಮುಕ್ತಿಗೆ ಹೋಗಲು ಅಧಿಕಾರವಿಲ್ಲದವರು ಎರಡು ವಿಧ—ತಮೋಯೋಗ್ಯರು, ಸಂಸಾರದಲ್ಲಿಯೇ ಇರುವವರು. ತಮೋಯೋಗ್ಯರಲ್ಲಿ ನಾಲ್ಕು ಬಗೆ—ದೈತ್ಯರು, ರಾಕ್ಷಸರು, ಪಿಶಾಚಿಗಳು, ಮನುಷ್ಯಾಧಮರು. ಈ ಎಲ್ಲರೂ ಪುನಃ ಎರಡು ಬಗೆ—ಅಂಧಂತಮಸ್ಸಿಗೆ ಹೋಗಿರುವವರು, ನಿತ್ಯದಲ್ಲಿಯೂ ಸಂಸಾರದಲ್ಲಿಯೇ ಇರುವವರು.

**ನಿತ್ಯಂ ಸೃತಿಸ್ಥಾ ದ್ವಿವಿಧಾಃ ಸ್ವರ್ಗಸ್ಯ ನರಕಸ್ಯ ಚ ।**
**ಯತಮಾನಾಸ್ತತಃ ಕೇಚಿತ್ ಸ್ವರ್ಗೇಷು ನರಕೇಷು ಚ ॥ ೧೪ ॥**

ನಿತ್ಯಸಂಸಾರಿಗಳಲ್ಲಿ ಎರಡು ವಿಧ—ಸ್ವರ್ಗಕ್ಕೆ ಹೋಗಲು ಪ್ರಯತ್ನಿಸುವವರು, ನರಕಕ್ಕೆ ಹೋಗಲು ಪ್ರಯತ್ನಿಸುವವರು.

**ಅಚೇತನಂ ತಥಾ ನಿತ್ಯಮನಿತ್ಯಂ ಚ ದ್ವಿರೂಪವತ್ ।**
**ಇತಿ ದ್ವಿಧೈವ ತತ್ತತ್ತ್ವಂ ನಿತ್ಯಾ ವೇದಾಃ ಸಮಸ್ತಶಃ ॥ ೧೫ ॥**

ಅಚೇತನ ತತ್ತ್ವವು ಎರಡು ಬಗೆ—ನಿತ್ಯ, ಅನಿತ್ಯ ; ಸಮಸ್ತ ವೇದಗಳೂ ನಿತ್ಯ.

**ತಥಾ ವರ್ಣಾಃ ಸಮಸ್ತಾಶ್ಚ ತಥಾ ವ್ಯಾಕೃತಮಂಬರಮ್ ।**
**ನಿತ್ಯಾನಿತ್ಯಂ ತ್ರಿಧಾ ಪ್ರೋಕ್ತಂ ಕಾಲಃ ಪ್ರಕೃತಿರೇವ ಚ ॥ ೧೬ ॥**
**ವೇದಾನುಕೂಲಾಃ ಸ್ಮೃತಯಃ ಸೇತಿಹಾಸಪುರಾಣಕಾಃ ।**
**ದೀರ್ಘಾಕಾರೇಣ ನಿತ್ಯತ್ವಂ ಕ್ಷಣಾದ್ಯೈರಪ್ಯನಿತ್ಯತಾ ॥ ೧೭ ॥**

ಹಾಗೆಯೇ ಸಂಸ್ಕೃತ "ಅ"ಕಾರಾದಿ ಐವತ್ತು ವರ್ಣಗಳೂ, ಅವ್ಯಾಕೃತಾ-ಕಾಶವೂ ನಿತ್ಯ. ನಿತ್ಯಾನಿತ್ಯವೆಂಬುದು (ನಿತ್ಯವೂ ಹೌದು, ಅನಿತ್ಯವೂ ಹೌದು) ಮೂರು—ಕಾಲ, ಪ್ರಕೃತಿ ಮತ್ತು ವೇದಗಳಿಗೆ ಅನುಸಾರಿತ್ವ ಇರುವ ಸ್ಮೃತಿಗಳು, ಇತಿಹಾಸಗಳು, ಪುರಾಣಗಳು. ಕಾಲವು ಬಹು ದೀರ್ಘವಾಗಿರುವುದರಿಂದ ನಿತ್ಯ, ಕ್ಷಣ–ನಿಮಿಷ ಮುಂತಾದ ಕಾಲದ ಭಾಗಗಳು ಕಳೆದುಹೋಗುವ ಕಾರಣದಿಂದ, ಕಾಲವು ಅನಿತ್ಯವೂ ಆಗಿದೆ.

**ಕಾಲಶ್ಚ ಪ್ರಕೃತಿಶ್ಚಾಪಿ ಕಾರ್ಯಕಾರಣರೂಪತಃ ।**
**ಸ್ಮೃತ್ಯಾದ್ಯಾಶ್ಚಾರ್ಥತೋ ನಿತ್ಯಾ ವ್ಯತ್ಯಾಸಾತ್ತೇ ವಿನಾಶಿನಃ ॥ ೧೮ ॥**

ಕಾರ್ಯಕಾರಣಗಳ ರೂಪದಿಂದ ಪ್ರಕೃತಿಯೂ ಸಹ, ಕಾಲದಂತೆ, ನಿತ್ಯವೂ ಅನಿತ್ಯವೂ ಆಗಿದೆ. ಸ್ಮೃತಿಯೇ ಮೊದಲಾದವು ಅರ್ಥದಿಂದ ನಿತ್ಯವಾಗಿಯೂ ಶ್ಲೋಕರೂಪದಿಂದ ಸ್ವಲ್ಪ ವ್ಯತ್ಯಾಸವಿದ್ದು ಅನಿತ್ಯವಾಗಿರುತ್ತವೆ.

(ಸ್ಮೃತಿಗಳೂ ಪುರಾಣಗಳೂ ಒಂದು ಬ್ರಹ್ಮಕಲ್ಪದಲ್ಲಿರುವ ಪ್ರತಿದಿನ ಕಲ್ಪದಲ್ಲಿಯೂ ರಚಿಸಲ್ಪಡುತ್ತವೆ. ಮೊದಲಿನ ದಿನಕಲ್ಪಗಳಲ್ಲಿ ರಚಿತವಾಗುವ ಪುರಾಣಗಳಿಗಿಂತ ಮುಂದಿನ ದಿನಕಲ್ಪದಲ್ಲಿ ರಚಿತವಾಗುವ ಪುರಾಣಗಳು ಅಧಿಕ ಅರ್ಥದಿಂದ ಯುಕ್ತವಾಗಿರುತ್ತವೆ. ಆದರೆ ಆ ಮುಂದಿನ ಬ್ರಹ್ಮಕಲ್ಪದ ಪ್ರತಿದಿನ ಕಲ್ಪಗಳಲ್ಲಿ ರಚಿತವಾಗುವ ಪುರಾಣಗಳು ಹಿಂದಿನ ಬ್ರಹ್ಮಕಲ್ಪದ ಆಯಾ ದಿನಕಲ್ಪಗಳ ಪುರಾಣಗಳಿಗೆ ಸಮಾನಾರ್ಥವುಳ್ಳವುಗಳೇ ಆಗಿರುತ್ತವೆ. ದಿನಕಲ್ಪ ಮುಗಿಯುತ್ತಿದ್ದಂತೆ ಅವು ನಾಶಹೊಂದಿ ಶ್ರೀಹರಿಯ ಬುದ್ಧಿಯಲ್ಲಿ ಸ್ಥಿತವಾಗಿರುತ್ತವೆ. ಪುನಃ ರಚಿತವಾದಾಗ ಪದ ಕ್ರಮಾದಿಗಳಲ್ಲಿ ಸ್ವಲ್ಪ ವ್ಯತ್ಯಾಸವಿದ್ದರೂ ಸಮಾನಾರ್ಥ, ಅಧಿಕ ಅರ್ಥ ಯುಕ್ತವಾಗಿರುತ್ತವೆ).

**ಅಸಂಸ್ಪೃಷ್ಟಂ ಚ ಸಂಸ್ಪೃಷ್ಟಮನಿತ್ಯಂ ದ್ವಿವಿಧಂ ಮತಮ್ ।**
**ಮಹಾನಹಂಬುದ್ಧಿಮನಇಂದ್ರಿಯಾಣಿ ದಶೈವ ತು ॥ ೧೯ ॥**

**ಪಂಚ ಭೂತಾನಿ ತನ್ಮಾತ್ರಾಃ ಕಿಂಚಿದೇವ ವಿವರ್ಧಿತಾಃ ।**
**ಚತುರ್ವಿಂಶದಸಂಸೃಷ್ಟಂ ಸಂಸೃಷ್ಟಂ ದ್ವಿವಿಧಂ ಮತಮ್ ॥ ೨೦ ॥**

ಅನಿತ್ಯತತ್ವಗಳು ಎರಡು ವಿಧ—ಸಂಸೃಷ್ಟ, ಅಸಂಸೃಷ್ಟ. (ಸಂಸೃಷ್ಟವೆಂದರೆ ಸ್ಥೂಲವಾಗಿ ಚೆನ್ನಾಗಿ ಸೃಷ್ಟಿಯನ್ನು ಹೊಂದಿದವು ; ಅಸಂಸೃಷ್ಟವೆಂದರೆ ಚೆನ್ನಾಗಿ ಉಪಚಯ ಹೊಂದದೇ ಸೂಕ್ಷ್ಮರೂಪದಿಂದ ಇರುವುದು). ಮಹತ್ತತ್ವ, ಅಹಂಕಾರ ತತ್ವ, ಬುದ್ಧಿತತ್ವ, ಮನಸ್ತತ್ವ, ಹತ್ತು ಇಂದ್ರಿಯಗಳು (ಐದು ಜ್ಞಾನೇಂದ್ರಿಯ ಗಳು—ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ ; ಐದು ಕರ್ಮೇಂದ್ರಿಯಗಳು—ಬಾಯಿ, ಕೈ, ಕಾಲು, ಪಾಯು, ಉಪಸ್ಥ ; ಪಂಚಭೂತಗಳು—ಪೃಥ್ವಿ, ಅಪ್, ತೇಜಸ್ಸು, ವಾಯು, ಆಕಾಶ ; ಐದು ತನ್ಮಾತ್ರೆಗಳು—ರೂಪ, ಶಬ್ದ, ಘ್ರಾಣ, ರಸ, ಸ್ಪರ್ಶ. ಹೀಗೆ ಇಪತ್ತನಾಲ್ಕು ತತ್ವಗಳು ಅಸಂಸೃಷ್ಟಗಳು. ಸಂಸೃಷ್ಟದಲ್ಲಿ ಎರಡು ಬಗೆ.

**ಬ್ರಹ್ಮಾಂಡಂ ತದ್ಗತಂ ಚೇತಿ ಪ್ರಾಹುಸ್ತತ್ವವಿದೋ ಜನಾಃ ।**

ಬ್ರಹ್ಮಾಂಡವೆಂತಲೂ, ಬ್ರಹ್ಮಾಂಡದೊಳಗಿನ ತತ್ವಗಳೆಂದೂ ಎರಡು ವಿಧ.

**ಸೃಷ್ಟಿಃ ಸ್ಥಿತಿಃ ಸಂಹೃತಿಶ್ಚ ನಿಯಮೋ ಜ್ಞಾನಬೋಧನೇ ॥ ೨೧ ॥**
**ಬಂಧೋ ಮೋಕ್ಷಃ ಸುಖಂ ದುಃಖಂ ಆವೃತಿರ್ಜ್ಯೋತಿರೇವ ಚ ।**
**ವಿಷ್ಣುನಾಸ್ಯ ಸಮಸ್ತಸ್ಯ ಸಮಾಸವ್ಯಾಸಯೋಗತಃ ॥ ೨೨ ॥**

ಸೃಷ್ಟಿ, ಸ್ಥಿತಿ, ಲಯ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷ (ಸುಖದುಃಖದಿಂದ ಯುಕ್ತವಾದವುಗಳು)—ಇವೆಲ್ಲವೂ ಸಮಸ್ತರಿಗೂ ಸಂಕ್ಷೇಪ ದಿಂದಲೂ ವಿಸ್ತಾರದಿಂದಲೂ ವಿಷ್ಣುವಿನಿಂದಲೇ ನಡೆಯುತ್ತವೆ.

(ಮೇಲೆ ಹೇಳಿದ ಅಷ್ಟಕರ್ತೃತ್ವವು ಶ್ರೀವಿಷ್ಣುವಿನಿಂದಲೇ ಅಲ್ಲದೆ ಅನ್ಯರಿಂದಲ್ಲ ಎಂಬ ವಿಷಯವು ಬ್ರಹ್ಮಸೂತ್ರಭಾಷ್ಯದ ಜನ್ಮಾಧಿಕರಣದಲ್ಲಿ "ಓಂ ಜನ್ಮಾದ್ಯಸ್ಯ ಯತಃ ಓಂ" ಎಂಬ ಸೂತ್ರದಲ್ಲಿಯೂ ತದ್ಗತ ಭಾಷ್ಯದಲ್ಲಿಯೂ ಸ್ಪಷ್ಟಪಡಿಸ ಲಾಗಿವೆ).

**ಸ್ವತಂತ್ರಾದಸ್ವತಂತ್ರಸ್ಯ ಭವಂತ್ಯೇವ ನ ಸಂಶಯಃ ।**
**ಏತತ್ಸರ್ವಂ ಮಾನವೇದ್ಯಂ ಮಾನಂ ತಚ್ಚ ಚತುರ್ವಿಧಮ್ ॥ ೨೩ ॥**

ಸ್ವತಂತ್ರನಾದವನು ವಿಷ್ಣು ಒಬ್ಬನೇ ಆದುದರಿಂದಲೂ, ಇನ್ನೆಲ್ಲರೂ ಅಸ್ವತಂತ್ರರಾದುದರಿಂದಲೂ ಸೃಷ್ಟ್ಯಾದಿಗಳು ವಿಷ್ಣುವಿನಿಂದಲೇ ನಡೆಯುತ್ತವೆ, ಸಂಶಯವಿಲ್ಲ. ಈ ವಿಷಯಗಳನ್ನೆಲ್ಲ ಶಾಸ್ತ್ರಗಳೇ ಮುಂತಾದ ಪ್ರಮಾಣಗಳಿಂದ ತಿಳಿಯಬೇಕು. ಪ್ರಮಾಣಗಳು ನಾಲ್ಕು ವಿಧ.

**ತಚ್ಚ ಪ್ರತ್ಯಕ್ಷಮನುಮಾ್ಯಗಮೋ ಜ್ಞಾನಂ ತಥೈವ ಚ ।**
**ಜ್ಞಾನಂ ಚ ತ್ರಿವಿಧಂ ತತ್ರ ತತ್ರಾದ್ಯಂ ಪಾರಮೇಶ್ವರಮ್ ॥ ೨೪ ॥**

**ದ್ವಿತೀಯಂ ಅಕ್ಷರಜ್ಞಾನಂ ದುಃಖಸ್ಪೃಷ್ಟಂ ತೃತೀಯಕಮ್ ।**

ಪ್ರತ್ಯಕ್ಷ, ಅನುಮಾನ, ಆಗಮ, ಸಾಕ್ಷೀಜ್ಞಾನವೆಂದು ನಾಲ್ಕುವಿಧ. ಈ ಜ್ಞಾನವು ಮೂರು ವಿಧ, ಮೊದಲನೆಯದು ಪರಮೇಶ್ವರಸಂಬಂಧದ್ದು. ಎರಡನೆಯದು ಅಕ್ಷರಳಾದ ಮಹಾಲಕ್ಷ್ಮಿಯ ಜ್ಞಾನ, ಮೂರನೆಯದು ರಮಾದೇವಿಯವರಿಂದ ಭಿನ್ನರಾದ ದುಃಖಸ್ಪೃಷ್ಟರೆಂದು ಹೇಳಲ್ಪಡುವ ಇತರ ಚೇತನರ ಸಂಬಂಧದ್ದು.

**ಯೋಗಿಜಾಯೋಗಿಜತ್ವೇನ ದುಃಖಸ್ಪೃಷ್ಟಂ ದ್ವಿಧಾ ಮತಮ್ ॥ ೨೫ ॥**

ಈ ದುಃಖಸ್ಪೃಷ್ಟ ಜ್ಞಾನವು ಎರಡು ಬಗೆ—ಯೋಗಿಗಳ ಸಂಬಂಧ ಉಳ್ಳದ್ದು, ಅಯೋಗಿಗಳ ಸಂಬಂಧ ಉಳ್ಳದ್ದು.

**ತತ್ರೇಶಜ್ಞಾನಂ ಸ್ವಪರಾಖಿಲಗೋಚರಮಿಷ್ಯತೇ ।**
**ಸ್ವಸತ್ತಾದೌ ಸ್ವತಂತ್ರಂ ಚ ಸರ್ವಗೋಚರಮೀಶ್ವರೇ ॥ ೨೬ ॥**

ಶ್ರೀವಿಷ್ಣುವಿನ ಜ್ಞಾನವು ಅದ್ಭುತವಾದುದು—ತನ್ನ ಬಗ್ಗೆ, ತನ್ನಿಂದ ಭಿನ್ನವಾದ ಸಕಲ ಚರಾಚರಾತ್ಮಕವಾದ ಜಗತ್ತಿನ ಬಗ್ಗೆ ಪೂರ್ಣವಾದುದು, ತನ್ನ ಸ್ವರೂಪಭೂತವಾದುದು, ಸ್ವತಂತ್ರವಾದುದು, ಸರ್ವತೋಮುಖವಾದುದು.

**ಸ್ವಸತ್ತಾದೌ ಪರಾಧೀನಂ ಸ್ವಪರಾಖಿಲಗೋಚರಮ್ ।**
**ದ್ವಿತೀಯಂ ಚ ತೃತೀಯಂ ಚ ತ್ರಿವಿಧಂ ಪರಿಕೀರ್ತಿತಮ್ ॥ ೨೭ ॥**

ಎರಡನೆಯದಾದ ಅಕ್ಷರಜ್ಞಾನವು (ರಮಾದೇವಿಯರ ಜ್ಞಾನವು) ವಿಷ್ಣುವನ್ನು ಬಿಟ್ಟು ಇತರ ವಿಷಯಗಳಲ್ಲಿ ಪೂರ್ಣ, ಆದರೆ ಸ್ವಸತ್ತಾದಲ್ಲಿ (ತಾನು ಇರುವುದರಲ್ಲಿ) ವಿಷ್ಣುವಿನ ಅಧೀನ. ಮೂರನೆಯದಾದ ದುಃಖಸ್ಪೃಷ್ಟಜ್ಞಾನವು ಮೂರು ಬಗೆ.

**ಋಜೂನಾಂ ತಾತ್ತ್ವಿಕಾನಾಂ ಚ ಅತಾತ್ತ್ವಿಕಾನಾಂ ಚ ಭೇದತಃ ।**
**ಆಲೋಚನೇ ಸರ್ವವಿಷಯಮೀಶಾದನ್ಯತ್ರ ಚಾರ್ಜವಮ್ ॥ ೨೮ ॥**

ಋಜುಗಳ ಜ್ಞಾನ, ತತ್ವಾಭಿಮಾನಿ ದೇವತೆಗಳ ಜ್ಞಾನ, ಅತಾತ್ವಿಕ ಜ್ಞಾನ ಎಂಬುದಾಗಿ ಮೂರು ಬಗೆ. ಕೇವಲ ಆಲೋಚನೆ ಮಾತ್ರದಿಂದಲೇ ಪರಮಾತ್ಮನನ್ನು ಹೊರತು ಇತರ ಸರ್ವವಿಷಯದ ಜ್ಞಾನವಾಗುವುದು ಋಜುಗಣಸ್ಥರಿಗೆ.

**ತಚ್ಚ ಸ್ವರೂಪಂ ಬಾಹ್ಯಂ ಚ ದ್ವಿವಿಧಂ ಪರಿಕೀರ್ತಿತಮ್ ।**
**ಅನಾದಿನಿತ್ಯಂ ತತ್ರಾದ್ಯಂ ಕ್ರಮಾದ್ಯೋಗಾದ್ವಿವರ್ಧಿತಮ್ ॥ ೨೯ ॥**

ಇದು ಸ್ವರೂಪಜ್ಞಾನವೆಂದೂ, ಬಾಹ್ಯಜ್ಞಾನವೆಂದೂ ಎರಡು ಬಗೆ. ಸ್ವರೂಪ ಜ್ಞಾನವು ಅನಾದಿ ಮತ್ತು ನಿತ್ಯ. ಯೋಗಾಭ್ಯಾಸದಿಂದ ಅಭಿವೃದ್ಧಿಯಾಗುವುದು.

**ಪ್ರವಾಹತೋಽನಾದಿಬಾಹ್ಯಂ ವಿನಾಶಿಪರಿಕೀರ್ತಿತಮ್ ।**
**ತಾತ್ತ್ವಿಕಾನಾಂ ತು ಪೂರ್ವಸ್ಮಾತ್ ಕ್ರಮಾದ್ಧ್ಯಾಸೇನ ಸಂಯುತಮ್ ॥ ೩೦ ॥**
**ಪೂರ್ವವದ್ದ್ವಿವಿಧಂ ತಚ್ಚ ಸ್ವರೂಪಂ ನಿತ್ಯಮೇವ ಚ ।**
**ಬಾಹ್ಯಂ ತ್ವನಾದ್ಯಂ ನಿತ್ಯಂ ಚ ಸಾದ್ಯಂ ನಿತ್ಯಮಯೋಗಿಜಮ್ ॥ ೩೧ ॥**

ಬಾಹ್ಯಜ್ಞಾನವು ಪ್ರವಾಹದಂತೆ ಅನಾದಿ (ನದಿಯಲ್ಲಿ ನೀರು ಒಂದೇ ಸಮನೆ ಹರಿಯುತ್ತಿರುವಂತೆ) ಮತ್ತು ವಿನಾಶಿಯಾಗಿ ಇರುವುದು. ತಾತ್ತ್ವಿಕರ ಜ್ಞಾನವು ಸ್ವರೂಪ ಮತ್ತು ಬಾಹ್ಯವೆಂದು ಎರಡು ವಿಧ. ಸ್ವರೂಪಜ್ಞಾನವು ನಿತ್ಯ. ಬಾಹ್ಯ ಜ್ಞಾನವು ಅನಾದಿ ಮತ್ತು ನಿತ್ಯ. ಅತಾತ್ತ್ವಿಕರ ಜ್ಞಾನವು ಸಾದಿಯಾಗಿಯೂ ನಿತ್ಯವಾಗಿಯೂ ಇರುವುದು.

**ಏತತ್ ಪ್ರಮಾಣಪ್ರಮಿತಂ ವಿಷ್ಣ್ವಧೀನಮಿದಂ ಜಗತ್ ।**
**ವೈರಾಗ್ಯಾಯ ಪ್ರಭವತಿ ಯೇನ ಮೋಕ್ಷೋ ಭವತ್ಯಲಮ್ ॥ ೩೨ ॥**

ಹೀಗೆ ಸಮಸ್ತವಾದ ಜಗತ್ತು ವಿಷ್ಣುವಿನ ಅಧೀನವೆಂದು ಪ್ರಮಾಣಗಳಿಂದ ಸಿದ್ಧವಾಗಿದೆ. ಹೀಗೆ ತಿಳಿದವನು ವೈರಾಗ್ಯವನ್ನು ಪಡೆದು ಮೋಕ್ಷವನ್ನು ಹೊಂದುತ್ತಾನೆ.

**ನಿತ್ಯಾನಿತ್ಯವಿವೇಕಜ್ಞೋ ಮಮತಾಂ ಚ ಪರಿತ್ಯಜೇತ್ ।**
**ಮಮತ್ವೈಕಾ ಭವತ್ಯೇಷಾ ನಿದಾನಂ ಸುಖದುಃಖಯೋಃ ॥ ೩೩ ॥**

ನಿತ್ಯಾನಿತ್ಯದ ವಿವೇಕವನ್ನು ತಿಳಿದವನು "ನಾನು–ನನ್ನದು" ಎಂಬ ಮಮತಾ ವನ್ನು ಬಿಡಬೇಕು. ಈ ಮಮತಾಭಿಮಾನವೇ ಸುಖ–ದುಃಖಗಳಿಗೆ ಕಾರಣ.

**ಮದೀಯಮಿತ್ಯಭಿಮತೇ ಗವಿ ಪುಷ್ಟೇ ತು ಮೋದತಿ ।**
**ಹ್ರಾಸೇ ದುಃಖಮವಾಪ್ನೋತಿ ಸ್ವಕೀಯಸ್ಯ ಜನೋ ಹ್ಯಯಮ್ ॥ ೩೪ ॥**

ನಾನು–ನನ್ನದು ಎಂಬ ಅಭಿಮಾನದಿಂದ ತನ್ನ ಆಕಳೇ ಮುಂತಾದ ವಸ್ತುಗಳೂ, ದ್ರವ್ಯವೂ ಅಭಿವೃದ್ಧಿಯಾಗಲು ಹರ್ಷಭರಿತನಾಗುತ್ತಾನೆ. ಅವುಗಳು ನಷ್ಟವಾದರೆ ದುಃಖಿಸುತ್ತಾನೆ. ತನ್ನ ಸುತ್ತಲಿರುವ ಜನರನ್ನು ತನ್ನವರೆಂದು ತಿಳಿದು ಸಂತೋಷಪಡುತ್ತಾನೆ.

**ಕ್ರಮಾತ್ಪರವಶಂ ಯಾತೇ ಮದೀಯತ್ವೇನ ಗಚ್ಛತಿ ।**
**ನ ತುಷ್ಯತಿ ಚ ಗೋವೃದ್ಧೌ ಹ್ರಾಸಾತ್ತಸ್ಯ ನ ದುಃಖತಿ ॥ ೩೫ ॥**

**ಯಥಾ ತಥಾ ಸಮಸ್ತೇಷು ಮಮತಾಂ ತು ಪರಿತ್ಯಜೇತ್ ।**
**ಯೋಗೀ ವಾ ಮಮತಾಯುಕ್ತೋ ಮಹಾನರ್ಥಮವಾಪ್ನುಯಾತ್ ॥**

ಅಭ್ಯಾಸದಿಂದ ಮನಸ್ಸನ್ನು ಪರಮಾತ್ಮನಲ್ಲಿಯೇ ಇಡುವುದರಿಂದಲೂ ಹಾಗೂ ಸಮಸ್ತ ವಸ್ತುಗಳೂ ಪರಮಾತ್ಮನ ಅಧೀನ, ನನ್ನದೆಂಬುದು ಯಾವುದೂ ಇಲ್ಲ ಎಂಬ ಜ್ಞಾನ ಬಂದನಂತರ ಎಲ್ಲ ವಸ್ತುಗಳಲ್ಲಿಯೂ, ಜನರಲ್ಲಿಯೂ "ನನ್ನದು–ನನ್ನವರು" ಎಂಬ ಮಮತೆಯನ್ನು ಬಿಡಬೇಕು. ಆಗ ಆ ವಸ್ತುಗಳು ವೃದ್ಧಿಹ್ರಾಸ ಹೊಂದಿದಾಗಲೂ ಸುಖ-ದುಃಖಗಳು ಆಗುವುದಿಲ್ಲ. ಮಮತಾಬುದ್ಧಿಯುಳ್ಳ ಯೋಗಿಯೂ ಸಹ ಅನರ್ಥಕ್ಕೆ ಗುರಿಯಾಗುವನು.

**ಮಮೇದಮಿತಿ ಬುದ್ಧ್ಯಾ ತು ಹರಿಣೇ ಭರತೋ ಮುನಿಃ ।**
**ಅನುಧ್ಯಾಯಂಸ್ತಮೇವಾಂತೇ ಹರಿಣತ್ವಮವಾಪ ಸಃ ॥ ೩೭ ॥**

ಭರತನೆಂಬ ಋಷಿಯು ಜಿಂಕೆಯಲ್ಲಿ ವಿಶೇಷವಾದ ಮಮತಾ ಬುದ್ಧಿಯನ್ನಿಟ್ಟು ಅದನ್ನೇ ಯೋಚಿಸುತ್ತಾ ಮೃತನಾಗಿ ತಾನೂ ಸಹ ಜಿಂಕೆಯಾಗಿಯೇ ಹುಟ್ಟಿದನು.

[ವಿಶೇಷಾಂಶ : **ಯಂ ಯಂ ವಾಪಿ ಸ್ಮರನ್ಭಾವಂ ತ್ಯಜತ್ಯಂತೇ ಕಳೇವರಮ್ ।**
**ತಂ ತಮೇವೈತಿ ಕೌಂತೇಯ ಸದಾ ತದ್ಭಾವಭಾವಿತಃ ॥** —ಗೀತಾ

ಯಾವಾಗಲೂ ಪರಮಾತ್ಮನಲ್ಲಿಯೇ ಮನಸ್ಸು ಇರುವುದರಿಂದ ಪರಮಾತ್ಮನ ವಿಷಯಕವಾದ ಸಂಸ್ಕಾರವುಳ್ಳವನು ಮರಣಕಾಲದಲ್ಲಿ ಯಾವ ಯಾವ ಪದಾರ್ಥ ವನ್ನೇ ಆಗಲಿ ಸ್ಮರಿಸುತ್ತಾ ದೇಹವನ್ನು ಬಿಡುತ್ತಾನೆಯೋ ಆಯಾ ಪದಾರ್ಥವನ್ನೇ ಹೊಂದುತ್ತಾನೆ.]

**ನಿಷಿದ್ಧಭೋಗರಹಿತೋ ನಿಷಿದ್ಧೇ ಮಮತಾಂ ತ್ಯಜೇತ್ ।**
**ಜ್ಞಾನೀ ತು ಕರ್ಮಣಾ ಪ್ರಾಪ್ತಂ ಭುಂಜನ್ ವಿಷ್ಣುವಶೇ ಸ್ಥಿತಃ ॥ ೩೮ ॥**

ಜ್ಞಾನಿಯಾದವನು ತನ್ನ ಪೂರ್ವಜನ್ಮಕೃತಕರ್ಮಫಲವಾಗಿ ಪ್ರಾಪ್ತವಾದ ಸುಖ-ದುಃಖಾದಿಗಳನ್ನು ಅನುಭವಿಸುತ್ತಾ, ತಾನು ಶ್ರೀವಿಷ್ಣುವಿನ ವಶದಲ್ಲಿ ಇರುವವನೆಂದು ತಿಳಿದುಕೊಂಡು, ನಿಷಿದ್ಧವಾದ ಭೋಗಗಳನ್ನು ತೊರೆದು, ಮಮತಾ ವನ್ನು ಬಿಡಬೇಕು.

**ಯತ್ಸಂಪರ್ಕಾತ್ ಪ್ರಿಯಾ ಆಸನ್ ವಿಷಯಾ ವಿಷಸನ್ನಿಭಾಃ ।**
**ತಸ್ಮಿನ್ನೇವ ಸದಾ ಸ್ನೇಹಃ ಕರ್ತವ್ಯೋ ಹಿತಮಿಚ್ಛತಾ ॥ ೩೯ ॥**

ತನಗೆ ಪ್ರಿಯವಾಗಿದ್ದ ಐಹಿಕ ವಿಷಯಸುಖಗಳು ಯಾರ ಸಂಪರ್ಕದಿಂದ ವಿಷದಂತಾದುವೋ ಅಂತಹವನಲ್ಲಿಯೇ ಹಿತವನ್ನು ಬಯಸುವವನು ಸದಾ ಸ್ನೇಹದಿಂದ ಇರಬೇಕು.

**ಯಸ್ಮಿನ್ ಹೃದಿ ಪ್ರವಿಷ್ಟೇ ತು ಬ್ರಹ್ಮಣ್ಯಮಿತತೇಜಸಿ ।**
**ಸ್ವಾಮ್ಯಾದಿವ್ಯವಹಾರೇಣ ಸಪ್ರೇಮವಿಷಯೋ ಭವೇತ್ ॥ ೪೦ ॥**

ಗುಣಪೂರ್ಣನಾದ ಅಮಿತ ತೇಜಸ್ಸಿನಿಂದ ಯುಕ್ತನಾದ ಶ್ರೀಹರಿಯು ಯಾರ ಹೃದಯದಲ್ಲಿ ಪ್ರವೇಶಮಾಡುವನೋ ಅಂತಹವನು ಶ್ರೀಹರಿಯು "ತನ್ನ ಸ್ವಾಮಿ, ನಾನು ಅವನ ಭೃತ್ಯ" ಎಂದು ತಿಳಿದು ಶ್ರೀಹರಿಯಲ್ಲಿ ಪ್ರೇಮವನ್ನು ಮಾಡಬೇಕು.

**ಯಸ್ಮಿನ್ನಿರ್ಯಾತಿ ಸತ್ಯೇನಂ ಪರೇತಮಿತಿ ಯಂ ವಿದುಃ ।**
**ತಂ ದುಃಖವಿಷಯಂ ತಸ್ಮಾತ್ ವಿಷ್ಣೋಃ ಕೋಽನ್ಯಪರಃ ಪ್ರಿಯಃ ॥ ೪೧ ॥**

ಅಂತಹ ಶ್ರೀಹರಿಯು ಯಾರನ್ನು ಬಿಟ್ಟು ಹೊರಗೆ ಹೋಗುತ್ತಾನೆಯೋ ಆಗ ಆ ವ್ಯಕ್ತಿಯನ್ನು "ಮೃತನಾದ"ನೆಂದು ಹೇಳಿ ದುಃಖಿಸುವರು. ಆದುದರಿಂದ ವಿಷ್ಣುವಿಗಿಂತ ಹೆಚ್ಚಾದ ಪ್ರೀತ್ಯಾಸ್ಪದರು ಯಾರು ?

**ಸರ್ವಸ್ಮಾದಧಿಕಃ ಸ್ನೇಹೋ ಭಕ್ತಿರಿತ್ಯುಚ್ಯತೇ ಬುಧೈಃ ।**
**ಸಾ ಚೈನಮೂರ್ಧ್ವಂ ನಯತಿ ಸಾಕ್ಷಾತ್ಕಾರಯತಿ ಹ್ಯಜಮ್ ॥ ೪೨ ॥**

ಎಲ್ಲ ವಸ್ತುಗಳಲ್ಲಿರುವುದಕ್ಕಿಂತ ಶ್ರೀಹರಿಯಲ್ಲಿರುವ ಅತ್ಯಧಿಕವಾದ ಸ್ನೇಹವೇ "ಭಕ್ತಿ"ಯೆಂದು ಜ್ಞಾನಿಗಳು ಹೇಳುವರು. ಅಂತಹ ಭಕ್ತಿಯು ಭಕ್ತನನ್ನು ಪರಮಾತ್ಮನ ಸಾಕ್ಷಾತ್ಕಾರಕ್ಕೆ ತೆಗೆದುಕೊಂಡು ಹೋಗುತ್ತದೆ.

[ವಿಶೇಷಾಂಶ : **ಮಾಹಾತ್ಮ್ಯಜ್ಞಾನಪೂರ್ವಸ್ತು ಸುದೃಢೋ ಸರ್ವತೋಽಧಿಕಃ ।**
**ಸ್ನೇಹೋ ಭಕ್ತಿರಿತಿ ಪ್ರೋಕ್ತಃ ತಯಾ ಮುಕ್ತಿಃ ನ ಚಾನ್ಯಥಾ ॥**
(ಭಾರತ ತಾತ್ಪರ್ಯನಿರ್ಣಯ)

ಶ್ರೀಹರಿಯ ಮಹಾ ಮಾಹಾತ್ಮ್ಯಗಳನ್ನು ಶಾಸ್ತ್ರಗಳಿಂದ ತಿಳಿದು ತತ್ಪೂರ್ವಕವಾಗಿ ಎಲ್ಲ ವಸ್ತುಗಳಲ್ಲಿ ಮಾಡುವಂತಹ ಸ್ನೇಹಕ್ಕಿಂತ ಅತ್ಯಧಿಕವಾಗಿ, ದೃಢವಾಗಿ ಮಾಡುವ ಸ್ನೇಹಕ್ಕೆ ಭಕ್ತಿಯೆಂದು ಹೆಸರು. ಇಂತಹ ಭಕ್ತಿಯಿಂದಲೇ ಮೋಕ್ಷ, ಬೇರೆ ಮಾರ್ಗವಿಲ್ಲ.

**ಬ್ರಹ್ಮರುದ್ರರಮಾದಿಭ್ಯೋಽಪ್ಯುತ್ತಮತ್ವಂ ಸ್ವತಂತ್ರತಾಮ್ ।**
**ಸರ್ವಸ್ಯ ತದಧೀನತ್ವಂ ಸರ್ವಸದ್ಗುಣಪೂರ್ಣತಾಮ್ ॥**

*

**ನಿರ್ದೋಷತ್ವಂ ಚ ವಿಜ್ಞಾಯ ವಿಷ್ಣೋಃ ತತ್ರಾಖಿಲಾಧಿಕಃ ।**
**ಸ್ನೇಹೋ ಭಕ್ತಿರಿತಿ ಪ್ರೋಕ್ತಃ ಸರ್ವೋಪಾಯೋತ್ತಮೋ ಮತಃ ॥**
**ತೇನೈವ ಮೋಕ್ಷೋ ನಾನ್ಯೇನ ದೃಷ್ಟ್ಯಾದಿಃ ತತ್ರ ಸಾಧನಮ್ ॥**

—(ಗೀತಾ ತಾತ್ಪರ್ಯನಿರ್ಣಯ)

ಶ್ರೀಹರಿಯು ಬ್ರಹ್ಮ, ರುದ್ರ, ರಮಾದಿಗಳಿಗಿಂತಲೂ ಸ್ವತಂತ್ರನು, ಸರ್ವವೂ ಅವನ ಅಧೀನ, ಅವನು ಸಮಸ್ತ ಗುಣಪರಿಪೂರ್ಣ, ದೋಷವರ್ಜಿತ ಎಂಬುದನ್ನು ಚೆನ್ನಾಗಿ ಅರಿತು ಅವನಲ್ಲಿ ಸರ್ವಾಧಿಕ ಪ್ರೇಮಮಾಡುವುದೇ "ಭಕ್ತಿ". ಇದು ಸರ್ವ ಉಪಾಯಗಳಲ್ಲಿಯೂ ಉತ್ತಮ. ಇಂತಹ ಭಕ್ತಿಯಿಂದಲೇ ಮೋಕ್ಷ, ಅಪರೋಕ್ಷ ಜ್ಞಾನಾದಿಗಳು ಭಕ್ತಿಗೆ ಸಾಧನ.

ಭಗವಂತನ ಪ್ರಸಾದಕ್ಕೆ ಭಕ್ತಿಯೇ ಅತ್ಯುತ್ತಮವಾದ ಸಾಧನವೆಂಬುದನ್ನು ಬ್ರಹ್ಮಸೂತ್ರಭಾಷ್ಯದ "ಪರೇಣಾಧಿಕರಣ"ದಲ್ಲಿ ಸ್ಪಷ್ಟಪಡಿಸಲಾಗಿದೆ.]

**ತಸ್ಮಾತ್ತಾಸ್ವ ಭೂಯಸೀ ಭಕ್ತಿಃ ಸೈಕಾ ನಿಃಶ್ರೇಯಸೇಪ್ಸ್ಯಲಮ್ ।**
**ಭಕ್ತ್ಯಾ ತು ಮಮತಾ ಹಾನಿರ್ಜಾಯತೇ ನಾತ್ರ ಸಂಶಯಃ ॥ ೪೩ ॥**

ಆದುದರಿಂದ ಮೋಕ್ಷಕ್ಕೆ ಅತಿಶಯವಾದ ಪರಿಶುದ್ಧವಾದ ಭಕ್ತಿಯು ಅವಶ್ಯಕ. ಭಕ್ತಿಯಿಂದ "ನಾನು–ನನ್ನದು" ಎಂಬ ಮಮತಾ ಸಹ ನಾಶವಾಗುತ್ತದೆ, ಸಂಶಯವಿಲ್ಲ.

**ಪುರಾ ತು ಜನಕೋ ನಾಮ ರಾಜರ್ಷಿರ್ಲೋಕವಿಶ್ರುತಃ ।**
**ಹರೇರ್ಭಕ್ತ್ಯೈವ ಮಮತಾಂ ತತ್ಯಾಜಾಖಿಲಸಂಪದಿ ॥ ೪೪ ॥**

ಹಿಂದೆ ಜನಕನೆಂಬ ಲೋಕಪ್ರಸಿದ್ಧನಾದ ರಾಜರ್ಷಿಯು ಇದ್ದನು. ಆತನು ಹರಿಭಕ್ತಿಯಿಂದ ಸಕಲ ರಾಜ್ಯವೈಭವಗಳಲ್ಲಿಯೂ "ಮಮತಾ"ವನ್ನು ಪರಿತ್ಯಜಿಸಿದನು.

**ಪುರಾ ತು ಮಿಥಿಲಾಖ್ಯಾಶೇ ರಾಜರ್ಷಿಶ್ಚ ಮಹಾಮತಿಃ ।**
**ವ್ಯಾಸಾತ್ ಶುಶ್ರಾವ ಸಕಲಂ ರಹಸ್ಯಂ ಮಂಗಲಪ್ರದಮ್ ॥ ೪೫ ॥**
**ಶುಶ್ರುವುಸ್ತೇನ ಸಾಕಂ ಚ ಮುನಯೋಽಪಿ ಸಹಸ್ರಶಃ ।**
**ವಿದ್ಯಮಾನೇಷು ಯತಿಷು ಭಗವಾನ್ ಬಾದರಾಯಣಃ ॥ ೪೬ ॥**
**ಜನಕಂ ತು ನಿರೀಕ್ಷ್ಯೈವ ವ್ಯಾಜಹಾರ ಮಹಾಮತಿಃ ।**
**ತದಾ ತು ಮುನಯಃ ಸರ್ವೇ ವದಂತ್ಯೇವಂ ಪರಸ್ಪರಮ್ ॥ ೪೭ ॥**

ಮಿಥಿಲಾ ನಗರದಲ್ಲಿದ್ದ ಈ ಜನಕನೆಂಬ ರಾಜರ್ಷಿಯು ಶ್ರೀವೇದವ್ಯಾಸರಿಂದ ಅತ್ಯಂತ ಮಂಗಳಕರವಾದ ತತ್ವರಹಸ್ಯಗಳನ್ನೆಲ್ಲ ಕೇಳಿ ತಿಳಿದುಕೊಂಡನು. ಉಪದೇಶ ಕಾಲದಲ್ಲಿ ಜನಕರಾಜನ ಜೊತೆಯಲ್ಲಿ ಅನೇಕ ಸಹಸ್ರಮುನಿಗಳೂ ಸಹ ಇದ್ದರು. ಬಾದರಾಯಣರು ಜನಕರಾಜನನ್ನು ಮಾತ್ರವೇ ನೋಡುತ್ತಾ, ಉಪದೇಶ ನೀಡು ತ್ತಿದ್ದರು. ಆಗ ಆ ಮುನಿಗಳು ತಮ್ಮತಮ್ಮಲ್ಲಿಯೇ ಈರೀತಿ ಮಾತನಾಡಿಕೊಂಡರು.

**ಪ್ರಭುತ್ವಾಜ್ಜನಕಂ ವೀಕ್ಷ್ಯ ಪ್ರತ್ಯಬೋಧಿ ಮಹಾತ್ಮನಾ ।**
**ಚೀರಚ್ಛನ್ನಾನ್ ವೃಥಾವಾಕ್ಯಾನ್ ಕುತೋऽಸ್ಮಾನ್**
**ಬೋಧಯತ್ಯಯಮ್ ॥ ೪೮ ॥**

ರಾಜನಾದಪ್ರಯುಕ್ತ ಜನಕನನ್ನು ನೋಡಿ ಉಪದೇಶ ಮಾಡುತ್ತಿದ್ದಾರೆ. ಹರಿದ ವಸ್ತ್ರಧಾರಿಗಳಾದ ವ್ಯರ್ಥವಾಗಿ ಮಾತನಾಡುವ ನಮ್ಮನ್ನು ಉದ್ದೇಶಿಸಿ ಯಾತಕ್ಕೆತಾನೇ ಉಪದೇಶ ಮಾಡುತ್ತಾರೆ ?

**ಯೇ ಕೇಚನ ತಪೋವೃದ್ಧಾ ಜ್ಞಾನವೃದ್ಧಾಸ್ತಥೈವ ಚ ।**
**ವಯೋವೃದ್ಧಾಸ್ತಥಾ ಸರ್ವೇ ಧನವೃದ್ಧಸ್ಯ ಕಿಂಕರಾಃ ॥ ೪೯ ॥**

ತಪೋವೃದ್ಧರೂ ಜ್ಞಾನವೃದ್ಧರೂ, ವಯೋವೃದ್ಧರೂ ಧನವಂತನ ಸೇವಕ ರಂತೆ ಇರುತ್ತಾರೆ.

[**ವಿಶೇಷಾಂಶ :** ಸಾಮಾನ್ಯ ಬಡಜನರು ಐಶ್ವರ್ಯವಂತರ ಸೇವಕರಂತೆ ಇರುತ್ತಾರೆಂಬುದು ಅನುಭವ ಸಿದ್ಧ. ಧನಿಕರು ತಮ್ಮಲ್ಲಿ ಯಾಚಿಸಲು ಬಂದ ಬಡವರನ್ನು ಯಾವರೀತಿ ನೋಡುತ್ತಾರೆಂಬುದನ್ನು ಸುಭಾಷಿತವು ಹೀಗೆ ಹೇಳುತ್ತದೆ.

**ಏಹಿ ಗಚ್ಛ ಪತೋತ್ತಿಷ್ಠ ವದ ಮೌನಂ ಸಮಾಚರ ।**
**ಏವಮಾಶಾಗ್ರಹಗ್ರಸ್ತೈಃ ಕ್ರೀಡಂತಿ ಧನಿಕೋऽರ್ಥಿಭಿಃ ॥**

ಬಾ, ಹೋಗು, ಬೀಳು, ಏಳು, ಮಾತಾಡು, ಸುಮ್ಮನಿರು—ಈ ರೀತಿಯ ಮಾತುಗಳಿಂದ ಧನಿಕರು ಆಶಾಗ್ರಹಕ್ಕೆ ಬಲಿಯಾದ ಯಾಚಕಜನರೊಡನೆ ಕ್ರೀಡಿಸುತ್ತಾರೆ.]

**ರಾಜಾಧಿರಾಜಂ ಜನಕಂ ಧನವೃದ್ಧಂ ಮಹಾಪ್ರಭುಮ್ ।**
**ಸಂಭಾವಯತ್ಯಸೌ ಕಸ್ಮಾತ್ ಭಿಕ್ಷುಕಾನ್ ಚೀರವಾಸಿನಃ ॥ ೫೦ ॥**

ಧನಿಕನಾದ ಚಕ್ರವರ್ತಿಯಾದ ಪ್ರಭುವಾದ ಜನಕನಿಗೆ ವ್ಯಾಸರು ಮರ್ಯಾದೆ ಯನ್ನು ಕೊಡುತ್ತಾರೆಯೇ ವಿನಹ ಹರಕು ವಸ್ತ್ರಧಾರಿಗಳಾಗಿ ಭಿಕ್ಷುಕರಾದ ನಮ್ಮನ್ನು ಯಾತಕ್ಕೆ ಮರ್ಯಾದೆಯಿಂದ ನೋಡುತ್ತಾರೆ ?

**ಯತಿಗೀತಂ ತತೋ ಜ್ಞಾತ್ವಾ ಕೃಷ್ಣದ್ವೈಪಾಯನೋ ಮುನಿಃ ।**
**ಸ್ಫುಟೀಕರ್ತುಂ ಮುನೀನಾಂ ಸ ಚಿತ್ತಕಾಲುಷ್ಯಮಂಜಸಾ ॥ ೫೧ ॥**
**ಮನಃಶುದ್ಧಿಂ ನೃಪಸ್ಯಾಪಿ ತತೋ ಮಾಯಾಂ ಸಸರ್ಜ ಸಃ ।**
**ಮಾಯಯಾ ಮಿಥಿಲಾಯಾಂ ಚ ವಹ್ನಿಬಾಧಾ ಮಹತ್ಯಭೂತ್ ॥ ೫೨ ॥**

ಮುನಿಗಳ ಈ ಮಾತುಗಳನ್ನು ತಿಳಿದ ವ್ಯಾಸರು ಇವರ ಮನಸ್ಸಿನ ಕಲ್ಮಷ ವನ್ನು ಎಲ್ಲರಿಗೂ ತೋರಿಸುವುದಕ್ಕಾಗಿಯೂ, ಜನಕರಾಜನ ಮನಃಶುದ್ಧಿಯನ್ನು ಪ್ರಕಟಮಾಡುವುದಕ್ಕಾಗಿಯೂ ಮಾಯೆಯಿಂದ ಅಗ್ನಿಯನ್ನು ಸೃಷ್ಟಿಸಿದರು. ಆ ಅಗ್ನಿಯು ಮಿಥಿಲಾನಗರದಲ್ಲಿ ಬಹಳ ಬಾಧೆಕೊಡಲಾರಂಭಿಸಿತು.

**ತದಾ ವ್ಯಾಖ್ಯಾನಸದಸಿ ಪ್ರೋಚುಸ್ತಂ ಕೋಶಪಾಲಕಾಃ ।**
**ದಹತ್ಯಗ್ನಿಃ ಪುರೀಂ ಸರ್ವಾಂ ಕೋಶೋ ದಗ್ಧೋಽಧುನೇತಿ ಚ ॥ ೫೩ ॥**

ರಾಜನ ದ್ರವ್ಯಾದಿಗಳನ್ನು ರಕ್ಷಿಸುವ ಸೇವಕರು ಸಭೆಗೆ ಬಂದು ಜನಕನಿಗೆ ಹೇಳಿದರು. "ಪಟ್ಟಣವನ್ನೆಲ್ಲ ಅಗ್ನಿಯು ಸುಡುತ್ತಿದೆ ; ಖಜಾನೆಯು ಇದೀಗ ಸುಟ್ಟುಹೋಯಿತು".

**ತತ್ ಶ್ರುತ್ವಾ ಜನಕಃ ಪ್ರಾಹ ನ ಮೇ ಕಿಂಚನ ದಹ್ಯತಿ ।**
**ತತ್ ಶ್ರುತ್ವಾ ಚರಿತಂ ಜಗ್ಮುಃ ಯತಯೋಽಪ್ಯಭಿಮಾನಿನಃ ॥ ೫೪ ॥**

ಈ ಮಾತನ್ನು ಕೇಳಿದ ಜನಕನು "ನನ್ನ ವಸ್ತುವೇನೂ ಸುಟ್ಟಿಲ್ಲವಲ್ಲ" ಎಂದುಬಿಟ್ಟನು. ಇದನ್ನೆಲ್ಲ ಕೇಳಿದ ಇತರ ಮುನಿಗಳು ಅಭಿಮಾನಯುಕ್ತರಾಗಿ ಅಲ್ಲಿಂದ ಹೊರಟರು.

**ಮಠಶಾಟ್ಯಾದಿರಕ್ಷಾರ್ಥಮನಿಮಂತ್ರ್ಯ ಗುರುಂ ನೃಪಮ್ ।**
**ಭೃತ್ಯಾಶ್ಚ ಪುನರಪ್ಯೂಚುಃ ದಗ್ಧಮಂತಃಪುರಂ ತ್ವಿತಿ ॥ ೫೫ ॥**
**ತತ್ ಶ್ರುತ್ವಾ ಜನಕಃ ಪ್ರಾಹ ನ ಮೇ ಕಿಂಚನ ದಹ್ಯತಿ ।**
**ಪರೇಽಪ್ಯಾಗತ್ಯ ತಂ ಪ್ರೋಚುಃ ದಗ್ಧಾಂ ಸೌಧಾದಿಕಾಂಸ್ತ್ವಿತಿ ॥ ೫೬ ॥**

ತಮ್ಮ ವಾಸಸ್ಥಳಗಳನ್ನೂ, ಕಾವೀಬಟ್ಟೆ ಮಂತಾದುವನ್ನೂ ರಕ್ಷಿಸಲು ಹೋಗುವಾಗ ಜನಕನಿಗಾಗಲೀ, ವ್ಯಾಸರಿಗಾಗಲೀ ಹೇಳಲೇ ಇಲ್ಲ. ಪುನಃ ಸೇವಕರು ಬಂದು "ರಾಜನೇ ! ಅಂತಃಪುರವು ಸುಟ್ಟುಹೋಯಿತು" ಎಂದರು. ಜನಕನು "ನನ್ನ ವಸ್ತುವೇನೂ ಸುಟ್ಟುಹೋಗಿಲ್ಲ" ಎಂದನು. ಮತ್ತೆ ಕೆಲವುಜನ ಸೇವಕರು ಬಂದು "ರಾಜನೇ ! ಅರಮನೆಯ ಮೇಲಿನ ಉಪ್ಪರಿಗೆಯು ಸುಟ್ಟುಹೋಯಿತು" ಎಂದು ತಿಳಿಸಿದರು.

**ತತ್ ಶ್ರುತ್ವಾ ತ್ವರಿತಂ ಜಗ್ಮುಃ ಯತಯೋऽಪ್ಯಭಿಮಾನಿನಃ ।**
**ತದಾಭಿದ್ರುತ್ಯ ತೇ ಸರ್ವೇ ತ್ವರಯಾ ಮುನಯೋऽಖಿಲಾಃ ॥ ೫೭ ॥**

**ಅಸ್ಮಾಕಂ ಚ ಮಠಃ ಶಾಟೀ ದಗ್ಧಾ ಚೈಷ ಕಮಂಡಲುಃ ।**
**ಸೋಪಸ್ಕರಾಣಿ ಚಾನ್ಯಾನಿ ತಾವತಾ ಖಿದ್ಯತೇ ಮನಃ ॥ ೫೮ ॥**

ಇದನ್ನು ಕೇಳಿದ ನಂತರ ಇನ್ನೂ ಉಳಿದಿದ್ದ ಮುನಿಗಳು ಕೂಡಲೇ ಓಡಿಹೋಗಿ ತಮ್ಮ ಆಶ್ರಮ, ವಸ್ತ್ರಗಳು, ಕಮಂಡಲುಗಳು ಮತ್ತು ಇತರ ವಸ್ತುಗಳೂ ಸುಟ್ಟಿರುವುದನ್ನು ನೋಡಿ ತುಂಬ ದುಃಖಪಟ್ಟರು.

**ವಹ್ನಿಜ್ವಾಲಾಕುಲಂ ವೀಕ್ಷ್ಯ ಮಠಂ ಸ್ವಂ ಸ್ವಂ ಸುದುಃಖಿತಾಃ ।**
**ಗತ್ವಾ ಗತ್ವಾ ಪುನಃ ಪ್ರೋಚುಸ್ತಂ ನೃಪಂ ಯತಯೋऽಖಿಲಾಃ ॥ ೫೯ ॥**

ಹೀಗೆ ಸುಟ್ಟಿರುವ ವಸ್ತುಗಳನ್ನು ನೋಡಿ ದುಃಖಿತರಾದ ಯತಿಗಳು ಸಭೆಗೆ ಬಂದು ರಾಜನಿಗೆ ಹೇಳಿದರು.

**ಪುರಂ ಕೋಶಂ ಗೃಹಂ ಸರ್ವಂ ದಹ್ಯತೇऽದ್ಯಾಪಿ ತೇ ನೃಪ ।**
**ತಸ್ಮಿನ್ ಸ್ಥಿತೇ ಭವಾನ್ ಭೂಪ ತದೇವಾದ್ಯ ತು ಗಚ್ಛತಿ ॥ ೬೦ ॥**

"ರಾಜನೇ, ಪಟ್ಟಣ, ಕೋಶ, ಮನೆ ಸರ್ವವೂ ಸುಟ್ಟುಹೋದವು. ನೀನು ಇನ್ನೂ ಇಲ್ಲಿಯೇ ಕುಳಿತಿದ್ದರೆ ಎಲ್ಲವೂ ನಾಶವಾಗುತ್ತವೆ."

**ಶ್ವೋ ವಾऽಪಿ ಶಕ್ಯತೇ ಶ್ರೋತುಂ ಶಮಯಾಗ್ನಿಂ ಜನೈಃ ಸಹ ।**
**ಶಾಂತೇऽಗ್ನೌ ನೋऽವಶಿಷ್ಟಂ ಚ ಕಿಂಚಿದ್ವಾ ಶಿಷ್ಯತೇ ನೃಪ ॥ ೬೧ ॥**

"ಈ ಉಪದೇಶವನ್ನು ನಾಳೆ ಕೇಳಲು ಸಾಧ್ಯ. ಈಗ ನಿನ್ನ ಭೃತ್ಯರಿಂದ ಸಹಿತನಾಗಿ ಬೆಂಕಿಯನ್ನು ಆರಿಸಲು ಕ್ರಮ ತೆಗೆದುಕೊ. ಅಗ್ನಿ ಆರಿದನಂತರ ಏನಾದರೂ ವಸ್ತು ಉಳಿದಿದ್ದರೆ ಅದೇ ನಮಗೆ ಉಪಯೋಗ."

**ಸ್ವಾರ್ಥಂ ಚಾಪಿ ಪರಾರ್ಥಂ ಚ ಗತ್ವಾ ಶೀಘ್ರಮುಪದ್ರವಮ್ ।**
**ಶಮಯೇತಿ ಚ ತದ್ವಾಕ್ಯಂ ನೃಪೋऽಪ್ಯಾಹ ಚ ತಾನ್ ಮುನೀನ್ ॥೬೨॥**

"ಸ್ವಾರ್ಥದಿಂದಲೂ, ಇತರರಿಗೋಸ್ಕರವೂ ಶೀಘ್ರವಾಗಿ ಬೆಂಕಿಯನ್ನಾರಿಸು" ಎಂಬ ಮುನಿಗಳ ಮಾತುಗಳನ್ನು ಕೇಳಿ ರಾಜನು ಹೀಗೆ ಹೇಳಿದನು :

**ಐಶ್ವರೀಯಮಿದಂ ಸರ್ವಂ ಕೋಶಂ ವಿತ್ತಂ ಧನಾದಿಕಮ್ ।**
**ಪೂರ್ವಕರ್ಮಾನುರೋಧೇನ ದತ್ತಂ ತದ್ಧರಿಣಾ ಮಮ ॥ ೬೩ ॥**

ಇಲ್ಲಿರುವ ಸಕಲ ಐಶ್ವರ್ಯ, ಕೋಶ, ಧನಾದಿ ಭೋಗವಸ್ತುಗಳೆಲ್ಲವೂ ನನ್ನ ಪೂರ್ವಕರ್ಮಫಲರೂಪವಾಗಿ ಶ್ರೀಹರಿಯಿಂದ ನನಗೆ ಕೊಡಲ್ಪಟ್ಟಿವೆ.

**ಸ ಏವ ಹರ್ತಾ ಚೇದಾನೀಂ ನ ಮೇ ಕಿಂಚನ ದಹ್ಯತಿ ।**
**ಲಾಭಾನಾಮುತ್ತಮೋ ಲಾಭಃ ಕಥಾ ವೈ ಕೈಟಭದ್ವಿಷಃ ॥ ೬೪ ॥**

ಇದನ್ನೆಲ್ಲ ಕಿತ್ತುಕೊಳ್ಳುವವನೂ ಆ ಶ್ರೀಹರಿಯೇ ; ನನ್ನ ವಸ್ತು ಯಾವುದೂ ಸುಡಲ್ಪಡುವುದಿಲ್ಲ. ಲಾಭಗಳಲ್ಲಿ ಅತ್ಯಂತ ಶ್ರೇಷ್ಠವಾದುದು ಕೈಟಭನೆಂಬ ದೈತ್ಯ ನನ್ನು ಸಂಹರಿಸಿದ ಶ್ರೀಹರಿಯ ಕಥಾಶ್ರವಣವೇ.

**ಕೋಟಿಲಾಭೋತ್ತಮೋ ಭೋಗೋ ಗತೇ ಮಯಿ ಗಮಿಷ್ಯತಿ ।**
**ಅಭ್ಯಾಶೇ ಚ ಮುನೇರಸ್ಯ ಮದೀಯಂ ವರ್ತತೇऽಖಿಲಮ್ ॥ ೬೫ ॥**

ನಾನು ಸಭೆಯಿಂದ ಎದ್ದುಹೋದರೆ ದಹ್ಯವಾದ ವಸ್ತುಗಳ ಲಾಭಕ್ಕಿಂತ ಕೋಟಿಯಷ್ಟು ಭೋಗಕೊಡುವ ಭಗವತ್ಕಥಾಶ್ರವಣವು ತಪ್ಪಿಹೋಗುತ್ತದೆ. ನನ್ನ ಸಮಸ್ತ ಲಾಭದಾಯಕ ವಸ್ತುಗಳೂ ಇಲ್ಲಿರುವ ಶ್ರೀವ್ಯಾಸರಲ್ಲಿವೆ.

**ಮಿಥಿಲಾ ದಹ್ಯಮಾನಾ ಸಾ ನ ಮೇ ಕಿಂಚನ ದಹ್ಯತಿ ।**
**ರಾಗಾದ್ಯತಿಗಣಶ್ಚೈವ ಇತಶ್ಚೇತಶ್ಚ ಧಾವತಿ ॥ ೬೬ ॥**
**ಹಾ ಕಷ್ಟಮಖಿಲಂ ಪ್ರಾಪ್ತಂ ಹಾ ನಷ್ಟಮತುಲಂ ತ್ವಿತಿ ।**

ಮಿಥಿಲಾ ನಗರವು ಸುಟ್ಟುಹೋಗಲು ನನ್ನ ವಸ್ತು ಯಾವುದೂ ಸುಡಲ್ಪಡಲಿಲ್ಲ. —ಹೀಗೆ ರಾಜನು ನುಡಿಯಲು ಆ ಮುನಿಗಳು ಕೋಪದಿಂದ ಅಲ್ಲಿಂದ ಹೊರಟು, ಅಲ್ಲಿ–ಇಲ್ಲಿ ತಿರುಗಾಡುತ್ತಾ "ಹಾ ನಮಗೆ ಕಷ್ಟಬಂದಿತು, ನಷ್ಟವಾಯಿತು" ಎಂಬುದಾಗಿ ಕೂಗಾಡಿದರು.

**ಪಶ್ಚಾತ್ತಂ ಶಮಯಾಮಾಸ ಮಾಯಾಂ ಸತ್ಯವತೀಸುತಃ ॥ ೬೭ ॥**

ನಂತರ ಶ್ರೀವೇದವ್ಯಾಸರು ಆ ಅಗ್ನಿಯನ್ನು ಶಮನಗೊಳಿಸಿದರು.

**ಪುನರಾಗತ್ಯ ರಾಜನ್ಯಾಃ ಪ್ರೋಚುಸ್ತಂ ನೃಪಪುಂಗವಮ್ ।**
**ಅಗ್ನಿಜ್ವಾಲಾಗತಾಃ ಸರ್ವಾ ನ ಕಿಂಚಿದ್ದಗ್ಧಮಿತ್ಯಪಿ ॥ ೬೮ ॥**

ಹೊರಟುಹೋಗಿದ್ದ ಮುನಿಗಳೂ, ಇತರ ರಾಜರೂ ಪುನಃ ಸಭೆಗೆ ಬಂದು ರಾಜಶ್ರೇಷ್ಠನಾದ ಜನಕನಿಗೆ ಹೀಗೆ ಹೇಳಿದರು—ಅಗ್ನಿಜ್ವಾಲೆಯು ಎಲ್ಲ ಕಡೆಯೂ ಹರಡಿದ್ದರೂ ಒಂದು ಪದಾರ್ಥವೂ ಸುಡಲ್ಪಟ್ಟಿಲ್ಲ.

**ತತ್ ಶ್ರುತ್ವಾ ನ ಮುಮೋದಾಸೌ ಶ್ರುತ್ವಾ ಪೂರ್ವಂ ನ ಶೋಕವಾನ್ ।**
**ಯತಿಭ್ಯೋ ದರ್ಶಯಾಮಾಸ ಚಿತ್ತಶುದ್ಧಿಂ ಮಹಾತ್ಮನಃ ॥ ೬೯ ॥**

ಹೇಗೆ ಪಟ್ಟಣವು ಸುಡಲ್ಪಡುತ್ತಿದೆಯೆಂದಾಗ ಶೋಕಪಡಲಿಲ್ಲವೋ ಹಾಗೆಯೇ ಜನಕರಾಜನು ವಸ್ತುಗಳು ಅಗ್ನಿಯಿಂದ ನಾಶವಾಗಿಲ್ಲವೆಂದು ತಿಳಿಸಿದಾಗ ಸಂತೋಷ ವನ್ನೂ ವ್ಯಕ್ತಪಡಿಸಲಿಲ್ಲ. ವ್ಯಾಸರು ಮಹಾತ್ಮನಾದ ಜನಕರಾಜನ ಅಂತಃಕರಣ ಶುದ್ಧಿ ಎಷ್ಟಿದೆಯೆಂಬುದನ್ನು ಎಲ್ಲ ಯತಿಗಳಿಗೂ ಪ್ರಕಟಗೊಳಿಸಿದರು.

**ವ್ರೀಡಯಾ ನತಮೂರ್ಧಾನೋ ಯತಯೋ ಜಾತಸಾಧ್ವಸಾಃ ।**
**ಕ್ಷಮಸ್ವೇತಿವದಂತಶ್ಚ ಸರ್ವೇ ಪ್ರಾಂಜಲಯೋಽಭವನ್ ॥**
**ತುಷ್ಟುವುರ್ವಿವಿಧೈಃ ಸ್ತೋತ್ರೈಃ ಮಹಾಪುರುಷಮವ್ಯಯಮ್ ॥ ೭೦ ॥**

ಮುನಿಗಳೆಲ್ಲರೂ ಲಜ್ಜೆಯಿಂದ, ಭಯದಿಂದ, ತಲೆತಗ್ಗಿಸಿ ಕೈಮುಗಿದು ಶ್ರೀವ್ಯಾಸರನ್ನು ಕ್ಷಮಿಸಿರೆಂದು ಬೇಡುತ್ತಾ ಆ ಮಹಾಮಹಿಮನಾದ ನಾಶರಹಿತ ನಾದ ಪರಮಾತ್ಮನನ್ನು ನಾನಾಬಗೆಯಿಂದ ಸ್ತೋತ್ರಮಾಡಿದರು.

**ಭೂಮನ್ ವಿಭೋ ವಯಮಿಮಾಂ ನ ವಿದಾಮ ಶಕ್ತಿಂ**
**ವೇದೈಕಗಮ್ಯ ಪುರುಷೋತ್ತಮ ವಿಶ್ವರೂಪ ।**
**ಸಜ್ಜ್ಞಾನನಿರ್ವೃತಿತನೋಃ ಕುತ ಏವ ತೇ ಸ್ಯಾತ್**
**ವೈಷಮ್ಯಮಸ್ಯ ಜಗತೋ ಹಿತಮಿಚ್ಛತಸ್ತೇ ॥ ೭೧ ॥**

ಅಪ್ರಾಕೃತ ಜ್ಞಾನ, ಐಶ್ವರ್ಯ, ಶಕ್ತಿಗಳಿಂದ ಪರಿಪೂರ್ಣನಾದ ಪುರುಷೋತ್ತ ಮನೇ! ನಿನ್ನ ಶಕ್ತಿಯನ್ನು ನಾವು ತಿಳಿಯಲಾರೆವು ; ನೀನು ವೇದಗಳಿಂದ ಮಾತ್ರವೇ ವೇದ್ಯನು, ಅಸಂಖ್ಯಾತವಾದ ರೂಪವುಳ್ಳವನು, ಸಜ್ಜನರ ಹಿತಕ್ಕಾಗಿ ಅವತಾರ ಮಾಡಿರುವ ನಿನಗೆ ವೈಷಮ್ಯವು ಎಲ್ಲಿಂದ ಬರುತ್ತದೆ ? (ಬರುವುದೇ ಇಲ್ಲ.)

[**ವಿಶೇಷಾಂಶ :** ಪರಮಾತ್ಮನಿಗೆ ವೈಷಮ್ಯ (ಪಕ್ಷಪಾತ), ನೈರ್ಘಣ್ಯ (ಕ್ರೂರತನ) ಮುಂತಾದ ದೋಷಗಳು ಎಂದಿಗೂ ಇಲ್ಲ. ಜೀವರಿಗೆ ಫಲ ಕೊಡಲು ಅವರು ಜನ್ಮಾಂತರಗಳಲ್ಲಿ ಮಾಡಿದ ಕರ್ಮವನ್ನು ಅನುಸರಿಸಿಯೇ ಕೊಡುತ್ತಾನೆ, ಎಂಬ ಪ್ರಮೇಯವು ಬ್ರಹ್ಮಸೂತ್ರಭಾಷ್ಯದ "ವೈಷಮ್ಯನೈರ್ಘೃಣ್ಯಾಧಿಕರಣ"ದಲ್ಲಿ ವಿವರಿಸಲ್ಪಟ್ಟಿದೆ.

**ಸಮೋಽಹಂ ಸರ್ವಭೂತೇಷು ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ ।**
**ಯೇ ಭಜಂತಿ ತು ಮಾಂ ಭಕ್ತ್ಯಾ ಮಯಿ ತೇ ತೇಷು ಚಾಪ್ಯಹಮ್ ॥**

—ಗೀತಾ

ನಾನು ಸಮಸ್ತ ಚೇತನರಲ್ಲಿಯೂ ಸಮನು, ಎಂದರೆ ನಾನು ಕಾರಣವಿಲ್ಲದೆ ಯಾರನ್ನೂ ದ್ವೇಷಿಸುವುದಿಲ್ಲ ; ಕಾರಣವಿಲ್ಲದೆ ಯಾರನ್ನೂ ಪ್ರೀತಿಸುವುದೂ ಇಲ್ಲ. ಯಾರು ನನ್ನನ್ನು ಭಕ್ತಿಯಿಂದ ಭಜಿಸುತ್ತಾರೆಯೋ ಅವರಿಗೆ ನನ್ನಲ್ಲಿ ಪ್ರೀತಿ ಇರುತ್ತದೆ ಮತ್ತು ನಾನೂ ಸಹ ಅವರಲ್ಲಿ ಅನುಗ್ರಹ ಮಾಡುತ್ತೇನೆ.]

**ಲೋಕೇ ಮಹಾಪುರುಷಗೌತಮಶಾಪನಷ್ಟಾ**
**ಸಜ್ಞಾನಸಂತತಿರಭೂತ್ ಕಿಲ ಭೂರಿ ಕಾಲಮ್ ।**
**ಅಭ್ಯರ್ಥಿತಃ ಸುರಗಣೈರ್ಜಗತೋ ಹಿತಾಯ**
**ನಾರಾಯಣಃ ಪರಮಕಾರುಣಿಕೋ ಜಗತ್ಯಾಮ್ ॥ ೭೨ ॥**

**ಜಜ್ಞೇ ಭವಾನ್ ಕಿಲ ಕಲಿಂದಕುಮಾರಿಕಾಯಾಂ**
**ದ್ವೀಪೇ ಚ ಲೋಕತಮಸಂ ಚ ನಿರಾಚಿಕೀರ್ಷುಃ ।**

ಮಹಾತಪಸ್ವಿಗಳಾದ ಗೌತಮರ ಶಾಪದಿಂದ ಜನರಲ್ಲಿ ಜ್ಞಾನವು ತಿರೋಧಾನ ಹೊಂದಿ ಅಜ್ಞಾನವು ವ್ಯಾಪಿಸಲು ದೇವತೆಗಳಿಂದ ಪ್ರಾರ್ಥಿತನಾಗಿ ಜಗತ್ತಿನ ಹಿತಕ್ಕಾಗಿ ಪರಮಕರುಣಾಶಾಲಿಯಾದ ನಾರಾಯಣನಾದ ನೀನು ಸತ್ಯವತೀದೇವಿಯನ್ನು ನಿಮಿತ್ತಮಾಡಿಕೊಂಡು ದ್ವೀಪದಲ್ಲಿ ಅವತಾರ ಮಾಡಿರುತ್ತೀಯೆ.

**ತ್ವಮೇವ ಸಾಕ್ಷಾಜ್ಜಗತಃ ಪ್ರಸೂತಿಃ ಸ್ಥಾನಂ ನಿಧಾನಂ ಭವದಾಶ್ರಯಸ್ಯ ॥ ೭೩ ॥**

ಸಾಕ್ಷಾತ್ ನೀನು ಜಗತ್ತಿಗೆ ಸೃಷ್ಟ್ಯಾದಿಗಳ ಕರ್ತಾ ; ಈ ಜಗತ್ತು ನಿನ್ನ ಆಶ್ರಯದಲ್ಲಿದೆ.

[**ವಿಶೇಷಾಂಶ :** ದ್ವಾಪರೇ ಸರ್ವತ್ರ ಜ್ಞಾನೇ ಆಕುಲೀಭೂತೇ ತನ್ನಿರ್ಣಯಾಯ ಬ್ರಹ್ಮರುದ್ರೇಂದ್ರಾದಿಭಿಃ ಅರ್ಥಿತೋ ಭಗವಾನ್ ನಾರಾಯಣೋ ವ್ಯಾಸತ್ವೇನ ಅವತತಾರ —ಭಾಷ್ಯ.

ದ್ವಾಪರಯುಗದ ಅಂತ್ಯದಲ್ಲಿ ಭೂಲೋಕದಲ್ಲಿರುವ ಸಜ್ಜನರಲ್ಲಿ ಜ್ಞಾನವು ಕೆಟ್ಟುಹೋಗಲು ಜ್ಞಾನವನ್ನು ದೃಢಪಡಿಸುವುದಕ್ಕೋಸ್ಕರ, ಬ್ರಹ್ಮ-ರುದ್ರ-ಇಂದ್ರ ಇವರೇ ಮೊದಲಾದ ದೇವತೆಗಳಿಂದ ಪ್ರಾರ್ಥಿತನಾದ ಷಡ್ಗುಣೈಶ್ವರ್ಯಪೂರ್ಣನಾದ ಶ್ರೀಮನ್ನಾರಾಯಣನು ವೇದವ್ಯಾಸರೂಪದಿಂದ ಅವತರಿಸಿದನು.

**ಅವಿದ್ಯಯಾ ಸಂವೃತಮಾನಸಾ ಯೇ**
**ದೋಷಾವಿಲಂ ತ್ವಾಂ ಮನುಜಂ ಮಹಾತ್ಮನ್ ।**

**ತಸ್ಮಾದ್ವಯಂ ತ್ವಾಂ ನ ವಿದಾಮ ಮೌಢ್ಯಾತ್**
**ಕೃತಾವತಾರಂ ಜಗತೋ ಹಿತಾಯ ॥ ೭೪ ॥**

ಅಜ್ಞಾನ, ದೋಷ, ಭ್ರಾಂತಿಯಿಂದ ಯುಕ್ತರಾದ ಜನರು ನಿನ್ನನ್ನು ಸಾಮಾನ್ಯ ಮನುಷ್ಯನೆಂದು ಭಾವಿಸುತ್ತಾರೆ. ನಾವು ಸಹ ನಮ್ಮ ಮೂಢಭಾವ ದಿಂದ ಜಗತ್ತಿನ ಹಿತಕ್ಕಾಗಿ ಅವತಾರ ಮಾಡಿರುವ ನಿನ್ನ ಮನೋಭಾವವನ್ನು ಅರಿಯಲಿಲ್ಲ.

(ಅವಜಾನಂತಿ ಮಾಂ ಮೂಢಾಃ ಮಾನುಷೀಂ ತನುಮಾಶ್ರಿತಮ್ ।
ಪರಂ ಭಾವಂ ಅಜಾನಂತೋ ಮಮ ಭೂತಮಹೇಶ್ವರಮ್ —ಗೀತಾ

ಸರ್ವಭೂತಗಳಿಗೆ ಸ್ವಾಮಿಯಾದ ಉತ್ತಮವಾದ ನನ್ನ ಯಥಾರ್ಥ ರೂಪವನ್ನು ತಿಳಿಯದ ಮೂಢರು ಮನುಷ್ಯದೇಹದಂತೆ ಇರುವ ನನ್ನನ್ನು ಸರ್ವೋತ್ತಮನೆಂದು ತಿಳಿಯುವುದಿಲ್ಲ. ನಿಂದಿಸುತ್ತಾರೆ.)

**ವ್ಯಾಸೋ ಹಿ ಭಗವಾನ್ ಸಾಕ್ಷಾತ್ ಕೃಷ್ಣದ್ವೈಪಾಯನೋ ಹರಿಃ ।**
**ನ ತಸ್ಯ ಮನುಜೈಃ ಕೃತ್ಯಂ ವೃಥಾಸ್ಮಾಭಿಶ್ಚ ದೂಷಿತಃ ॥ ೭೫ ॥**

ವೇದವ್ಯಾಸರೆಂದರೆ ಸಾಕ್ಷಾತ್ ಶ್ರೀಹರಿಯೇ ; ಇವರಿಗೆ ಮನುಷ್ಯರಿಂದ ಏನೂ ಆಗಬೇಕಾದುದಿಲ್ಲ. ನಾವೂ ಸಹ ವ್ಯರ್ಥವಾಗಿ ಅವರನ್ನು ದೂಷಿಸಿದೆವು.

**ಮುನೇ ಪಾಹಿ ಮುನೇ ಪಾಹಿ ಪಾಹಿ ನೋ ಭವಸಾಗರಾತ್ ।**
**ವಯಮುದ್ಧಾ ದುರಾತ್ಮಾನೋ ವೃಥಾ ಪಂಡಿತಮಾನಿನಃ ॥ ೭೬ ॥**

ಈ ಸಂಸಾರಸಾಗರದಿಂದ ನಮ್ಮನ್ನು ರಕ್ಷಿಸಿರಿ, ವ್ಯಾಸರೇ ! ನಾವು ದುರಾತ್ಮರು. ನಾವೇ ಪಂಡಿತರೆಂದು ತಿಳಿದು ಅಹಂಕಾರದಿಂದ ಇರುತ್ತೇವೆ, ರಕ್ಷಿಸಿರಿ.

**ಕರಾವಲಂಬನಂ ದತ್ವಾ ವರ್ತಯಾನಿಂದ್ಯವರ್ತ್ಮನಿ ।**
**ಅಭಿಷ್ಟುತಸ್ತತಃ ಸರ್ವೈಃ ಭಗವಾನ್ ಬಾದರಾಯಣಃ ॥ ೭೭ ॥**

ನಮಗೆ ನಿಮ್ಮ ಆಶ್ರಯವನ್ನಿತ್ತು ನಿಂದ್ಯವಾದ ಮಾರ್ಗದಲ್ಲಿ ಹೋಗದಂತೆ ಮಾಡಿ, ಸನ್ಮಾರ್ಗದಲ್ಲಿರುವ ಬುದ್ಧಿಯನ್ನು ಅನುಗ್ರಹಿಸಿರಿ—ಹೀಗೆ ಸರ್ವರಿಂದಲೂ ಪ್ರಾರ್ಥಿತರಾದ ಭಗವಾನ್ ವೇದವ್ಯಾಸರು

**ಯತೀನವೋಚಯತ್ಪಶ್ಚಾತ್ ಮೇಘಗಂಭೀರಯಾ ಗಿರಾ ।**
**ಯುಷ್ಮನ್ಮನಸ್ಥಕಾಲುಷ್ಯಂ ಪರಿಹರ್ತುಂ ಮಯಾಧುನಾ ॥ ೭೮ ॥**
**ಸೃಷ್ಟಾ ಮಾಯಾ ನ ಸೋ ವಹ್ನಿಸ್ತಥಾ ಮೋsಹಂಕೃತಿರ್ಹೃತಾ ।**
**ಮಮತಾ ಖಲು ಸರ್ವತ್ರ ನಿದಾನಂ ಸುಖದುಃಖಯೋಃ ॥ ೭೯ ॥**

ಯತಿಗಳನ್ನು ಕುರಿತು ಮೇಘದಂತೆ ಇರುವ ಗಂಭೀರವಾಣಿಯಿಂದ ಹೇಳಿದರು– "ನಿಮ್ಮ ಮನಸ್ಸಿನ ಕಲ್ಮಷವನ್ನು ಪರಿಹರಿಸಲು ನಾನು ಈಗ ಮಾಯಾ ಅಗ್ನಿಯನ್ನು ಸೃಷ್ಟಿಸಿದೆನು. ಅದು ನಿಜವಾದ ಅಗ್ನಿಯಲ್ಲ; ಸುಖದುಃಖಗಳಿಗೆ ಕಾರಣವಾದುದು "ಮಮತಾ" ಅಂದರೆ "ನಾನು-ನನ್ನದು-ನನ್ನವರು" ಎಂಬ ಅಭಿಮಾನವೇ.

**ನೃಪೋಽಯಂ ಮಮತಾಹೀನೋ ಮಯಿ ಸಂನ್ಯಸ್ತಮಾನಸಃ ।**
**ತಸ್ಮಾತ್ ಪ್ರಿಯತಮೋಽಸ್ಯಾಸೀತ್ ಭವದ್ಭ್ಯಶ್ಚ ಮಹಾಮತಿಃ ॥ ೬೦ ॥**

ಈ ಜನಕರಾಜನು "ಮಮತಾ"ವನ್ನು ತ್ಯಜಿಸಿ, ನನ್ನಲ್ಲಿಯೇ ಮನಸ್ಸನ್ನು ಇಟ್ಟಿರುತ್ತಾನೆ. ಈ ಕಾರಣದಿಂದ ರಾಜನು ನಿಮ್ಮೆಲ್ಲರಿಗಿಂತ ನನಗೆ ಹೆಚ್ಚು ಪ್ರೀತ್ಯಾಸ್ಪದನಾಗಿರುವನು.

**ಅಹಂ ಜ್ಞಾನಿಪ್ರಿಯೋ ನಿತ್ಯಂ ಜ್ಞಾನಿನೋಽಪಿ ಮಮ ಪ್ರಿಯಾಃ ।**
**ಜ್ಞಾನಂ ಪ್ರತಿಷ್ಠಿತಂ ತಸ್ಮಿನ್ ಮಮತಾಹೀನಚೇತಸಿ ॥ ೬೧ ॥**

ಜ್ಞಾನಿಗಳಿಗೆ ನಾನು ನಿತ್ಯದಲ್ಲಿಯೂ ಪ್ರಿಯನು ; ಜ್ಞಾನಿಗಳು ನನಗೆ ತುಂಬ ಪ್ರಿಯರು. "ಮಮತಾ"ವನ್ನು ಪರಿತ್ಯಜಿಸಿದ ಜನರಲ್ಲಿ ಯಥಾರ್ಥ ಜ್ಞಾನ ಸ್ಥಿರವಾಗಿ ಇರುತ್ತದೆ.

(ಪ್ರಿಯೋ ಹಿ ಜ್ಞಾನಿನೋತ್ಯರ್ಥಮಹಂ ಸ ಚ ಮಮ ಪ್ರಿಯಃ —ಗೀತಾ
ಜ್ಞಾನಿಗಳಿಗೆ ನಾನು ಪ್ರಿಯನು, ನನಗೆ ಜ್ಞಾನಿಗಳು ಪ್ರಿಯರು)

**ಇತಃಪರಂ ಭವಂತಶ್ಚ ಹಿತ್ವಾ ತು ಮಮತಾಮತಿಮ್ ।**
**ಭಜಧ್ವಂ ಮಾಂ ತತೋ ಮೋಕ್ಷಮವಾಪ್ಸ್ಯಥ ನ ಸಂಶಯಃ ॥ ೬೨ ॥**

ಆದುದರಿಂದ ನೀವೆಲ್ಲರೂ "ಮಮತಾ"ವನ್ನು ಬಿಟ್ಟು ನನ್ನನ್ನೇ ಏಕಾಗ್ರಚಿತ್ತದಿಂದ ಧ್ಯಾನಿಸಿರಿ. ಹೀಗೆ ಮಾಡುವುದರಿಂದ ನಿಮಗೆ ಮೋಕ್ಷ ದೊರೆಯುವುದು, ಸಂಶಯವಿಲ್ಲ.

**ಇತಿ ತಾನ್ ಬೋಧಯಾಮಾಸ ತತ್ರೈವಾಸೀಚ್ಚಿರಂ ಮುನಿಃ ।**
**ತಸ್ಮಾತ್ತು ಮಮತಾಹೀನೋ ಜ್ಞಾನೀ ಯೋಗಿತ್ವಮಾಪ್ನುಯಾತ್ ॥ ೬೩॥**

ಹೀಗೆ ಉಪದೇಶಮಾಡಿದ ವ್ಯಾಸರು ಆ ಜನಕರಾಜನ ಬಳಿಯೇ ಬಹಳಕಾಲ ವಿದ್ದರು. ಮಮತಾವನ್ನು ತ್ಯಜಿಸಿದ ಜ್ಞಾನಿಯು ಯೋಗಿಯಾಗುವನು.

ಇತಿ ಶ್ರೀ ವಾಯುಪುರಾಣೇ ಮಾಘಮಾಸಮಾಹಾತ್ಮ್ಯೇ ಅಷ್ಟಾದಶೋಽಧ್ಯಾಯಃ

ಶ್ರೀ ವಾಯುಪುರಾಣಾಂತರ್ಗತ ಮಾಘಮಾಸ ಮಾಹಾತ್ಮ್ಯೆಯಲ್ಲಿ
ಹದಿನೆಂಟನೇ ಅಧ್ಯಾಯವು ಸಮಾಪ್ತಿಯಾಯಿತು.

**ಶಾಂಡಿಲ್ಯ ಉವಾಚ —**

**ಏವಂ ನಿಷ್ಪನ್ನಜ್ಞಾನಃ ಸನ್ ಯೋಗೀ ಧ್ಯಾನಂ ಸಮಾಚರೇತ್ ।**
**ಯಮನಿಯಮಾಸನಪ್ರಾಣಾಯಾಮಾಹಾರೈಶ್ಚ ಪಂಡಿತಃ ॥ ೧ ॥**

**ಧ್ಯಾನೇನ ಧಾರಣೇನಾಪಿ ಯುಕ್ತಶ್ಚಾಪಿ ಸಮಾಚರೇತ್ ।**
**ಯೋಗಾಂಗೈರಷ್ಟಭಿರ್ವಿದ್ವಾನ್ ಯೋಗೀ ಸಿದ್ಧಿಮವಾಪ್ನುಯಾತ್ ॥ ೨ ॥**

ಶಾಂಡಿಲ್ಯರು ನುಡಿದರು :

ಹೀಗೆ ಜ್ಞಾನವನ್ನು ಸಂಪಾದಿಸಿದ ಯೋಗಿಯು ಪರಮಾತ್ಮನ ಧ್ಯಾನವನ್ನು ಮಾಡಬೇಕು. ಧ್ಯಾನಮಾಡಬೇಕಾದರೆ ಯಮ, ನಿಯಮ, ಆಸನ, ಪ್ರಾಣಾಯಾಮ, ಆಹಾರ, ಧ್ಯಾನ, ಧಾರಣ—ಇವುಗಳಿಂದ ಯುಕ್ತವಾಗಿರಬೇಕು. ಈ ಎಂಟು ಯೋಗಾಂಗಗಳಿಂದ ಧ್ಯಾನ ಮಾಡಿದರೆ ಸಿದ್ಧಿಸುವುದು. (ಪ್ರತ್ಯಾಹಾರವೆಂಬುದು ಇದರಲ್ಲಿ ಅಂತರ್ಭಾವ ಹೊಂದಿದೆ.)

**ದುರ್ಜಯಾನಾಂ ಮಹಾಯತ್ನೈಃ ಇಂದ್ರಿಯಾಣಾಂ ಸ್ವಭಾವತಃ ।**
**ಬಲಾನ್ನಿವರ್ತನಂ ಯಚ್ಚ ತಂ ಯಮಂ ತದ್ವಿದೋ ವಿದುಃ ॥ ೩ ॥**

ಸ್ವಭಾವದಿಂದಲೇ ಮಹಾಯತ್ನ ಮಾಡಿದರೂ ಇಂದ್ರಿಯಗಳು ಜಯಿಸಲು ಅಶಕ್ಯವು. ಬಲಾತ್ಕಾರವಾಗಿ ಅವುಗಳನ್ನು ಸ್ವಾಧೀನದಲ್ಲಿ ಇಟ್ಟುಕೊಳ್ಳುವುದನ್ನು "ಯಮ" ಎಂಬುದಾಗಿ ಜ್ಞಾನಿಗಳ ಅಭಿಪ್ರಾಯವಿರುತ್ತದೆ.

**ಕ್ಷಮಾ ಸತ್ಯಂ ಚ ಶೌಚಂ ಚ ತಥೈವೇಂದ್ರಿಯನಿಗ್ರಹಃ ।**
**ಮನಸೋ ನಿಗ್ರಹಶ್ಚೈವ ಯಮ ಇತ್ಯಪರೇ ಜಗುಃ ॥ ೪ ॥**

ಕ್ಷಮಾ (ಸಹನೆ), ಸತ್ಯವನ್ನೇ ನುಡಿಯುವುದು, ಅಂತಃಕರಣ ನೈರ್ಮಲ್ಯ, ಬಾಹ್ಯನೈರ್ಮಲ್ಯ, ಇಂದ್ರಿಯಗಳನ್ನು ಜಯಿಸುವುದು, ಮನಸ್ಸನ್ನು ಸ್ವಾಧೀನದಲ್ಲಿ ಇಟ್ಟುಕೊಳ್ಳುವುದು—ಹೀಗಿರುವುದಕ್ಕೆ "ಯಮ" ಎಂದು ಕೆಲವರ ಅಭಿಪ್ರಾಯ.

**ತತ್ಸಾಧನವ್ರತಾದೀನಿ ನಿಯಮಂ ತಂ ಪ್ರಚಕ್ಷತೇ ।**
**ಪದ್ಮಸ್ವಸ್ತಿಕಪೂರ್ವಾಣಿ ಹ್ಯಾಸನಾನಿ ವಿದೋ ವಿದುಃ ॥ ೫ ॥**

ಇದಕ್ಕೆ ಬೇಕಾದ ಸಾಧನಗಳಾದ ವ್ರತಗಳನ್ನು ಆಚರಿಸುವುದು (ಏಕಾದಶೀ, ವಿಷ್ಣುಪಂಚಕ, ಚಾಂದ್ರಾಯಣ ಇತ್ಯಾದಿ) "ನಿಯಮ". ಪದ್ಮ, ಸ್ವಸ್ತಿಕ

ಮುಂತಾದುವು ಆಸನಗಳು (ಧ್ಯಾನಕ್ಕಾಗಿ ಕುಳಿತುಕೊಳ್ಳುವ ಬಗೆ—ವಿವರಗಳು ಗೀತೆಯ ಆರನೆಯ ಅಧ್ಯಾಯದಲ್ಲಿ ನಿರೂಪಿಸಲ್ಪಟ್ಟಿವೆ.)

**ಪ್ರಾಣಾಯಾಮಸ್ತ್ರಿಧಾ ಪ್ರೋಕ್ತಃ ಪೂರಕೋ ರೇಚಕಸ್ತಥಾ ।**
**ಕುಂಭಕೋ ರೇಚಕಸ್ತತ್ರ ನಾಸಾರಂಧ್ರಾಚ್ಚ ದಕ್ಷಿಣಾತ್ ॥ ೬ ॥**

**ನಿರುಧ್ಯ ವಾಮರಂಧ್ರಂ ವಾ ನಾಸಿಕಾಯಾ ವಿಸರ್ಜನಮ್ ।**
**ನಿರುಧ್ಯ ದಕ್ಷಿಣಂ ರಂಧ್ರಂ ವಾಮರಂಧ್ರಾತ್ ಪ್ರಪೂರಣಮ್ ॥ ೭ ॥**

**ತಥೈವ ವಾಯೋರಂಗುಷ್ಠಾತ್ ಪೂರಣಂ ತು ತದುಚ್ಯತೇ ।**
**ರೇಚಕಾತ್ಪೂರಕಾತ್ಪಶ್ಚಾತ್ ದ್ವೇ ಪುಟೇ ನಾಸಯೋಸ್ತಥಾ ॥ ೮ ॥**

**ಸಂನಿರುಧ್ಯ ಹೃದಿ ಸ್ಥಾಪ್ಯ ವಾಯುಂ ತಿಷ್ಠೇತ್ಸಕುಂಭಕಃ ।**
**ಅಗರ್ಭಶ್ಚ ಸಗರ್ಭಶ್ಚ ಪ್ರಾಣಾಯಾಮೋ ದ್ವಿಧಾ ಮತಃ ॥ ೯ ॥**

ಪ್ರಾಣಾಯಾಮವು ಮೂರು ಬಗೆ—ಪೂರಕ, ರೇಚಕ, ಕುಂಭಕ. ಶ್ವಾಸವನ್ನು ಬಲಮೂಗಿನಿಂದ ನಿರೋಧಿಸಿ, ಎಡಮೂಗಿನಿಂದ ವಿಸರ್ಜನೆಮಾಡುವುದು ರೇಚಕ; ಎಡಮೂಗಿನಿಂದ ನಿರೋಧಿಸಿ ಬಲಮೂಗಿನಿಂದ ವಿಸರ್ಜನೆ ಮಾಡುವುದು ಪೂರಕ; ರೇಚಕ-ಪೂರಕಗಳೆರಡರಿಂದಲೂ ಶ್ವಾಸವನ್ನು ನಿರೋಧಿಸಿ ಆ ವಾಯುವನ್ನು ಹೃದಯದಲ್ಲಿಟ್ಟುಕೊಳ್ಳುವುದಕ್ಕೆ ಕುಂಭಕವೆಂದು ಹೆಸರು. ಅಗರ್ಭ, ಸಗರ್ಭವೆಂದು ಪ್ರಾಣಾಯಾಮದಲ್ಲಿ ಎರಡು ವಿಧ.

**ಅಗರ್ಭೋ ಧ್ಯಾನಹೀನಸ್ತು ಸಗರ್ಭೋ ಧ್ಯಾನಸಂಯುತಃ ।**
**ಅಗರ್ಭಾತ್ಕೋಟಿಗುಣಿತಃ ಪ್ರಾಣಾಯಾಮಃ ಸಗರ್ಭಕಃ ॥ ೧೦ ॥**

ಕುಂಭಕಕಾಲದಲ್ಲಿ ಪರಮಾತ್ಮನಲ್ಲಿ ಧ್ಯಾನಾಸಕ್ತನಾಗಿಲ್ಲದಿದ್ದರೆ ಅದು "ಅಗರ್ಭ"ವೆಂತಲೂ, ಧ್ಯಾನನಿರತನಾಗಿದ್ದರೆ "ಸಗರ್ಭ"ವೆಂತಲೂ ಹೆಸರು. ಸಗರ್ಭವು ಅಗರ್ಭಕ್ಕಿಂತಲೂ ಕೋಟಿಗುಣಗಳಿಂದ ಶ್ರೇಷ್ಠವು.

**ಸೋಪಾಂಶುರನಪಾಂಶುಶ್ಚ ಪ್ರಾಣಾಯಾಮ ಇತಿ ದ್ವಿಧಾ ।**
**ನಿರುಧ್ಯ ಕುಂಭಕಾದ್ವಾಯುಂ ಯಾವಚ್ಛಕ್ತಿ ಹರಿಂ ಹೃದಿ ॥ ೧೧ ॥**
**ಧ್ಯಾಯೇತ್ತಂ ಮನಸಾ ವಿಷ್ಣುಂ ನ್ಯಸ್ತನಾಸಾಗ್ರದೃಷ್ಟಿಕಃ ।**

ಸೋಪಾಂಶು, ಅನಪಾಂಶು ಎಂಬುದಾಗಿ ಪ್ರಾಣಾಯಾಮದಲ್ಲಿ ಮತ್ತೂ ಎರಡು ವಿಧ. ಕುಂಭಕ ಕ್ರಮದಿಂದ ಶ್ವಾಸವನ್ನು ತನ್ನ ಶಕ್ತಿಗೆ ಅನುಗುಣವಾಗಿ ನಿರೋಧಿಸಿ ಆ ಕಾಲದಲ್ಲಿ ಶ್ರೀವಿಷ್ಣುವನ್ನು ಮನಸ್ಸಿನಿಂದ ಧ್ಯಾನಿಸಬೇಕು, ದೃಷ್ಟಿಯನ್ನು, ಮೂಗಿನ ತುದಿಯಲ್ಲಿ ಇಟ್ಟುಕೊಂಡಿರಬೇಕು.

**ಇಂದ್ರಿಯಾಣಿ ಪ್ರವರ್ತಂತೇ ವಿಷಯೇಷು ಸ್ವಭಾವತಃ ॥ ೧೨ ॥**
**ಪ್ರತ್ಯಾಹೃತ್ಯ ಪುನಸ್ತಾನಿ ಸ್ಥಾಪಯೇದ್ಧ್ಯೇಯವಸ್ತುನಿ ।**
**ವಿಷಯಾದ್ಧಾರ್ಯಮಾಣೇತಚ್ಚ ಪ್ರತ್ಯಾಹಾರಃ ಸ ಉಚ್ಯತೇ ॥ ೧೩ ॥**

ಇಂದ್ರಿಯಗಳು ತಮ್ಮ ಸ್ವಭಾವದಿಂದಲೇ ಧ್ಯಾನಕಾಲದಲ್ಲಿಯೂ ಸಹ ವಿಷಯಗಳಲ್ಲಿ ಹೋಗುತ್ತವೆ. ಆಗ ಪ್ರಯತ್ನಪೂರ್ವಕವಾಗಿ ಇಂದ್ರಿಯಗಳನ್ನು ವಿಷಯಗಳಿಂದ ಎಳೆದು, ಧ್ಯಾನಮಾಡುವ ಶ್ರೀವಿಷ್ಣುವಿನಲ್ಲಿ ಮನಸ್ಸನ್ನು ಇಡಬೇಕು. ಇದಕ್ಕೆ "ಪ್ರತ್ಯಾಹಾರ"ವೆಂದು ಹೆಸರು.

**ವಿಷ್ಣೋರನಂತರೂಪೇಷು ಯದಿಷ್ಟಂ ರೂಪಮಾತ್ಮನಃ ।**
**ತಚ್ಚಿಂತಾ ಧ್ಯಾನಮಿತ್ಯಾಹುರ್ಯೇನ ವಿಷ್ಣುಃ ಪ್ರಸೀದತಿ ॥ ೧೪ ॥**

ಶ್ರೀವಿಷ್ಣುವಿನ ಅನಂತ ರೂಪಗಳಲ್ಲಿ (ರಾಮ, ಕೃಷ್ಣ, ರಂಗನಾಥ ಇತ್ಯಾದಿ) ತನಗೆ ಇಷ್ಟವಾದ ರೂಪವನ್ನು ಚಿಂತಿಸುವುದೇ "ಧ್ಯಾನ". ಇದರಿಂದ ಶ್ರೀವಿಷ್ಣುವು ಸಂತುಷ್ಟನಾಗುತ್ತಾನೆ. (ಶ್ರೀಹರಿಯ ಅನಂತಾನಂತ ರೂಪಗಳಲ್ಲಿ ಪರಸ್ಪರವಾಗಿಯಾಗಲೀ, ಮೂಲರೂಪದಿಂದಾಗಲೀ ಯಾವ ವಿಧವಾದ ಭೇದವೂ ಇಲ್ಲ.)

**ಪುನಃ ಸಂಚಲಿತೇ ರೂಪೇ ಮನಸಾ ಸ್ಥಾಪಿತೇ ಹೃದಿ ।**
**ಯಥಾವಚ್ಚಿಂತನಂ ರೂಪೇ ಧಾರಣೇತ್ಯಭಿಧೀಯತೇ ॥ ೧೫ ॥**

ಚಿಂತಿತ ರೂಪವು ಮನಸ್ಸಿನಿಂದ ಚಲಿಸಲು ಪ್ರಯತ್ನದಿಂದ ಅದೇ ರೂಪವನ್ನು, ಪುನಃ ಮನಸ್ಸಿನಲ್ಲಿ ನಿಲ್ಲಿಸಿ ಧ್ಯಾನಮಾಡುವುದಕ್ಕೆ "ಧಾರಣ" ಎಂದು ಹೆಸರು.

**ಅನಂತಾನಂತರೂಪೇಷು ವಿಷ್ಣೋರಮಿತತೇಜಸಃ ।**
**ಯತ್ಪ್ರೇಷ್ಠಂ ರೂಪಮತ್ಯಂತಂ ಪ್ರತಿಮಾಂ ತಸ್ಯ ಕಾರಯೇತ್ ॥ ೧೬ ॥**

ಅಮಿತಕಾಂತಿಯುಕ್ತನಾದ ಶ್ರೀವಿಷ್ಣುವಿನ ಅನಂತಾನಂತ ರೂಪಗಳಲ್ಲಿ ತನಗೆ ಅತ್ಯಂತ ಇಷ್ಟವಾದ ರೂಪದ ಪ್ರತಿಮೆಯನ್ನು ಮಾಡಿಸಬೇಕು.

**ಪುಷ್ಟಾಂ ಸುಲಕ್ಷಣೈ ರಮ್ಯಾಂ ಮನೋ ಯತ್ರ ಪ್ರಸೀದತಿ ।**
**ಪ್ರತಿಷ್ಠಿತಾಂ ಸ್ವರ್ಚಿತಾಂ ತು ಪುರಃ ಸ್ಥಾಪ್ಯಾವಲೋಕಯೇತ್ ॥ ೧೭ ॥**

ಪ್ರತಿಮೆಯು ಪುಷ್ಟವಾಗಿಯೂ ಎಲ್ಲ ಸುಲಕ್ಷಣಗಳಿಂದಲೂ ಇರಬೇಕು. ತನ್ನ ಮನಸ್ಸು ಆ ಪ್ರತಿಮೆಯಲ್ಲಿಯೇ ತಲ್ಲೀನವಾಗುವಂತೆ ಸುಂದರವಾಗಿರಬೇಕು. ಪ್ರತಿಮೆಯನ್ನು ವೇದೋಕ್ತಮಂತ್ರಗಳಿಂದ ಪ್ರತಿಷ್ಠೆಮಾಡಿ ಅದರಲ್ಲಿ ಪರಮಾತ್ಮನ

ಸಾನ್ನಿಧ್ಯವನ್ನು ತರಿಸಬೇಕು. ನಂತರ ಪೂಜಿಸಿ, ತನ್ನ ಮುಂದೆ ಇಟ್ಟುಕೊಂಡು ಚೆನ್ನಾಗಿ ನೋಡಬೇಕು.

[**ವಿಶೇಷಾಂಶ :** ಪ್ರತಿಮೆಗಳ ಲಕ್ಷಣ, ತಯಾರಿಸುವ ಕ್ರಮ ಮುಂತಾದ ವಿವರಗಳು ಶ್ರೀಮದಾಚಾರ್ಯರಿಂದ ರಚಿತವಾದ "ತಂತ್ರಸಾರ"ವೆಂಬ ಗ್ರಂಥದಲ್ಲಿ ದೊರೆಯುತ್ತವೆ.

ಪ್ರತಿಮೆಗಳೇ ಪರಮಾತ್ಮನೆಂದು ಉಪಾಸನೆ ಮಾಡಬಾರದು. ಪ್ರತಿಮೆಗಳಲ್ಲಿ ಆಯಾ ರೂಪಗಳಿಂದ ಶ್ರೀವಿಷ್ಣುವು ಅಪ್ರಾಕೃತ ಜ್ಞಾನಾನಂದಾದಿಗುಣಗಳಿಂದ ಪರಿಪೂರ್ಣನಾಗಿ ಸನ್ನಿಹಿತನಾಗಿರುವನೆಂದು ಧ್ಯಾನಿಸಬೇಕು. ಇದರ ವಿವರಗಳು ಬ್ರಹ್ಮಸೂತ್ರಭಾಷ್ಯದ "ಪ್ರತೀಕಾಧಿಕರಣ"ದಲ್ಲಿ ಹೇಳಲ್ಪಟ್ಟಿವೆ.]

**ತಾಂ ಮೂರ್ತಿಂ ಹೃದಿ ಸಂಸ್ಥಾಪ್ಯ ಧ್ಯಾಯೇದ್ವಿದ್ವಾನತಂದ್ರಿತಃ ।**
**ಪುನಶ್ಚ ಚಲಿತೇ ಚಿತ್ತೇ ಪ್ರತಿಮಾಮವಲೋಕಯೇತ್ ॥ ೧೮ ॥**

ಆ ಮೂರ್ತಿಯ ರೂಪವನ್ನು ಹೃದಯದಲ್ಲಿಟ್ಟುಕೊಂಡು ಆಲಸ್ಯವಿಲ್ಲದೇ ಧ್ಯಾನಮಾಡಬೇಕು. ಆ ಮೂರ್ತಿಯ ರೂಪವು ಹೃದಯವನ್ನು ಬಿಟ್ಟು ಹೋದರೆ ತನ್ನ ಮುಂದಿರುವ ಪ್ರತಿಮೆಯನ್ನು ನೋಡಬೇಕು.

**ದತ್ತನಾಸಾಗ್ರದೃಷ್ಟಿಶ್ಚ ಪುನರ್ಧ್ಯಾಯೇದ್ಧರಿಂ ಹೃದಿ ।**
**ಯಥೈವಾವಿಹ್ವಲಾಂಗಃ ಸ್ಯಾತ್ತಥಾ ಧ್ಯಾಯೇತ್ಸಮಾಹಿತಃ ॥ ೧೯ ॥**

ಮೂಗಿನ ಕೊನೆಯಲ್ಲಿ ದೃಷ್ಟಿಯನ್ನಿಟ್ಟು ಪುನಃ ಆ ಮೂರ್ತಿಯ ರೂಪವನ್ನು ಹೃದಯದಲ್ಲಿ ನಿಲ್ಲಿಸಿಕೊಂಡು ಧ್ಯಾನಿಸಬೇಕು ಆ ಮೂರ್ತಿಯ ರೂಪವು ತನ್ನ ಹೃದಯಬಿಟ್ಟು ಚಲಿಸದಂತೆ ಏಕಾಗ್ರಚಿತ್ತನಾಗಿ ಧ್ಯಾನಿಸಬೇಕು.

**ಅಶಕ್ತಶ್ಚೇತ್ಸಮಸ್ತಾಂಗಂ ಧ್ಯಾತುಮಾದೌ ಯದಾ ತದಾ ।**
**ಧ್ಯಾಯೇದಂಗುಷ್ಠಮೇವಾದೌ ಪಾದೌ ಗುಲ್ಫೌ ಚ ಜಾನುನೀ ॥ ೨೦ ॥**

ಆ ಮೂರ್ತಿಯ ಸರ್ವಾಂಗಗಳನ್ನೂ, ಅಶಕ್ತನಾದರೆ ಮೊದಲು ಮೂರ್ತಿಯ ಕಾಲಿನ ಹೆಬ್ಬೆರಳನ್ನೂ, ನಂತರ ಪಾದವನ್ನೂ, ಅವುಗಳು ಚಲಿಸದೇ ನಿಂತನಂತರ, ಗುಲ್ಫಗಳನ್ನೂ, ನಂತರ ಮೊಣಕಾಲುಗಳನ್ನು ಧ್ಯಾನಿಸಬೇಕು.

**ಕ್ರಮಾದೂರೂ ಕಟಿಂ ನಾಭಿಂ ಸ್ತನೌ ಹೃದ್ಬಾಹುಯುಗ್ಮಕಮ್ ।**
**ಕಂಠಂ ಚ ವದನಂ ಚಕ್ಷುರ್ನಾಸೇ ಶ್ರೋತ್ರೇ ಲಲಾಟಕಮ್ ॥ ೨೧ ॥**

ನಂತರ ಕ್ರಮವಾಗಿ ತೊಡೆಗಳು, ಸೊಂಟ, ನಾಭಿ, ಸ್ತನದ್ವಯ, ಎದೆ, ಬಾಹುದ್ವಯ, ಕುತ್ತಿಗೆ, ಮುಖ, ಕಣ್ಣುಗಳು, ಮೂಗು, ಕಿವಿಗಳು, ಹಣೆ— ಈ ಅವಯವಗಳನ್ನು, ಒಂದರ ನಂತರ ಒಂದರಂತೆ ಧ್ಯಾನಮಾಡಬೇಕು.

**ಶಿರೋ ಧ್ಯಾಯೇತ್ಕ್ರಮಾದೇವಂ ಧ್ಯಾಯೇದ್ವಿಷ್ಣುಂ ಅತಂದ್ರಿತಃ ।**
**ಪೂರ್ವಂ ಧ್ಯಾತಂ ಯದೇವಾಂಗಂ ದೃಢಂ ಯಾವದ್ಭವೇನ್ಮುನಿಃ ॥ ೨೨ ॥**

**ತಾವದೇವ ಚ ತತ್ ಧ್ಯಾತ್ವಾ ಪುನರಂಗಾಂತರಂ ವ್ರಜೇತ್ ।**
**ಯಾವತ್ಸರ್ವಾಂಗಸಂಪತ್ತಿಃ ತಾವದ್ಧ್ಯಾಯೇದ್ವಿಚಕ್ಷಣಃ ॥ ೨೩ ॥**

**ಏವಂ ಸರ್ವಾಂಗಸಂಪೂರ್ಣೋ ಭಗವಾನ್ ಹರಿರೀಶ್ವರಃ ।**
**ಯದಾ ಚಲತಿ ವೈ ಧ್ಯಾನಾತ್ ಪ್ರತಿಮಾಮವಲೋಕಯೇತ್ ॥ ೨೪ ॥**

ನಂತರ ಶಿರಸ್ಸು ಹೀಗೆ ಕ್ರಮವಾಗಿ ಆಲಸ್ಯರಹಿತನಾಗಿ ಶ್ರೀವಿಷ್ಣುವನ್ನು ಧ್ಯಾನಿಸಬೇಕು. ಮೊದಲು ಧ್ಯಾನಿಸಿದ ಅವಯವವು ಮನಸ್ಸಿನಲ್ಲಿ ದೃಢವಾಗಿ ಚಲಿಸದೇ ನಿಂತನಂತರ ಅದನ್ನು ಚೆನ್ನಾಗಿ ಧ್ಯಾನಿಸಿ ಮುಂದಿನ ಅಂಗವನ್ನು ಧ್ಯಾನಿಸಬೇಕು. ಹೀಗೆ ಒಂದೊಂದರಂತೆ ಎಲ್ಲ ಅಂಗಗಳನ್ನೂ ಧ್ಯಾನಿಸಿ ಸರ್ವಾಂಗ ಸಂಪೂರ್ಣನಾದ ಶ್ರೀಹರಿಯ ಮೂರ್ತಿಯನ್ನು ಮನಸ್ಸಿನಲ್ಲಿ ಇಟ್ಟುಕೊಳ್ಳಬೇಕು. ಅದು ಚಲಿಸಿದರೆ ಮುಂದೆ ಇಟ್ಟುಕೊಂಡಿರುವ ಪ್ರತಿಮೆಯನ್ನು ನೋಡಬೇಕು.

**ಪುನರ್ನಾಸಾಗ್ರದೃಷ್ಟಿಸ್ತು ಧ್ಯಾಯೇದ್ದೇವಮಧೋಕ್ಷಜಮ್ ।**
**ಸೈಷಾ ತು ಧಾರಣಾ ಪ್ರೋಕ್ತಾ ಸಮೀಹಿತಫಲಪ್ರದಾ ॥ ೨೫ ॥**

ಪುನಃ ನಾಸಾಗ್ರಹದಲ್ಲಿ ದೃಷ್ಟಿಯನ್ನಿಟ್ಟು ಶ್ರೀಹರಿಯ ರೂಪವನ್ನು ಧ್ಯಾನಿಸಬೇಕು. ಇಂತಹ ಧ್ಯಾನಕ್ಕೆ "ಧಾರಣಾ" ಎಂದು ಹೆಸರು. ಸಕಲ ಅಭೀಷ್ಟ-ಪ್ರದವಾದುದು.

**ಕೃತ್ವೈವಂ ಧಾರಣಾ ಯತ್ನಾತ್ ಪುನರ್ಜನ್ಮಾಂತರೇಪಿ ಚ ।**
**ಸೈವಾಗಚ್ಛತಿ ಸಂಸ್ಕಾರಾದ್ವಾಸನಾದ್ವಾ ಪುನಃ ಪುನಃ ॥ ೨೬ ॥**

ಹೀಗೆ ಪ್ರಯತ್ನಪೂರ್ವಕವಾಗಿ "ಧಾರಣ" ಮಾಡಿದ ಭಗವಂತನ ರೂಪವು ಮುಂದಿನ ಜನ್ಮಗಳಲ್ಲಿಯೂ ಸಹ ಸಂಸ್ಕಾರ-ವಾಸನಾಬಲದಿಂದ ಮನಸ್ಸಿನಲ್ಲಿ ಧ್ಯಾನಕ್ಕೆ ಗೋಚರವಾಗುತ್ತದೆ.

**ಅವಿಚ್ಛೇದೇನ ದುಷ್ಟಾನಿ ಜನ್ಮಾನ್ಯಸ್ಯ ನಿರುಧ್ಯ ಚ ।**
**ಯಃ ಪುಮಾನ್ ಧಾರಣಾಸಕ್ತಃ ಸ ತು ಜನ್ಮಾಂತರೇಷ್ವಪಿ ॥ ೨೭ ॥**

**ಸುಧರ್ಮೋ ವಾ ಸದಾಚಾರೇ ಸುಶ್ರುತಃ ಸುತಪಃ ಸ್ಮಿತಃ ।**
**ಗುರುಂ ಶಾಂತಂ ಸಮಾಸಾದ್ಯ ಧಾರಣಂ ಯಾತ್ಯಚಂಚಲಾಮ್ ॥ ೨೮ ॥**

ದುಷ್ಟಜನ್ಮಗಳಲ್ಲಿ ಬಂದರೂ ಸಹ ಅದನ್ನು ಲೆಕ್ಕಿಸದೆ ಭಗವನ್ಮೂರ್ತಿಯನ್ನು, ವಿಚ್ಛಿತ್ತಿಯಿಲ್ಲದೆ ಮನಸ್ಸಿನಲ್ಲಿ ಧಾರಣಮಾಡುವ ಸಾಮರ್ಥ್ಯ ಪಡೆದರೆ, ಅವನು ಜನ್ಮಾಂತರಗಳಲ್ಲಿ ಧರ್ಮಿಷ್ಠನಾಗಿಯೂ, ಸತ್ಕರ್ಮಾನುಷ್ಠಾನತತ್ಪರನಾಗಿಯೂ, ಭಗವಂತನ ಕಥಾಶ್ರವಣದಲ್ಲಿ ಆಸಕ್ತಿಯುಳ್ಳವನೂ, ತಪಸ್ವಿಯೂ ಆಗಿ ಶಾಂತನಾದ ಗುರುವಿನ ಬಳಿಗೆ ಹೋಗಿ ಉಪದೇಶಹೊಂದಿ ಎಂದಿಗೂ ಚಲಿಸದೇ ಇರುವ ಈ ಧಾರಣಶಕ್ತಿಯಿಂದ ಸಿದ್ಧನಾಗುವನು.

**ಪುರುಷೋ ಧಾರಣಾಹೀನೋ ದುಷ್ಟಕಾಮಾರ್ದಿತಃ ಸದಾ ।**
**ದುಷ್ಟಂ ಜನ್ಮಾಂತರಂ ಪ್ರಾಪ್ಯ ಹಾನಿಂ ಯಾತಿ ಪುಮಾನಯಮ್ ॥ ೨೯ ॥**

ಇಂತಹ ಧಾರಣಶಕ್ತಿ ಇಲ್ಲದೇ ಇರುವ ಪುರುಷನು ಕೆಟ್ಟಕರ್ಮಗಳ ಕಡೆಗೆ ಮನಸ್ಸನ್ನು ಇಟ್ಟು ಜನ್ಮಾಂತರಗಳಲ್ಲಿಯೂ ಸಹ ದುಷ್ಟ ಯೋನಿಗಳಲ್ಲಿ ಹುಟ್ಟಿ ಕೇಡನ್ನು ಹೊಂದುತ್ತಾನೆ.

**ಶ್ರವಣಾದಿಮಹಾಭ್ಯಾಸಾಜ್ಜಾತಜ್ಞಾನಾದಿಸಂಪದಾ ।**
**ಧಾರಣಾ ತು ತತಃ ಕಾರ್ಯಾ ಪುಂಸಾ ವೈ ಹಿತಮಿಚ್ಛತಾ ॥ ೩೦ ॥**

ಹಿತವನ್ನು ಬಯಸುವವನು ಭಗವತ್ಕಥಾಗಳಲ್ಲಿ ಶ್ರವಣ-ಮನನಾಸಕ್ತನಾಗಿ, ಜ್ಞಾನವನ್ನು ಪಡೆದು "ಧಾರಣಾ" ಎಂಬ ಸಾಧನೆಗೆ ಪ್ರಯತ್ನಮಾಡಬೇಕು.

**ಧಾರಣಾಭ್ಯಸ್ತಮನಸಿ ಹರಿರ್ವೈ ವಾಸನಾತ್ಮಕಃ ।**
**ನಿಶ್ಚಲಂ ಸ್ಫುರತಿ ಹ್ಯೇಷ ಧ್ಯಾತುರ್ವೈ ಹೃದಯೇ ಪುನಃ ॥ ೩೧ ॥**

ಧಾರಣವೆಂಬ ಸಾಧನೆಯಲ್ಲಿ ಉದ್ಯುಕ್ತನಾಗಿರುವ ಮನಸ್ಸಿನಲ್ಲಿ ಶ್ರೀಹರಿಯು ತನ್ನ ವಾಸನಾತ್ಮಕವಾದ ರೂಪವನ್ನಿಟ್ಟು, ನಿಶ್ಚಲವಾಗಿ ಧ್ಯಾನಿಸಲು ಸ್ಫೂರ್ತಿಯನ್ನು ನೀಡುತ್ತಾನೆ.

**ತತ್ರಾವಿಷ್ಟಮನಾ ಭೂತ್ವಾ ಧ್ಯಾಯೇದ್ದೇವಮಧೋಕ್ಷಜಮ್ ।**
**ಏವಂ ಧ್ಯಾತುರ್ಮಹಾವಿಷ್ಣುಃ ಸ್ವರೂಪಂ ಬಿಂಬಸಂಜ್ಞಕಮ್ ॥ ೩೨ ॥**
**ಕೃಪಯಾ ದರ್ಶಯತ್ಯದ್ಧಾ ಯಥಾಯೋಗ್ಯಂ ಮನೋರಮಮ್ ।**
**ನಿರ್ದೋಷಂ ಸ್ವಪ್ರಕಾಶಂ ಚ ಸಚ್ಚಿದಾನಂದವಿಗ್ರಹಮ್ ॥ ೩೩ ॥**

ಹೀಗೆ ಶ್ರೀಹರಿಯನ್ನು ಬಿಡದೇ ಧ್ಯಾನಮಾಡುತ್ತಿದ್ದರೆ ಪರಮಾತ್ಮನು ಆ ಧ್ಯಾನಾಸಕ್ತನಾಗಿರುವವನಿಗೆ ಯಾವುದು ಬಿಂಬರೂಪವೋ ಆ ರೂಪದಿಂದ

ದರ್ಶನವನ್ನು ಯೋಗ್ಯತೆಗೆ ತಕ್ಕಂತೆ ನೀಡುತ್ತಾನೆ. ಆ ರೂಪವು ಮನಸ್ಸಿಗೆ ಆಹ್ಲಾದಕರವಾಗಿರುವುದು, ದೋಷರಹಿತ, ಅಪ್ರಾಕೃತ ಸ್ವರೂಪ ಪ್ರಕಾಶದಿಂದ ಯುಕ್ತವಾದುದು, ಜ್ಞಾನಾನಂದಾತ್ಮಕವಾದುದು.

**ಸೂರ್ಯಕೋಟಿಪ್ರತೀಕಾಶಂ ಸುಸ್ಮಿತಾನನಸುಂದರಮ್ ।**
**ಪ್ರತಪನ್ ಸಂತಪಂಸ್ತುಷ್ಯನ್ ಪತದಾನಂದಬಾಷ್ಪಕಃ ॥ ೩೪ ॥**

ಕೋಟಿಸೂರ್ಯಪ್ರಕಾಶದಿಂದ ಹೊಳೆಯುವ, ಮುಗುಳುನಗೆಯಿಂದ ಸುಂದರ ವಾದ ಆ ಪರಮಾತ್ಮನ ರೂಪವನ್ನು ನೋಡಿ, ಸಂತೋಷಭರಿತನಾಗಿ ಆನಂದಬಾಷ್ಪ ವನ್ನು ಸುರಿಸುತ್ತಾನೆ.

**ಸದಾ ಪುಷ್ಟವಪುಃ ಶೀಘ್ರಂ ಹೃಷ್ಟರೋಮಾಂಚಕೋ ಮುನಿಃ ।**
**ತಂ ನಿವಿಷ್ಟಮನಾ ಭೂತ್ವಾ ಪೂರ್ಣಸಂತೋಷಸಂಭೃತಃ ॥ ೩೫ ॥**

ದಷ್ಟಪುಷ್ಟವಾದ ಶರೀರವನ್ನು ಹೊಂದಿ, ಆನಂದದಿಂದ ರೋಮಾಂಚನ ಪಡೆದು, ಆ ರೂಪದಲ್ಲಿಯೇ ಸದಾ ಮನಸ್ಸನ್ನಿಟ್ಟು, ಸಂತೋಷಭರಿತನಾಗುತ್ತಾನೆ.

**ನ ವೇತ್ತಿ ಬಾಹ್ಯಂ ಕಿಮಪಿ ಕುಠಾರೇಣಾಸಿನಾ ಹತಃ ।**
**ನ ಸ್ಪರ್ಶೇ ಸುಖಮಾಪ್ನೋತಿ ನ ಶೃಣೋತಿ ನ ಪಶ್ಯತಿ ॥ ೩೬ ॥**

ಹೊರಗಿನ ವ್ಯಾಪಾರ ಯಾವುದೂ ಅವನಿಗೆ ತಿಳಿಯುವುದಿಲ್ಲ, ಖಡ್ಗಾದಿಗಳಿಂದ ಕತ್ತರಿಸಿದರೂ ಅವನಿಗೆ ಗೊತ್ತಾಗುವುದಿಲ್ಲ, ಅವನನ್ನು ಮುಟ್ಟಿದರೆ ಯಾವ ಸುಖವೂ ಆಗುವುದಿಲ್ಲ, ಬಾಹ್ಯಪ್ರಪಂಚದಲ್ಲಿರುವುದನ್ನು ಕೇಳುವುದಿಲ್ಲ, ನೋಡುವುದಿಲ್ಲ.

**ನ ಕ್ಷುದಸ್ತಿ ಪಿಪಾಸಾ ವಾ ನ ಗ್ಲಾನಿರ್ನ ಚ ಚಿಂತನಾ ।**
**ವಿಸ್ಮೃತ್ಯ ಬಾಹ್ಯಮಖಿಲಂ ನಿರ್ವಾತಾಚಲದೀಪವತ್ ॥ ೩೭ ॥**

ಹಸಿವು, ಬಾಯಾರಿಕೆ, ದುಃಖ, ಚಿಂತೆ ಯಾವುದೂ ಇರುವುದಿಲ್ಲ. ಬಾಹ್ಯ-ಪ್ರಪಂಚವನ್ನು ಮರೆತು ಗಾಳಿಯಿಂದ ಅಲ್ಲಾಡದೇ ಇರುವ ದೀಪದಂತೆ ಅವನ ಮನಸ್ಸು ನಿಶ್ಚಲವಾಗಿ ಇರುತ್ತದೆ.

**ಯಾವತ್ ಸ್ಫುರತಿ ವೈ ವಿಷ್ಣುಸ್ತಾವದೇವಂ ಸ ತಿಷ್ಠತಿ ।**
**ಏವಂ ಸಾಕ್ಷಾತ್ಕೃತೇ ವಿಷ್ಣೌ ಸಂಚಿತಾಗಾಮಿಕರ್ಮಣಾಮ್ ॥ ೩೮ ॥**

**ಸದ್ಯ ಏವ ಭವೇನ್ನಾಶಃ ಪ್ರಾರಬ್ಧಮವಶಿಷ್ಯತೇ ।**
**ಪ್ರಾರಬ್ಧಕರ್ಮಣೋಽನ್ಯಸ್ಯ ಜ್ಞಾನಾದೇವ ಕ್ಷಯೋ ಭವೇತ್ ॥ ೩೯ ॥**

*

ಎಷ್ಟು ಕಾಲ ಪರ್ಯಂತ ಶ್ರೀವಿಷ್ಣುವು ಇವನ ಹೃದಯದಲ್ಲಿ ಬಿಂಬರೂಪದಿಂದ ದರ್ಶನ ನೀಡುವನೋ, ಅಷ್ಟು ಕಾಲ ಇವನಿಗೆ ಬಾಹ್ಯ ಪ್ರಪಂಚದ ಜ್ಞಾನವೇ ಇರುವುದಿಲ್ಲ. ಇಂತಹ ಅಪರೋಕ್ಷಜ್ಞಾನವಾಗಲು ಇವನ ಸಂಚಿತ ಮತ್ತು ಆಗಾಮಿ ಕರ್ಮಗಳ ಸಂಬಂಧನಾಶವು ಕೂಡಲೇ ಆಗುತ್ತದೆ. ಪ್ರಾರಬ್ಧಕರ್ಮ ಮಾತ್ರ ಉಳಿಯುತ್ತದೆ. ಪ್ರಾರಬ್ಧಕರ್ಮವನ್ನು ಬಿಟ್ಟು ಉಳಿದ ಸಂಚಿತ ಆಗಾಮಿಗಳು ಅಪರೋಕ್ಷಜ್ಞಾನದಿಂದ ಕ್ಷಯ ಹೊಂದುತ್ತವೆ.

(ಅಪರೋಕ್ಷ ಜ್ಞಾನಾನಂತರದಲ್ಲಿ ಕರ್ಮಗಳು ಯಾವರೀತಿ ಕ್ಷಯ ಹೊಂದುತ್ತವೆಯೆಂಬ ವಿವರಗಳು ಬ್ರಹ್ಮಸೂತ್ರಭಾಷ್ಯದಲ್ಲಿನ "ತದಧಿಗಮಾಧಿಕರಣ"ದಲ್ಲಿ ಸ್ಪಷ್ಟವಾಗಿ ನಿರೂಪಿತವಾಗಿವೆ.)

**ಪಾರಬ್ಧಂ ಕರ್ಮ ಭೋಕ್ತವ್ಯಂ ಶುಭಂ ವ್ಯಾಶುಭಮೇವ ವಾ ।**
**ತತ್ರ ಯಚ್ಛುಭಮಾರಬ್ಧಮನುಭಾವಯತಿ ಹ್ಯಯಮ್ ॥ ೪೦ ॥**

ಪ್ರಾರಬ್ಧಕರ್ಮವನ್ನು (ಪುಣ್ಯವಾಗಲೀ, ಪಾಪವಾಗಲೀ) ಅನುಭವಿಸಲೇ ಬೇಕು. ಶುಭಕರ್ಮದ ಫಲವಾದ ಸುಖವನ್ನು ಶ್ರೀಹರಿಯು ಅನುಗ್ರಹಮಾಡಿ ಅನುಭವಕ್ಕೆ ತಂದುಕೊಡುತ್ತಾನೆ.

**ಕ್ರಮಾದ್ವಿಷ್ಣುಃ ಸ್ವಯಂ ಪ್ರೀತ್ಯಾ ತಥೈವಾಶುಭಮುಚ್ಯತೇ ।**
**ದತ್ವಾ ತಾವಂತಿ ಜನ್ಮಾನಿ ಯುಗಪತ್ ಭಗವಾನ್ ವಿಭುಃ ॥ ೪೧ ॥**
**ಅನುಭಾವಯತಿ ಹ್ಯದ್ಧಾ ಪಶ್ಚಾತ್ ಮೋಕ್ಷಂ ದದಾತಿ ಚ ।**
**ಅವಸ್ಥಾನಂ ಹರಿಂ ದೃಷ್ಟ್ವಾ ಬಾಹ್ಯಜ್ಞಾನವಿವರ್ಜಿತಃ ॥ ೪೨ ॥**

ಇದೇ ರೀತಿಯಿಂದ ಶ್ರೀಹರಿಯು ಅನುಗ್ರಹಮಾಡಿ ಅಶುಭ ಫಲಗಳನ್ನೂ ಅನುಭವಿಸುವಂತೆ ಮಾಡುತ್ತಾನೆ. ಎಷ್ಟು ಜನ್ಮಗಳಲ್ಲಿ ಪ್ರಾರಬ್ಧವನ್ನು ಅನುಭವಿಸಬೇಕೋ ಅಷ್ಟು ಜನ್ಮಗಳನ್ನು ಕೊಡುತ್ತಾನೆ. ನಂತರ ಮೋಕ್ಷವನ್ನು ದಯಪಾಲಿಸುತ್ತಾನೆ. ಇಂತಹ ಅಪರೋಕ್ಷಜ್ಞಾನವನ್ನು ಪಡೆದವನು ಶ್ರೀಹರಿಯ ರೂಪವನ್ನು ನೋಡಿ ಬಾಹ್ಯಜ್ಞಾನರಹಿತನಾಗುತ್ತಾನೆ.

**ತದೇಕತಾನತಾ ಪ್ರಾಪ್ತಿಃ ಸ ಸಮಾಧಿರುದಾಹೃತಃ ।**
**ಪ್ರಾರಬ್ಧಸ್ಯ ಕ್ಷಯೇ ಭೋಗಾತ್ ವಿರಜಾಮಾಪ್ಲುತೋ ಮುನಿಃ ॥ ೪೩ ॥**
**ಲಿಂಗದೇಹಂ ವಿಸೃಜ್ಯೈವಂ ಬ್ರಹ್ಮಣಾ ಸಹ ಮುಚ್ಯತೇ ।**
**ಗುಣೈರುಪಾಸಿತೋ ವಿಷ್ಣುಃ ಯಥಾಯೋಗ್ಯಂ ಮಹಾಪ್ರಭುಃ ॥ ೪೪ ॥**

ಶ್ರೀಹರಿಯಲ್ಲಿ ಮನಸ್ಸನ್ನು ದೃಢವಾಗಿ ಇಡುವುದಕ್ಕೆ "ಸಮಾಧಿಯೋಗ"ವೆಂದು ಹೆಸರು. ಪ್ರಾರಬ್ಧಕರ್ಮವು ನಾಶವಾಗಲು ಅಪರೋಕ್ಷಜ್ಞಾನಿಯು

ವಿರಜಾನದಿಯಲ್ಲಿ ಸ್ನಾನಮಾಡಿ ತನ್ನ ಲಿಂಗದೇಹವನ್ನು ತ್ಯಜಿಸಿ ಚತುರ್ಮುಖ-ಬ್ರಹ್ಮದೇವರ ಸಂಗಡ ಮೋಕ್ಷಪಡೆಯುತ್ತಾನೆ. ಅವರವರ ಯೋಗ್ಯತಾನುಸಾರವಾಗಿ ಶ್ರೀಹರಿಯನ್ನು ಗುಣಗಳಿಂದ ಉಪಾಸನೆಮಾಡಲು ಸರ್ವಸಮರ್ಥನಾದ ಜಗದೊಡೆಯನು

**ಬಂಧಭಂಗಂ ಕರೋತ್ಯಾಶು ಪ್ರಸನ್ನೋ ಭಗವಾನ್ ಹರಿಃ ।**
**ಬ್ರಹ್ಮಣಾ ಸಹ ವೇದೋಕ್ತೈರ್ಗುಣೈರ್ಧ್ಯೇಯೋ ಮಹಾಪ್ರಭುಃ ॥ ೪೫ ॥**

ಪ್ರಸನ್ನನಾಗಿ ಸಂಸಾರಬಂಧನವನ್ನು ಕತ್ತರಿಸುತ್ತಾನೆ. ಅಂತಹ ಮಹಾಪ್ರಭುವನ್ನು ಚತುರ್ಮುಖಬ್ರಹ್ಮದೇವರ ಜೊತೆಯಲ್ಲಿ ವೇದದಲ್ಲಿ ಉಕ್ತವಾದ ಗುಣಗಳಿಂದ ಧ್ಯಾನಿಸಬೇಕು. (ಪರಮಾತ್ಮನ ಅಪ್ರಾಕೃತವಾದ ಗುಣಗಳನ್ನು ಚಿಂತಿಸುತ್ತಾ ಧ್ಯಾನಮಾಡುವುದಕ್ಕೆ "ಉಪಾಸನೆ"ಯೆಂದು ಹೆಸರು.)

**ಬ್ರಹ್ಮಾಣ್ಯಾದ್ಯಾ ಕ್ರಮಾದೂನಾ ಆಭೂಪಂ ಮಾನುಷೋತ್ತಮೈಃ ।**
**ಗುಣೈಃ ಚತುರ್ಭಿಃ ಶ್ಚೋಪಾಸ್ಯೋ ನಾನ್ಯತ್ ಕಿಂಚಿತ್ ಉಪಾಸಯೇತ್ ॥**

ಚತುರ್ಮುಖಬ್ರಹ್ಮದೇವರಿಂದ ಹಿಡಿದು ಕ್ರಮವಾಗಿ ಕೆಳಗಿರುವ ದೇವತೆಗಳು, ಚಕ್ರವರ್ತಿಗಳು, ಮನುಷ್ಯೋತ್ತಮರು ನಾಲ್ಕು ಗುಣಗಳಿಂದಲಂತೂ ಉಪಾಸನೆ ಮಾಡಲೇಬೇಕು. ಇದು ಬಿಟ್ಟು ಬೇರೆ ವಿಧದಿಂದ ಮಾಡಬಾರದು.

**ನಿರ್ದೋಷಃ ಸಚ್ಚಿದಾನಂದೋ ವ್ಯಾಪ್ತಃ ಸ್ವಾಮೀ ಮಮೇತಿ ಚ ।**
**ಅಖಿಲಾ ಅಪಿ ತೇ ಜ್ಞೇಯಾ ಗುಣಾಃ ಶಕ್ತ್ಯನುಸಾರತಃ ॥ ೪೭ ॥**

ಶ್ರೀಹರಿಯು ನಿರ್ದೋಷನು, ಜ್ಞಾನಾನಂದಸ್ವರೂಪಿಯು, ಸರ್ವತ್ರ ವ್ಯಾಪ್ತನು, ನನಗೆ ಸರ್ವಪ್ರಕಾರದಿಂದಲೂ ಪ್ರಭುವು—ಹೀಗೆ ಉಪಾಸನೆ ಮಾಡಲೇ ಬೇಕು. ಅವರವರ ಶಕ್ತ್ಯನುಸಾರವಾಗಿ ಶ್ರೀಹರಿಯ ಅಸಂಖ್ಯಾತಗುಣಗಳ ಜ್ಞಾನವನ್ನು, ಪಡೆಯಬೇಕು.

(ಗುಣೋಪಾಸನಾ ಕ್ರಮ, ಅಧಿಕಾರಿಗಳು—ಈ ವಿವರಗಳನ್ನು ಬ್ರಹ್ಮಸೂತ್ರ ಭಾಷ್ಯದ "ಆನಂದಾಧಿಕರಣ"ದಲ್ಲಿ ಕಾಣಬಹುದು).

**ನೋಪಾಸ್ಯೈಃ ಸಕಲೈಃ ವಿಷ್ಣುರ್ಮಾನುಷೈರ್ಭಾವಿತಾತ್ಮಭಿಃ ।**
**ಯಥಾಯೋಗ್ಯಂ ಕ್ರಮಾದೇತೈಃ ಗುಣೈಃ ಸರ್ವೈಃ ಸುಮಂಗಲೈಃ ॥ ೪೮ ॥**

ಎಷ್ಟೇ ಇಂದ್ರಿಯನಿಗ್ರಹಪಡೆದ ಮನುಷ್ಯೋತ್ತಮರಿಂದಲೂ ಶ್ರೀಹರಿಯ ಅತ್ಯಂತ ಮಂಗಳಕರವಾದ ಸರ್ವಗುಣಗಳನ್ನೂ ತಿಳಿದು ಉಪಾಸನೆಮಾಡಲು ಸಾಧ್ಯವಿಲ್ಲ. ಅವರವರ ಯೋಗ್ಯತಾನುಸಾರವಾಗಿ ತಿಳಿದುಕೊಂಡು ಮಾಡಬೇಕು.

(ಮನುಷ್ಯೋತ್ತಮರು ಮೇಲೆ ಹೇಳಿದ ನಾಲ್ಕು ಗುಣಗಳಿಂದಲೂ, ಇನ್ನೂ ಉತ್ತಮಾಧಿಕಾರಿಗಳಾದ ದೇವತೆಗಳು ತಮ್ಮ ಯೋಗ್ಯತಾನುಸಾರ ಹೆಚ್ಚು ಗುಣಗಳಿಂದಲೂ ಉಪಾಸನೆ ಮಾಡಬೇಕು.)

**ದೇವೈರುಪಾಸ್ಯೋ ಭಗವಾನ್ ಚತುರ್ಭಿರ್ಮಾನುಷ್ಯೈರಪಿ ।**
**ವಿಷ್ಣೋರುಪಾಸನಾದೇವಂ ನಾಶೇ ಲಿಂಗಾಕೃತೇಃ ಪರಮ್ ॥ ೪೯ ॥**

ದೇವತೆಗಳಿಂದಲೂ, ಮನುಷ್ಯೋತ್ತಮರಿಂದಲೂ ಈ ಷಡ್ಗುಣೈಶ್ವರ್ಯ ಪೂರ್ಣನಾದ ಶ್ರೀಹರಿಯು (ಮೇಲೆ ಹೇಳಿದ) ನಾಲ್ಕು ಗುಣಗಳಿಂದ ಉಪಾಸ್ಯನು. ಹೀಗೆ ಉಪಾಸನಾಫಲರೂಪನಾಗಿ ಅಪರೋಕ್ಷಜ್ಞಾನ, ನಂತರ ಲಿಂಗದೇಹನಾಶ, ಇವುಗಳ ನಂತರ

**ಸ್ವಸ್ವರೂಪಚಿದಾನಂದಂ ಗುಣಾವಿರ್ಭಾವಲಕ್ಷಣಮ್ ।**
**ಮೋಕ್ಷಮಾಪ್ನೋತಿ ವೈ ಯೋಗೀ ಜನ್ಮಮೃತ್ಯುವಿನಾಶನಮ್ ॥ ೫೦ ॥**

ತನ್ನ ಸ್ವರೂಪದಲ್ಲಿರುವ ಆನಂದವು ಆವಿರ್ಭವಿಸಿ ಅನುಭವಕ್ಕೆ ಬರುವ ಸ್ಥಿತಿಯಾದ ಮೋಕ್ಷವನ್ನು ಪಡೆಯುತ್ತಾನೆ. ಮೋಕ್ಷಕ್ಕೆ ಹೋದನಂತರ ಜನ್ಮ, ಸಾವು ಇವುಗಳ ಸಂಬಂಧವಾದ ಸಂಸಾರಕ್ಕೆ ಎಂದಿಗೂ ಬರುವುದಿಲ್ಲ. (ಈ ವಿಷಯವು ಬ್ರಹ್ಮಸೂತ್ರ-ಭಾಷ್ಯದ "ಅನಾವೃತ್ತ್ಯಧಿಕರಣ"ದಲ್ಲಿ ವಿವರಿಸಲ್ಪಟ್ಟಿದೆ. ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ—ಗೀತಾ. ಯಾವ ಪರಮಾತ್ಮನನ್ನು ಹೊಂದಿದ ಜನರು ಅಂದರೆ ಮುಕ್ತರು ಪುನಃ ಸಂಸಾರಕ್ಕೆ ಎಂದಿಗೂ ಬರುವುದಿಲ್ಲವೋ ಅದು ನನ್ನ ಉತ್ತಮವಾದ ಸ್ವರೂಪ.)

**ಅಪರೋಕ್ಷದೃಶಃ ಪ್ರಾಗ್ವೈ ಯೋಗೀ ಕರ್ಮಾಣಿ ಸಂತ್ಯಜನ್ ।**
**ನರಕಾದಿಮಹಾದುಃಖಂ ಪ್ರಾಪ್ನೋತ್ಯೇವ ನ ಸಂಶಯಃ ॥ ೫೦ ॥**

ಅಪರೋಕ್ಷಜ್ಞಾನವಾಗುವುದಕ್ಕಿಂತ ಮೊದಲು ಸಾಧಕನು ಸಂಧ್ಯಾವಂದನಾದಿ ಸತ್ಕರ್ಮಗಳನ್ನು ಪರಿತ್ಯಜಿಸಿದ್ದರೆ ನರಕಾದಿ ದುಃಖಗಳನ್ನು ಅನುಭವಿಸುತ್ತಾನೆ, ಸಂಶಯವಿಲ್ಲ.

**ನ ಪ್ರಾಪ್ನೋತಿ ಕರ್ಮಲೇಪಮಪರೋಕ್ಷದೃಶಃ ಪರಮ್ ।**
**ತಥಾಪಿ ತಾದೃಗ್ಯೋಗೀ ವಾ ಕರ್ಮ ಕುರ್ಯಾದತಂದ್ರಿತಃ ॥ ೫೨ ॥**

ಅಪರೋಕ್ಷಜ್ಞಾನದನಂತರ ಆಚರಿಸಿದ ಕರ್ಮಲೇಪವು ಸಾಧಕನಿಗೆ ಇಲ್ಲ. ಆದರೂ ಅವನು ಶಾಸ್ತ್ರೋಕ್ತವಾದ ಸತ್ಕರ್ಮಗಳನ್ನು ಮಾಡಲೇಬೇಕು.

[ವಿಶೇಷಾಂಶ: **ಪಶ್ಯನ್ನಪೀಮಮಾತ್ಮಾನಂ ಕುರ್ಯಾತ್ ಕರ್ಮಾವಿಚಾರಯನ್ |**
**ಯದಾತ್ಮನಃ ಸುನಿಯತಮಾನಂದೋತ್ಕರ್ಷಮಾಪ್ನುಯಾತ್ ||**
(ಸ್ಮೃತಿವಾಕ್ಯ–ಗೀತಾತಾತ್ಪರ್ಯದಲ್ಲಿ)

ಅಪರೋಕ್ಷಜ್ಞಾನಿಗಳೂ ಸಹ ವಿಚಾರಮಾಡದೇ ವರ್ಣಾಶ್ರಮೋಚಿತವಾದ ಶಾಸ್ತ್ರೋಕ್ತವಾದ ಕರ್ಮಗಳನ್ನು ಮಾಡಲೇಬೇಕು. ಇದರಿಂದ ಮುಕ್ತಿಯಲ್ಲಿ ಆನಂದೋತ್ಕರ್ಷವು ಲಭಿಸುತ್ತದೆ.]

**ಮರ್ಯಾದಾರ್ಥಂ ತು ಜಗತಃ ಕುರ್ಯಾದ್ವಿಷ್ಣೋರನುಜ್ಞಯಾ |**
**ತೇನಾನಂದಸ್ಯ ವೃದ್ಧಿಃ ಸ್ಯಾನ್ಮೋಕ್ಷೇ ತಸ್ಯ ಮಹಾತ್ಮನಃ || ೫೩ ||**

ಜಗತ್ತಿನಲ್ಲಿ ನೀತಿಯನ್ನು ತೋರಿಸುವುದಕ್ಕಾಗಿಯಾದರೂ ಶ್ರೀಹರಿಯ ಆಜ್ಞೆಯೆಂದು ತಿಳಿದು ಸತ್ಕರ್ಮಗಳನ್ನು ಆಚರಿಸಬೇಕು. ಅಂತಹವನಿಗೆ ಮುಕ್ತಿಯಲ್ಲಿ ಆನಂದದ ಅನುಭವವು ಹೆಚ್ಚಾಗಿ ಆಗುವುದು. (ಯದ್ಯದಾಚರತಿ ಶ್ರೇಷ್ಠಃ ತತ್ತದೇವೇತರೋ ಜನಾಃ | ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ— ಗೀತಾ. ಶ್ರೇಷ್ಠನಾದವನು ಯಾವ ಯಾವ ಕರ್ಮಗಳನ್ನು ಆಚರಿಸುವನೋ ಇತರ ಜನರೂ ಸಹ ಅದೇ ಕರ್ಮಗಳನ್ನೇ ಮಾಡುತ್ತಾರೆ. ಅವನು ಯಾವ ಗ್ರಂಥವನ್ನು ಪ್ರಮಾಣವೆಂದು ಅಂಗೀಕರಿಸುತ್ತಾನೆಯೋ ಇತರ ಜನರೂ ಸಹ ಅದೇ ಗ್ರಂಥವನ್ನು ಪ್ರಮಾಣವೆಂದು ಅನುಸರಿಸುತ್ತಾರೆ).

**ತಸ್ಯಾಪಿ ಮಹತಾಂ ದ್ರೋಹೇ ಕುತಶ್ಚಿತ್ಕಾರಣಾಂತರಾತ್ |**
**ಆನಂದಸ್ಯ ಭವೇದ್ಧ್ರಾಸೋ ನಾನ್ಯತ್ಕರ್ಮ ವಿಲಿಪ್ಯತೇ || ೫೪ ||**

ಇಂತಹ ಅಪರೋಕ್ಷ ಜ್ಞಾನಿಯು ಬೇರೊಬ್ಬ ಜ್ಞಾನಿಗೆ ಯಾವುದಾದರೂ ಕಾರಣದಿಂದ ದ್ರೋಹ ಮಾಡಿದರೆ ಯಾವ ವಿಧವಾದ ಕರ್ಮಲೇಪವೂ ಆಗದೆ ಮುಕ್ತಿಯಲ್ಲಿ ಆನಂದದ ಅನುಭವದಲ್ಲಿ ಹ್ರಾಸವಾಗುತ್ತದೆ.

**ಹ್ರಾಸೋ ನಾಮಾನಭಿವ್ಯಕ್ತಿರ್ವಿದ್ಯಮಾನಸ್ಯ ತಸ್ಯ ತು |**
**ಅಭಿವ್ಯಕ್ತಿಸ್ತು ತಸ್ಯೈವ ವೃದ್ಧಿರಿತ್ಯಭಿಗೀಯತೇ || ೫೫ ||**

ಆನಂದದ ಪೂರ್ಣ ಅನುಭವವು ಆಗದೇ ಇರುವುದೇ ಹ್ರಾಸ; ಆನಂದದ ಪೂರ್ಣ ಅಭಿವ್ಯಕ್ತಿಯಾಗುವುದೇ ವೃದ್ಧಿ.

**ವೃಕ್ಷಾದಿಜಾತಿರ್ಜೀವಾನಾಂ ಸಾ ನಿತ್ಯೈವ ಯತಸ್ತತಃ |**
**ಮುಕ್ತಿಂ ತೇನೈವ ರೂಪೇಣ ಯಾಂತಿ ತೇ ಕಾಮರೂಪಿಣಃ || ೫೬ ||**

ಸ್ವರೂಪದಿಂದ ವೃಕ್ಷವೇ ಮೊದಲಾದ ರೂಪಗಳು ನಿತ್ಯ ; ಅಂತಹ ಜೀವರು ಮುಕ್ತರಾಗುವಾಗ ಆ ಸ್ವರೂಪ ಆಕಾರದಿಂದಲೇ ಕಾಮರೂಪಿಗಳಾಗಿ ಮುಕ್ತಿಯನ್ನು ಹೊಂದುತ್ತಾರೆ.

(ಮುಕ್ತಿರ್ಹಿತ್ವಾ ಅನ್ಯಥಾ ರೂಪಂ ಸ್ವರೂಪೇಣ ವ್ಯವಸ್ಥಿತಿಃ — ಭಾಷ್ಯೋದಾಹೃತ—ಸಂಸಾರಾವಸ್ಥೆಯಲ್ಲಿದ್ದಾಗ ಇರುವ ರೂಪಗಳನ್ನು ಬಿಟ್ಟು ತನ್ನ ಸ್ವರೂಪವಾದ ಆಕಾರದಿಂದ ಇರುವುದೇ ಮುಕ್ತಿ.)

**ಸಂಸೃತಾವನ್ಯಥಾಭಾವಸ್ತೇಷಾಂ ತನುಭೃತಾಂ ಕಿಲ ।**
**ತತ್ರ ಸ್ಥಾವರಮುಕ್ತೇಭ್ಯೋ ವರಾ ಜಂಗಮಮುಕ್ತಿಗಾಃ ॥ ೫೭ ॥**

ವೃಕ್ಷಾದಿಗಳಿಗೆ ಸಂಸಾರಾವಸ್ಥೆಯಲ್ಲಿ ಅನ್ಯರೂಪಗಳಿರುತ್ತವೆ. ಮುಕ್ತಿಯಲ್ಲಿ ಇಂತಹ ಸ್ಥಾವರ ಜೀವರಿಗಿಂತಲೂ (ಗಿಡ, ಪೊದೆ ಇತ್ಯಾದಿ) ಜಂಗಮ ಜೀವರು (ಚಲಿಸುವ ರೂಪ—ಹಂಸ, ಗಿಣಿ ಇತ್ಯಾದಿ) ಶ್ರೇಷ್ಠರು.

**ತೇಭ್ಯೋ ಮಾನುಷಮುಕ್ತಾಶ್ಚ ತೇಭ್ಯೋ ಮುಕ್ತಾ ದ್ವಿಜಾಃ ಪರಾಃ ।**
**ತತ್ತ್ವೋಪದೇಶಕರ್ತಾರೋ ಮುಕ್ತಾಸ್ತೇಭ್ಯೋಽಧಿಕಾ ಮತಾಃ ॥ ೫೮ ॥**

ಜಂಗಮಜೀವರಿಗಿಂತಲೂ ಮುಕ್ತರಾದ ಮನುಷ್ಯರು ಉತ್ತಮರು ; ಅವರಿಗಿಂತ ದ್ವಿಜರು ಶ್ರೇಷ್ಠರು ; ಅವರಿಗಿಂತಲೂ ತತ್ತ್ವವನ್ನು ಉಪದೇಶಮಾಡಿ ಮುಕ್ತಿ ಪಡೆದವರು ಉತ್ತಮರು.

**ತೇಭ್ಯೋಽಧಿಕಾಸ್ತು ಭೂಪಾಲಾ ಮುಕ್ತಿಗಾಃ ಪರಿಕೀರ್ತಿತಾಃ ।**
**ಭೂಪೇಭ್ಯಃ ಪಿತರೋ ಜ್ಞೇಯಾ ಮುಕ್ತಿಗಾಸ್ತೇಭ್ಯ ಏವ ಚ ॥ ೫೯ ॥**

ತತ್ತ್ವೋಪದೇಶ ಮಾಡಿದವರಿಗಿಂತಲೂ ಚಕ್ರವರ್ತಿಗಳು (ಸ್ವರೂಪದಿಂದ) ಶ್ರೇಷ್ಠರು ; ಚಕ್ರವರ್ತಿಗಳಿಗಿಂತ ಮುಕ್ತರಾದ ಪಿತೃದೇವತೆಗಳು ಶ್ರೇಷ್ಠರು.

**ವಸವೋಽಭ್ಯಧಿಕಾಃ ಪ್ರೋಕ್ತಾಸ್ತೇಭ್ಯೋ ವೈ ಕರ್ಮಜಾಃ ಪರಾಃ।**
**ತೇಭ್ಯಶ್ಚಾಜಾನಜಾ ದೇವಾಸ್ತೇಭ್ಯಃ ಸಪ್ತರ್ಷಯಃ ಪರಾಃ ॥ ೬೦ ॥**

ಪಿತೃದೇವತೆಗಳಿಗಿಂತ ವಸುಗಳು, ಅವರಿಗಿಂತ ಕರ್ಮಜದೇವತೆಗಳು, ಅವರಿಗಿಂತ ಆಜಾನಜ ದೇವತೆಗಳು, ಅವರಿಗಿಂತ ಸಪ್ತಋಷಿಗಳು ಶ್ರೇಷ್ಠರು.

**ತೇಭ್ಯೋ ವಹ್ನಿಸ್ತತಃ ಸೂರ್ಯಸ್ತಸ್ಮಾದ್ವಾಚಸ್ಪತಿಃ ಪರಃ ।**
**ತಸ್ಮಾದಿಂದ್ರಃ ಪರೋ ಮುಕ್ತೌ ತಸ್ಮಾದ್ಗೌರೀ ತತೋ ಹರಃ ॥ ೬೧ ॥**

ಸಪ್ತಋಷಿಗಳಿಗಿಂತ ಅಗ್ನಿ, ಅಗ್ನಿಗಿಂತ ಸೂರ್ಯ, ಸೂರ್ಯನಿಗಿಂತ ಗುರುವು, ಗುರುವಿಗಿಂತ (ಬೃಹಸ್ಪತಿ) ಇಂದ್ರ, ಇಂದ್ರನಿಗಿಂತ ಪಾರ್ವತೀದೇವಿ, ಅವರಿಗಿಂತ ರುದ್ರದೇವರು ಮುಕ್ತಿಯಲ್ಲಿ ಶ್ರೇಷ್ಠರು.

**ಹರಾದ್‌ಬುದ್ಧಿಸ್ತತೋ ಬ್ರಹ್ಮಾ ಮುಕ್ತೌ ಜೀವಾಧಿಕೋ ಮತಃ ।**
**ನ ತಸ್ಮಾದಧಿಕಃ ಕೋsಪಿ ಮುಕ್ತೌ ಜೀವೇಷು ಚೋತ್ತಮಃ ॥ ೬೨ ॥**

ರುದ್ರದೇವರಿಗಿಂತಲೂ ಸರಸ್ವತೀದೇವಿ, ಅವರಿಗಿಂತ ಬ್ರಹ್ಮದೇವರು ಶ್ರೇಷ್ಠರು, ಬ್ರಹ್ಮದೇವರಿಗಿಂತಲೂ ಶ್ರೇಷ್ಠರಾದವರು ಮುಕ್ತಿಯನ್ನು ಪಡೆದ ಜೀವರಾಶಿಗಳಲ್ಲಿ ಯಾರೂ ಇಲ್ಲ (ಮಹಾಲಕ್ಷ್ಮೀದೇವಿಯರು ನಿತ್ಯಮುಕ್ತರಾದುದರಿಂದ ಅವರನ್ನು ವಿವಕ್ಷಿಸಿಲ್ಲ).

**ಬ್ರಹ್ಮಣಃ ಪರಮವ್ಯಕ್ತಂ ತಸ್ಮಾದ್ವಿಷ್ಣುರ್ಮಹಾಪ್ರಭುಃ ।**

ಮೋಕ್ಷದಲ್ಲಿ ಬ್ರಹ್ಮದೇವರಿಗಿಂತಲೂ ಮಹಾಲಕ್ಷ್ಮೀದೇವಿಯರು ಶ್ರೇಷ್ಠರು ; ಅವರಿಗಿಂತಲೂ ಶ್ರೇಷ್ಠನಾದವನು ಮಹಾಪ್ರಭುವಾದ ವಿಷ್ಣುವೇ.

**ದೇಹಾನ್ನಿಷ್ಕ್ರಮತಾಂ ಪುಂಸಾಂ ಮಾರ್ಗೌ ದ್ವೌ ಪರಿಕೀರ್ತಿತೌ ॥ ೬೩ ॥**

ಜೀವರು ದೇಹದಿಂದ ಉತ್ಕ್ರಮಣಮಾಡಲು ಎರಡು ಮಾರ್ಗಗಳು.

**ಸಂಸಾರೇ ಭ್ರಮಮಾಣಾನಾಂ ಮಾರ್ಗೋ ವೈ ದಕ್ಷಿಣಾಯನಃ ।**
**ಧೂಮ್ರಾದಿರಿತಿ ತಂ ಪ್ರಾಹುಃ ಪಿತೃಯಾನಂ ಚ ತಂ ವಿದುಃ ॥ ೬೪ ॥**

ನಿತ್ಯಸಂಸಾರಿಗಳು ಉತ್ಕ್ರಮಣ ಮಾಡುವ ಮಾರ್ಗವು "ದಕ್ಷಿಣಾಯನ" ವೆಂತಲೂ "ಧೂಮ್ರಾದಿ" ಎಂತಲೂ, "ಪಿತೃಯಾನ" ಎಂತಲೂ ಕರೆಸಿಕೊಳ್ಳಲ್ಪಡುತ್ತವೆ.

[ವಿಶೇಷಾಂಶ : **ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಮ್ ।**
**ತತ್ರ ಚಾಂದ್ರಮಸಂ ಜ್ಯೋತಿರ್ಯೋಗೀ ಪ್ರಾಪ್ಯ ನಿವರ್ತತೇ ॥**
—ಗೀತಾ

ಧೂಮಾಭಿಮಾನಿದೇವತೆ, ರಾತ್ರ್ಯಭಿಮಾನಿದೇವತೆ, ಕೃಷ್ಣಪಕ್ಷಾಭಿಮಾನಿ ದೇವತೆ, ಷಣ್ಮಾಸಾಭಿಮಾನಿದೇವತೆ, ದಕ್ಷಿಣಾಯನಾಭಿಮಾನಿದೇವತೆ—ಇವರಿಂದ ನಿಯಮ್ಯವಾದ ಮಾರ್ಗದಲ್ಲಿ ಪ್ರಯಾಣಮಾಡುವವನು ಚಂದ್ರಲೋಕವನ್ನು ಹೊಂದಿ ಪುನಃ ಸಂಸಾರಕ್ಕೆ ಬರುತ್ತಾನೆ.]

**ವಿಪಶ್ಚಿತಾಂ ತಥಾ ಮಾರ್ಗೋ ದ್ವಿತೀಯಶ್ಚೋತ್ತರಾಯಣಃ ।**
**ಅರ್ಚಿರಾದಿರಿತಿ ಪ್ರೋಕ್ತಃ ಸ ಚ ವೈ ದ್ವಿವಿಧೋ ಮತಃ ॥ ೬೫ ॥**

ಜ್ಞಾನಿಗಳು ಹೋಗುವ ಎರಡನೇ ಮಾರ್ಗವು "ಉತ್ತರಾಯಣ". ಇದಕ್ಕೆ "ಅರ್ಚಿರಾದಿ" ಎಂತಲೂ ಹೆಸರು. ಈ ಮಾರ್ಗವು ಎರಡು ವಿಧ.

[ವಿಶೇಷಾಂಶ : **ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಮ್ ।**
**ತತ್ರ ಪ್ರಯಾತಾ ಗಚ್ಛಂತಿ ಬ್ರಹ್ಮ ಬ್ರಹ್ಮವಿದೋ ಜನಾಃ ॥**
—ಗೀತಾ

ಅಗ್ನಿನಾಮಕದೇವತೆ, ಅರ್ಚಿ ಎಂಬ ಹೆಸರುಳ್ಳ ದೇವತೆ, ಹಗಲಿಗೆ ಅಭಿಮಾನಿ ದೇವತೆ, ಶುಕ್ಲಪಕ್ಷಕ್ಕೆ ಅಭಿಮಾನಿಯಾದ ದೇವತೆ, ಷಣ್ಮಾಸಾಭಿಮಾನಿ ದೇವತೆ, ಉತ್ತರಾಯಣಾಭಿಮಾನಿ ದೇವತೆ—ಇವರಿಂದ ನಿಯಮ್ಯವಾದ ಮಾರ್ಗದಲ್ಲಿ ಹೋಗುವ ಬ್ರಹ್ಮಜ್ಞಾನಿಗಳಾದ ಜನರು ಪರಮಾತ್ಮನನ್ನು ಹೊಂದುತ್ತಾರೆ.]

**ದೇವಯಾನಂ ಬ್ರಹ್ಮಯಾನಮಿತಿ ತಂ ಚ ವಿದೋ ವಿದುಃ ।**

ಜ್ಞಾನಿಗಳು ಈ ಮಾರ್ಗಗಳನ್ನು "ದೇವಯಾನ", "ಬ್ರಹ್ಮಯಾನ" ಎಂದು ತಿಳಿಯುತ್ತಾರೆ.

**ದೇಹೇ ತಿಸ್ರಶ್ಚ ನಾಡ್ಯಃ ಸ್ಯುಃ ಪಿಂಗಲೇಡಾಸುಷುಮ್ನಕಾಃ ॥ ೬೬ ॥**
**ದಕ್ಷಿಣಾಃ ಪಿಂಗಲಾಃ ಸರ್ವಾ ಇಡಾ ವಾಮಾಃ ಪ್ರಕೀರ್ತಿತಾಃ ।**
**ನಾಡ್ಯೋsಥ ಮಧ್ಯಮಾಃ ಪ್ರೋಕ್ತಾಃ ಸುಷುಮ್ನಾ ವೇದಪಾರಗೈಃ ॥೬೭॥**

ನಮ್ಮ ದೇಹದಲ್ಲಿ ಮೂರು ವಿಧವಾದ ನಾಡಿಗಳು ಇವೆ—ಪಿಂಗಳಾ, ಇಡಾ ಮತ್ತು ಸುಷುಮ್ನಾ. ದೇಹದ ಬಲಭಾಗದಲ್ಲಿರುವ ಎಲ್ಲ ನಾಡಿಗಳೂ ಪಿಂಗಳಾ, ಎಡಭಾಗದಲ್ಲಿರುವುವು ಇಡಾ, ಮಧ್ಯದಲ್ಲಿರುವುದು ಸುಷುಮ್ನಾ—ಹೀಗೆ ವೇದ ಬಲ್ಲವರು ಹೇಳುತ್ತಾರೆ.

**ಸುಷುಮ್ನಾನಾಡಿಪಾರ್ಶ್ವಸ್ಥೇ ಇಡಾಪಿಂಗಲಸಂಜ್ಞಕೇ ।**
**ಪಿಂಗಲಾ ದಕ್ಷಿಣಾ ನಾಡೀ ಇಡಾ ವಾಮಾ ಪ್ರಕೀರ್ತಿತಾ ॥ ೬೮ ॥**

ಸುಷುಮ್ನಾನಾಡಿಯ ಪಕ್ಕದಲ್ಲಿಯೇ ಇಡಾ, ಪಿಂಗಳ ನಾಡಿಗಳಿವೆ. ಪಿಂಗಳಾ ನಾಡಿಯು ದಕ್ಷಿಣನಾಡಿಯೆಂದೂ, ಇಡಾ ಎಂಬುವುದು ಉತ್ತರನಾಡಿಯೆಂದೂ ಕರೆಸಿಕೊಳ್ಳಲ್ಪಡುತ್ತವೆ.

**ಪಿಂಗಲಾಯಾಃ ಶತಂ ಪಂಚ ನಾಡ್ಯೋ ವೈ ದಕ್ಷಿಣಾಯನಾಃ ।**
**ತಾವಂತ್ಯ ಏವ ಚೇಡಾಯಾ ನಾಡ್ಯಸ್ತಾಶ್ಚೋತ್ತರಾಯಣಃ ॥ ೬೯ ॥**

ದಕ್ಷಿಣಾಯನನಾಡಿಗಳೆಂದು ಹೇಳಲ್ಪಡುವ ಪಿಂಗಳಾ ನಾಡಿಗಳು ಐದುನೂರು. ಹಾಗೆಯೇ ಉತ್ತರಾಯಣನಾಡಿಗಳೆಂದು ಪ್ರಸಿದ್ಧವಾದ ಇಡಾ ನಾಡಿಗಳು ಐದುನೂರು.

**ದಕ್ಷಿಣಾಯನನಾಡ್ಯಸ್ತು ತಿರ್ಯಗ್ವಾಮೇ ಪ್ರಸಾರಿತಾಃ ।**
**ಉತ್ತರಾಯಣನಾಡ್ಯಸ್ತು ತಿರ್ಯಗ್ದಕ್ಷಿಣಗಾ ಮತಾಃ ॥ ೭೦ ॥**

ದಕ್ಷಿಣಾಯನ ನಾಡಿಗಳು ತಿರ್ಯಗ್ರೂಪವಾಗಿ ವಾಮಭಾಗದಲ್ಲಿಯೂ, ಉತ್ತರಾಯಣ ನಾಡಿಗಳು ತಿರ್ಯಗ್ರೂಪವಾಗಿ ದಕ್ಷಿಣ ಭಾಗದಲ್ಲಿಯೂ ಹರಡಿಕೊಂಡಿವೆ.

**ಉತ್ತರಾಯಣಮಾರ್ಗಸ್ಥಾ ನಿಷ್ಕ್ರಾಮಂತಃ ಕಲೇವರಾತ್ ।**
**ಗಚ್ಛಂತಿ ದಕ್ಷಿಣಾತ್ಕರ್ಣಾದಾಮುಕ್ತೇರ್ಮಹರಾದಿಗಾಃ ॥ ೭೧ ॥**

ಉತ್ತರಾಯಣ ಮಾರ್ಗದಿಂದ ದೇಹದಿಂದ ಹೊರಟ ಜೀವರು ದಕ್ಷಿಣ ಕಿವಿಯಿಂದ ಹೊರಟು ಮಹದಾದಿ ಲೋಕಗಳನ್ನು ಹೊಂದುವರು.

**ದಕ್ಷಿಣಾಯನಮಾರ್ಗಸ್ಥಾ ನಿರ್ಗಚ್ಛಂತಃ ಕಲೇವರಾತ್ ।**
**ಗಚ್ಛಂತಿ ವಾಮಕರ್ಣೇನ ಪುನರ್ನಿರಯಭೂಮಿಗಾಃ ॥ ೭೨ ॥**

ದಕ್ಷಿಣಾಯನ ಮಾರ್ಗದಿಂದ ಹೊರಡುವ ಜೀವರು ವಾಮಕಿವಿಯಿಂದ ಹೊರಟು ನರಕ, ಭೂಲೋಕ ಇವುಗಳಲ್ಲಿಯೇ ಸುತ್ತುತ್ತಾರೆ.

**ತತ್ರ ಧೂಮ್ರಾದಿಮಾರ್ಗೇಣ ನಿರ್ಗತಾಃ ಕರ್ಮಿಣಸ್ತು ಯೇ ।**
**ಪಿತೃಯಾನಸ್ಯ ಮಾರ್ಗಸ್ಥಾ ರಾತ್ರಿಶಬ್ದಾಹ್ವಯಾ ನರಾಃ ॥ ೭೩ ॥**
**ಪಿತೃಮೇಘಜಲಾದೀನಿ ಕ್ರಮಾತ್ ಪ್ರಾಪ್ತಾಃ ಪುನರ್ಭುವಿ ।**
**ಜಾಯಂತೇ ಕರ್ಮಭಿರ್ಘೋರೈರ್ನಾನಾಯೋನಿಷು ಯೋನಿಷು ॥ ೭೪ ॥**

ಧೂಮ್ರಾದಿ ಮಾರ್ಗದಿಂದ ಹೊರಟ ಕರ್ಮಿಗಳು ಪಿತೃಯಾನಮಾರ್ಗದಿಂದ ಪ್ರಯಾಣಮಾಡಿ "ರಾತ್ರಿ" ಎಂಬ ಹೆಸರಿನಿಂದ ಪಿತೃ, ಮೇಘ, ಜಲ ಮುಂತಾದ ಸ್ಥಳಗಳಲ್ಲಿದ್ದು ಅನಂತರ ಕ್ರಮವಾಗಿ ಭೂಮಿಯಲ್ಲಿ ತಮ್ಮ ತಮ್ಮ ಘೋರಕರ್ಮಗಳಿಗೆ ಅನುಸಾರವಾಗಿ ನಾನಾ ಯೋನಿಗಳಲ್ಲಿ ಹುಟ್ಟುತ್ತಾರೆ.

**ಉತ್ತರಾಯಣಮಾರ್ಗಸ್ಥಾಃ ನಿರ್ಗಚ್ಛಂತಃ ಕಲೇವರಾತ್ ।**
**ಗಚ್ಛಂತ್ಯರ್ಚಿಷಮೇವಾದೌ ತತಶ್ಚೈವಾತಿವಾಹಿಕಮ್ ॥ ೭೫ ॥**
**ತತೋಽಹಃ ಪೂರ್ವಪಕ್ಷಂ ವಾಪ್ಯುದಕ್ ಸಂವತ್ಸರಂ ತಥಾ ।**
**ತಡಿತಂ ವರುಣಂ ಚೈವ ಪ್ರಜಾಪಂ ಸೂರ್ಯಮೇವ ಚ ॥ ೭೬ ॥**
**ತಥಾ ವೈಶ್ವಾನರಂ ಚಂದ್ರಂ ಧ್ರುವಂ ಚೈವ ದಿವಂ ತಥಾ ।**
**ತತೋ ವಾಯುಂ ಪರಂ ಪ್ರಾಪ್ಯ ತೇನೈವ ಪುರುಷೋತ್ತಮಮ್ ॥ ೭೭ ॥**

**ಅನೇನ ವಿಧಿನಾ ತೇ ತು ಕ್ರಮಾದ್ಯಾಂತಿ ಹರೇಃ ಪದಮ್ ।**

ಉತ್ತರಾಯಣ ಮಾರ್ಗದಿಂದ ಹೊರಡುವ ಜೀವರು ಮೊದಲು ಅರ್ಚಿಷ ಲೋಕಕ್ಕೆ ಹೋಗುತ್ತಾರೆ. ನಂತರ ಆತಿವಾಹಕ, ನಂತರ ಅಹರಭಿಮಾನಿಲೋಕ, ನಂತರ ಪೂರ್ವಪಕ್ಷಕ್ಕೆ ಅಭಿಮಾನಿಯಲೋಕ, ನಂತರ ಉದಕ, ನಂತರ ಸಂವತ್ಸರಕ್ಕೆ ಅಭಿಮಾನಿಯಲೋಕ, ನಂತರ ತಟಿತ್‌ಲೋಕ, ನಂತರ ವರುಣಲೋಕ, ನಂತರ ಪ್ರಜಾಪತಿಲೋಕ, ನಂತರ ಸೂರ್ಯಲೋಕ, ನಂತರ ವೈಶ್ವಾನರಲೋಕ, ನಂತರ ಚಂದ್ರಲೋಕ, ನಂತರ ಧ್ರುವಲೋಕ, ನಂತರ ಸ್ವರ್ಗಲೋಕ, ನಂತರ ವಾಯು ಲೋಕ, ಹೀಗೆ ಪ್ರಯಾಣಮಾಡಿ ವಾಯುದೇವರ ನೇತೃತ್ವದಲ್ಲಿ ಪುರುಷೋತ್ತಮ ನಾದ ಶ್ರೀಹರಿಯ ಲೋಕಕ್ಕೆ (ಮೋಕ್ಷಕ್ಕೆ) ಹೋಗುವರು.

(ಈ ಮಾರ್ಗಗಳ ಮತ್ತು ಪ್ರಯಾಣಮಾಡುವ ಲೋಕಗಳ ವಿವರಗಳನ್ನು ಬ್ರಹ್ಮಸೂತ್ರಭಾಷ್ಯದ ನಾಲ್ಕನೆಯ ಅಧ್ಯಾಯದ ಮೂರನೆಯ ಪಾದದಲ್ಲಿ ಕಾಣ ಬಹುದು.)

**ದೇಹಾನ್ನಿಷ್ಕ್ರಮಮಾಣಾಸ್ತು ಮುಕ್ತಿಗಾಃ ಪ್ರಥಮಂ ಹರಿಮ್ ॥ ೭೮ ॥**
**ಶಿಂಶುಮಾರಮಜಂ ದೃಷ್ಟ್ವಾ ಕ್ರಮಾತ್ ಪಶ್ಚಾತ್ ವ್ರಜಂತಿ ತಮ್ ।**
**ತಥಾ ಲಿಂಗಶರೀರಸ್ಯ ಭಂಗಕಾಲ ಉಪಸ್ಥಿತೇ ॥ ೭೯ ॥**

ಮುಕ್ತಿಯೋಗ್ಯರು ದೇಹದಿಂದ ಹೊರಟನಂತರ ಮೊದಲು ಶ್ರೀಹರಿಯ ರೂಪವಾದ ಅಜನಾದ ಶಿಂಶುಮಾರನನ್ನು ನೋಡಿ ಕ್ರಮವಾಗಿ ಅವನ ಬಳಿ ಹೋಗುತ್ತಾರೆ. ಲಿಂಗದೇಹ ನಾಶವಾಗುವ ಕಾಲ ಬಂದಾಗ

**ಸುಷುಮ್ನಾನಾಡಿತೋ ಯಾಂತಿ ಕ್ರಮೇಣಾನೇನ ತಂ ಹರಿಮ್ ।**
**ಯೋಗಶಕ್ತ್ಯಾ ಮಹಾತ್ಮಾನೋ ಮನ ಆವೇಶ್ಯ ಚಾತ್ಮನಿ ॥ ೮೦ ॥**

ಇವರು ಸುಷುಮ್ನಾನಾಡಿಯಿಂದ ಹೊರಟು ತಮ್ಮ ಯೋಗಸಾಮರ್ಥ್ಯದಿಂದ ಶ್ರೀಹರಿಯಲ್ಲಿಯೇ ತಮ್ಮ ಮನಸ್ಸನ್ನು ಇಟ್ಟು,

**ಪೃಥಿವೀಮಪ್ಸು ಸಂಯೋಜ್ಯ ಹ್ಯಪಗ್ನೌ ತಂ ಸದಾಗತೌ ।**
**ಸಂಯೋಜ್ಯ ವಾಯುಮಾಕಾಶೇ ತನ್ಮಾತ್ರಾ ಅಪಿ ವೈ ಕ್ರಮಾತ್ ॥ ೮೧ ॥**

ಪೃಥ್ವೀ ತತ್ವವನ್ನು ಅಪ್‌ತತ್ವದಲ್ಲಿ, ಅಪ್‌ತತ್ವವನ್ನು ಅಗ್ನಿತತ್ವದಲ್ಲಿ, ಅಗ್ನಿತತ್ವವನ್ನು ವಾಯುತತ್ವದಲ್ಲಿ, ವಾಯುತತ್ವವನ್ನು ಆಕಾಶತತ್ವದಲ್ಲಿ, ಪಂಚತನ್ಮಾತ್ರಾಗಳನ್ನೂ ಅದರಲ್ಲಿ ಸೇರಿಸಿ

**ಆಕಾಶಂ ಚ ಮನಸ್ತತ್ವೇ ಸಂಯೋಜ್ಯ ಚ ಮಹಾಮತಿಃ ।**
**ಮನಸ್ತತ್ವಂ ಬುದ್ಧಿತತ್ವೇ ಬುದ್ಧಿತತ್ವಮಹಂಕೃತೌ ॥ ೮೨ ॥**

**ಅಹಂಕಾರಂ ಮಹತ್ತತ್ವೇ ತಚ್ಚಾವ್ಯಕ್ತೇ ಮಹಾಮತಿಃ ||**
**ತತ್ತ್ವಾಭಿಮಾನಿನೋ ದೇವಾಂಸ್ತಥಾ ಸಂಯೋಜ್ಯ ವೈ ಕ್ರಮಾತ್ || ೮೩ ||**

ಆಕಾಶತತ್ವವನ್ನು ಮನಸ್ತತ್ವದಲ್ಲಿ, ಮನಸ್ತತ್ವವನ್ನು ಬುದ್ಧಿತತ್ವದಲ್ಲಿ, ಬುದ್ಧಿತತ್ವವನ್ನು ಅಹಂಕಾರತತ್ವದಲ್ಲಿ, ಅಹಂಕಾರತತ್ವವನ್ನು ಮಹತ್ತತ್ವದಲ್ಲಿ, ಮಹತ್ತತ್ವವನ್ನು ಅವ್ಯಕ್ತತತ್ವದಲ್ಲಿ ಸಂಯೋಜಿಸಿ, ಅದರಂತೆ ತತ್ತ್ವಾಭಿಮಾನಿದೇವತೆಗಳನ್ನೂ ತಾರತಮ್ಯಕ್ರಮದಿಂದ ಯೋಜನಮಾಡಿ,

**ತತ್ತದಂತಸ್ಥಹರಿಣಾ ಸಾಕಂ ವಿಷ್ಣುಪುರಃಸರಃ |**
**ನಿರ್ಗತ್ಯ ಬ್ರಹ್ಮರಂಧ್ರೇಣ ಯಾತಿ ವಿಷ್ಣೋಃ ಪರಂ ಪದಮ್ || ೮೪ ||**

ಈ ಅನೇಕ ತತ್ವಗಳಲ್ಲಿರುವ ಶ್ರೀಹರಿಯಿಂದ ಸಹಿತನಾಗಿ ವಿಷ್ಣುವನ್ನು ಮುಂದಿಟ್ಟುಕೊಂಡು ಬ್ರಹ್ಮರಂಧ್ರದಿಂದ ಹೊರಗೆಬಂದು ಶ್ರೀಹರಿಯ ಉತ್ತಮವಾದ ಲೋಕಕ್ಕೆ ತೆರಳುತ್ತಾನೆ.

**ನ ತನ್ಮಾರ್ಗಕ್ರಮಂ ಜ್ಞಾತ್ವಾ ಮುಚ್ಯತೇ ಸರ್ವಕಿಲ್ಬಿಷೈಃ |**
**ಕಿಮುನ್ನನುಷ್ಠಾನವತಾಂ ನೃಣಾಂ ಮುಕ್ತಿಃ ಕರೇ ಸ್ಥಿತಾ ||**
**ಸತಾಂ ಚ ಮುಕ್ತಿಃ ಸುಲಭಾ ದುರ್ಲಭಾ ಹ್ಯಕೃತಾತ್ಮನಾಮ್ || ೮೫ ||**

ಈ ಮಾರ್ಗದ ಜ್ಞಾನವಿಲ್ಲದಿದ್ದರೆ ಪಾಪಗಳಿಂದ ಮುಕ್ತನಾಗುವುದಿಲ್ಲ. ಈ ಕ್ರಮವನ್ನು ಅರಿತು ಅನುಷ್ಠಾನಮಾಡುವವರಿಗೆ ಮೋಕ್ಷವು ಕೈಯಲ್ಲಿಯೇ ಇದೆ. ಸಜ್ಜನರಿಗೆ ಮುಕ್ತಿಯು ಸುಲಭ; ಇಂದ್ರಿಯನಿಗ್ರಹವೇ ಮೊದಲಾದ ಸಾಧನಗಳು ಇಲ್ಲದವರಿಗೆ ಮುಕ್ತಿಯು ದುರ್ಲಭ.

ಇತಿ ಶ್ರೀ ವಾಯುಪುರಾಣೇ ಮಾಘಮಾಸಮಾಹಾತ್ಮ್ಯೇ
ಏಕೋನವಿಂಶೋಽಧ್ಯಾಯಃ

ಶ್ರೀ ವಾಯುಪುರಾಣಾಂತರ್ಗತ ಮಾಘಮಾಸಮಾಹಾತ್ಮ್ಯೆಯಲ್ಲಿ
ಹತ್ತೊಂಬತ್ತನೇ ಅಧ್ಯಾಯವು ಸಮಾಪ್ತಿಯಾಯಿತು.

**ಶಾಂಡಿಲ್ಯ ಉವಾಚ—**

**ಜ್ಞಾನಸ್ಯ ಕರ್ಮಣಶ್ಚಾಪಿ ಶ್ರವಣಂ ಕಾರಣಂ ತತಃ ।**
**ಸಂಕೋಚ್ಯ ಸರ್ವಕರ್ಮಾಣಿ ಶ್ರವಣಂ ಚಾಭ್ಯಸೇತ್ಸುಧೀಃ ॥**
**ಕಾರ್ಯಾಣಿ ಸರ್ವಕರ್ಮಾಣಿ ಕಥಾಭಾವೋ ಹರೇರ್ಯದಾ ॥ ೧ ॥**

ಶಾಂಡಿಲ್ಯರು ನುಡಿದರು—

ಯಥಾರ್ಥಜ್ಞಾನ ಪಡೆಯುವುದಕ್ಕೂ, ನಿತ್ಯಕರ್ಮಾನುಷ್ಠಾನವನ್ನು ವಿಧಿವತ್ತಾಗಿ ಮಾಡುವುದಕ್ಕೂ ಭಗವಂತನ ಮಾಹಾತ್ಮ್ಯೆಯನ್ನು ಬೋಧಿಸುವ ಗ್ರಂಥಗಳ ಶ್ರವಣ ಅಗತ್ಯ. ಆದುದರಿಂದ ನಿತ್ಯಕರ್ಮಾನುಷ್ಠಾನದಲ್ಲಿ ಸಂಕೋಚವನ್ನಾದರೂ ಮಾಡಿಕೊಂಡು ಭಗವಂತನ ಮಾಹಾತ್ಮ್ಯೆಯನ್ನು ಆದರದಿಂದ ಕೇಳಬೇಕು. ಕಥಾಪ್ರವಚನವಿಲ್ಲದ ಕಾಲದಲ್ಲಿ ಸಕಲ ವಿಧ್ಯುಕ್ತಕರ್ಮಗಳನ್ನೂ ಮಾಡಬೇಕು.

**ಕಥಾಸುಧಾನದೀ ಯತ್ರ ಪ್ರವಹೇತ್ ಶ್ರಮಹಾರಿಣೀ ।**
**ಸಂಪಾದ್ಯಾ ಸೈವ ಯತ್ನೇನ ಸಂಕೋಚ್ಯೇತರಕರ್ಮ ಚ ॥ ೨ ॥**

ಭಗವಂತನ ಕಥೆಯೆಂಬ ಅಮೃತದ ನದಿಯು ಸಾಂಸಾರಿಕ ಶ್ರಮವನ್ನು ಪರಿಹರಿಸುತ್ತದೆ. ಆದ್ದರಿಂದ ಅಂತಹ ನದಿಯು ಹರಿಯುವಲ್ಲಿಗೆ ಪ್ರಯತ್ನ ಪೂರ್ವಕವಾಗಿ ಕರ್ಮಾನುಷ್ಠಾನವನ್ನು ಸಂಕೋಚಮಾಡಿಕೊಂಡಾದರೂ, ಹೋಗಬೇಕು.

**ನ ಯತ್ರ ಗೋವಿಂದಕಥಾಮೃತಾನದೀ**
**ನ ಯತ್ರ ನಾರಾಯಣಪಾದಸಂಶ್ರಯಾಃ ।**
**ನ ವರ್ತತೇ ಯತ್ರ ಹರೇರ್ಮಹೋತ್ಸವೋ**
**ನ ಯಾತ್ಯಹೋ ಬ್ರಹ್ಮಪದಂ ಹಿ ಸೇವ್ಯತಾಮ್ ॥ ೩ ॥**

ಯಾವ ಸ್ಥಳದಲ್ಲಿ ಗೋವಿಂದನ ಕಥಾಮೃತವೆಂಬ ನದಿ ಹರಿಯುವುದಿಲ್ಲವೋ, ಎಲ್ಲಿ ನಾರಾಯಣನ ಪಾದಗಳನ್ನೇ ಆಶ್ರಯಿಸಿಕೊಂಡಿರುವ ಸಜ್ಜನರಿಲ್ಲವೋ, ಎಲ್ಲಿ ಶ್ರೀಹರಿಯ ನಿತ್ಯನೈಮಿತ್ತಿಕ ಉತ್ಸವಗಳು ನಡೆಯುವುದಿಲ್ಲವೋ, ಅಂತಹ ಸ್ಥಳಗಳಲ್ಲಿರುವ ಜನರು ಮೋಕ್ಷಕ್ಕೆ ಹೋಗಲಾರರು.

**ತಥೈವ ಕಾಶೀ ಯಮುನಾ ಚ ನರ್ಮದಾ**
**ಗೋದಾವರೀ ತತ್ರ ಸರಸ್ವತೀ ಚ ।**

**ನದ್ಯಃ ಸಮಸ್ತಾ ಅಪಿ ದೇವಖಾತಾ**
**ವಸಂತಿ ಯತ್ರಾಚ್ಯುತಸತ್ಕಥಾಪಗಾ || ೪ ||**

ಎಲ್ಲಿ ಭಗವಂತನ ಕಥೆಯ ಪ್ರವಚನ ನಡೆಯುತ್ತದೆಯೋ ಆ ಸ್ಥಳವೇ ಕಾಶೀ; ಅಲ್ಲಿ ಯಮುನಾ, ನರ್ಮದಾ, ಗೋದಾವರೀ, ಸರಸ್ವತೀ ಹಾಗೂ ಎಲ್ಲಾ ತೀರ್ಥಗಳೂ ವಾಸಿಸುತ್ತವೆ (ಎಲ್ಲ ನದಿಗಳ ಮತ್ತು ಇತರ ಪವಿತ್ರ ತೀರ್ಥಾಭಿಮಾನಿ ದೇವತೆಗಳ ಸನ್ನಿಧಾನವು ಅಲ್ಲಿ ಇರುತ್ತದೆ).

**ಗಯಾ ಪ್ರಯಾಗಂ ಕುರುಜಾಂಗಲಂ ಚ**
**ಬ್ರಹ್ಮೇಶ್ವರಂ ಪುಷ್ಕರಮಭ್ರಸಂಜ್ಞಮ್ |**
**ಪ್ರಭಾಸಕೇದಾರಮುಖಾನಿ ತತ್ರ**
**ಸಂತ್ಯತ್ರ ತೀರ್ಥಾನಿ ಚ ಯಾನಿ ಲೋಕೇ || ೫ ||**

ಗಯಾ, ಪ್ರಯಾಗ, ಕುರುಕ್ಷೇತ್ರ, ಬ್ರಹ್ಮೇಶ್ವರ, ಪುಷ್ಕರ, ಅಭ್ರ, ಪ್ರಭಾಸ, ಕೇದಾರ ಇವೇ ಮೊದಲಾದ ಸ್ಥಳಗಳಲ್ಲಿರುವ ಮತ್ತು ಎಲ್ಲ ಪವಿತ್ರ ಸ್ಥಳಗಳಲ್ಲಿರುವ ತೀರ್ಥಾಭಿಮಾನಿ ದೇವತೆಗಳು ಭಗವಂತನ ಕಥಾಪ್ರವಚನ ನಡೆಯುವಲ್ಲಿ ಇರುತ್ತಾರೆ.

**ದೇವಾ ಹಿ ಬ್ರಹ್ಮೇಶಮುಖಾಶ್ಚ ತತ್ರ**
**ಧರ್ಮಾಶ್ಚ ಯಜ್ಞಾದಿಮುಖಾಃ ಸಮಸ್ತಾಃ |**
**ಲಕ್ಷ್ಮೀಶ್ಚ ಯೋಗಾ ಅಪಿ ಸಾಂಖ್ಯಮುಖ್ಯಾ**
**ವಿಷ್ಣೋಃ ಕಥಾ ಯತ್ರ ವಸಂತಿ ತತ್ರ || ೬ ||**

ಆ ಸ್ಥಳದಲ್ಲಿ ಬ್ರಹ್ಮರುದ್ರಾದಿ ದೇವತೆಗಳೂ, ಯಜ್ಞಾದಿ ಧರ್ಮಗಳೂ, ಸಾಕ್ಷಾತ್ ಲಕ್ಷ್ಮೀದೇವಿಯೂ, ಸಾಂಖ್ಯವೇ ಮೊದಲಾದ ಯೋಗಗಳೂ ವಾಸಿಸುತ್ತಾರೆ.

**ನ ಕರ್ಮಲೇಪೋ ನ ಚ ಬಂಧಲೇಶೋ**
**ನ ದುಃಖಲೇಶೋ ನ ಚ ಜನ್ಮಯೋಗಃ |**
**ನ ಭೂತಯಕ್ಷಾದಿಪಿಶಾಚಪೀಡಾ**
**ಯತ್ರಾಚ್ಯುತೋದಾರಕಥಾಪ್ರಸಂಗಃ || ೭ ||**

ಅಚ್ಯುತನ ಉತ್ಕೃಷ್ಟವಾದ ಕಥಾಪ್ರಸಂಗ ನಡೆಯುವ ಸ್ಥಳದಲ್ಲಿ ಕರ್ಮಲೇಪವಿಲ್ಲ, ಬಂಧನದ ಭಯವಿಲ್ಲ, ದುಃಖವಿಲ್ಲ, ಪುನರ್ಜನ್ಮವಿಲ್ಲ, ಭೂತ-ಯಕ್ಷ-ಪಿಶಾಚಿಗಳ ಪೀಡೆಯೂ ಇರುವುದಿಲ್ಲ.

**ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಮ್ |**
**ಸಂವಾದಂ ದ್ವಿಜಯೋಸ್ತತ್ರ ಪುಣ್ಯಧಾಮ್ನೋ ಮಹಾತ್ಮನಃ || ೮ ||**

ಈ ಸಂದರ್ಭದಲ್ಲಿ ಪುಣ್ಯಧಾಮರೆಂಬ ಇಬ್ಬರು ಬ್ರಾಹ್ಮಣರ ನಡುವೆ ನಡೆದ ಸಂವಾದರೂಪವಾದ ಪುರಾತನ ಇತಿಹಾಸವನ್ನು ಉದಹರಿಸುತ್ತೇನೆ.

**ಪುರಾ ಕೃತಯುಗಸ್ಯಾಂತೇ ಪುಣ್ಯಧಾಮಾ ದ್ವಿಜೋತ್ತಮಃ ।**
**ಗಂಗಾದಕ್ಷಿಣಕೂಲೇ ತು ಸಾರ್ಧಯೋಜನದೂರತಃ ॥ ೯ ॥**

**ಗ್ರಾಮೇ ಸತ್ಯವ್ರತೇ ಪುಣ್ಯೇ ತತ್ರಾವಾತ್ಸೀತ್ ಬೃಹತ್ತಪಾಃ ।**
**ಶತಾರ್ಧಂ ದೀರ್ಘತಪಸೋ ಜಾತ್ಯಂಧಸ್ಯ ಮಹಾತ್ಮನಃ ॥ ೧೦ ॥**

ಹಿಂದೆ ಕೃತಯುಗದ ಅಂತ್ಯಭಾಗದಲ್ಲಿ ಗಂಗಾನದಿಯ ದಕ್ಷಿಣದಿಕ್ಕಿನಲ್ಲಿ ಒಂದೂವರೆ ಯೋಜನ ದೂರದಲ್ಲಿದ್ದ ಪುಣ್ಯಕರವಾದ ಸತ್ಯವ್ರತವೆಂಬ ಗ್ರಾಮದಲ್ಲಿ ಪುಣ್ಯಧಾಮನೆಂಬ ಬ್ರಾಹ್ಮಣಶ್ರೇಷ್ಠನಿದ್ದನು. ಅದೇ ಗ್ರಾಮದಲ್ಲಿ ಬೃಹತ್ತಪನೆಂಬ ಬ್ರಾಹ್ಮಣನು, ಹುಟ್ಟುಕುರುಡನಾಗಿದ್ದ ದೀರ್ಘತಪನೆಂಬ ಬ್ರಾಹ್ಮಣನಿಗೆ ಐವತ್ತು ವರ್ಷಗಳಕಾಲ

**ತತ್ತ್ವೋಪದೇಶಮಕರೋತ್ ಕೃಪಯಾ ತು ಬೃಹತ್ತಪಾಃ ।**
**ತನ್ಮಧ್ಯೇ ನಾಕರೋತ್ ಗಂಗಾಸ್ನಾನಂ ವಿಷ್ಣುಕಥಾಲಯಃ ॥ ೧೧ ॥**

ಅಭಿಮಾನದಿಂದ ತತ್ತ್ವೋಪದೇಶವನ್ನು ಮಾಡುತ್ತಿದ್ದನು. ವಿಷ್ಣುಕಥೆಯೇ ಶ್ರೇಷ್ಠವೆಂದು ತಿಳಿದಿದ್ದ ಬೃಹತ್ತಪನು ಉಪದೇಶಮಾಡುವುದನ್ನು ನಿಲ್ಲಿಸಿ ಗಂಗಾಸ್ನಾನ ಮಾಡಲಿಲ್ಲ.

**ಪುಣ್ಯಧಾಮಾಪಿ ತದ್ ಗ್ರಾಮವಾಸೀ ವಿಷ್ಣುಕಥಾಂ ಶುಭಾಮ್ ।**
**ವಾಚ್ಯಮಾನಂ ತು ಶುಶ್ರಾವ ಸ ಬೃಹತ್ತಪಸೋ ಮುನೇಃ ॥ ೧೨ ॥**

ಅದೇ ಗ್ರಾಮದಲ್ಲಿದ್ದ ಪುಣ್ಯಧಾಮನೂ ಸಹ ಬೃಹತ್ತಪನು ಹೇಳುತ್ತಿದ್ದ ಶುಭವಾದ ವಿಷ್ಣುಕಥಾಗಳನ್ನು ಕೇಳುತ್ತಿದ್ದನು.

**ಸಾರ್ಧಂ ಚ ದೀರ್ಘತಪಸಾ ಶತಾರ್ಧಂ ಮುನಿಪುಂಗವಃ ।**
**ಸ ಕಥಾಲೋಲುಪೋ ಗಂಗಾಸ್ನಾನಮಾಶತವರ್ಷಕಮ್ ॥ ೧೩ ॥**

ದೀರ್ಘತಪಸ್ಸನೆಂಬ ಬ್ರಾಹ್ಮಣನೊಡನೆ ಐವತ್ತು ವರ್ಷಗಳಕಾಲ ಶ್ರವಣ ಮಾಡಿದನು. ಕಥೆಯಲ್ಲಿಯೇ ಆಸಕ್ತನಾಗಿದ್ದ ಪುಣ್ಯಧಾಮನು ನೂರು ವರ್ಷವಾದರೂ ಗಂಗಾಸ್ನಾನ ಮಾಡಲಿಲ್ಲ.

**ಸಂತ್ಯಜ್ಯ ಸರ್ವಕರ್ಮಾಣಿ ಗುರುಶುಶ್ರೂಷಣೇ ರತಃ ।**
**ತೀರ್ಥಯಾತ್ರಾಪರಾಣಾಂ ಚ ಹ್ಯಧ್ವಗಾನಾಂ ಮಹಾತ್ಮನಾಮ್ ॥ ೧೪ ॥**
**ಆತಿಥ್ಯಕರ್ಮನಿರತೋ ನೈಚ್ಛತ್ ಗಂಗಾವಗಾಹನಮ್ ।**

ಸಮಸ್ತ ಕರ್ಮಗಳನ್ನೂ ತ್ಯಜಿಸಿ (ಸಂಕೋಚಮಾಡಿಕೊಂಡು) ಗುರುಗಳ ಸೇವೆಯಲ್ಲಿ ಶ್ರದ್ಧೆಯನ್ನು ಹೊಂದಿದ್ದನು. ತೀರ್ಥಯಾತ್ರೆಗಾಗಿ ಆ ಗ್ರಾಮದ ಮಾರ್ಗದಲ್ಲಿ ಪ್ರಯಾಣಮಾಡುವ ಮಹಾತ್ಮರಾದ ಅತಿಥಿಸೇವೆಯಲ್ಲಿಯೇ ಆಸಕ್ತಿ ಹೊಂದಿದ್ದ ಪುಣ್ಯಧಾಮನು ಗಂಗಾಸ್ನಾನಮಾಡಲು ಕಾತರನಾಗಿರಲಿಲ್ಲ.

**ಶ್ರೀರಾಮಚರಿತಂ ಪುಣ್ಯಂ ಶತಕೋಟಿಪ್ರವಿಸ್ತರಮ್ ॥ ೧೫ ॥**

**ತಾವತ್ಸಂಖ್ಯಂ ಪಂಚರಾತ್ರಂ ಪುರಾಣಾನಿ ಚ ಸರ್ವಶಃ ।**
**ಇತಿಹಾಸಾಂಸ್ತಥಾ ವೇದಾಂಸ್ತಥಾ ವೇದಶಿರಾಂಸಿ ಚ ॥ ೧೬ ॥**

**ಸಾಕಂ ಚ ದೀರ್ಘತಪಸಾ ಶುಶ್ರಾವ ಸುಮಹಾಮತಿಃ ।**
**ಸೋsಕರೋದ್ದಶಗಾಯತ್ರೀಜಪಂ ಸಂಧ್ಯೇ ತಥೈವ ಚ ॥ ೧೭ ॥**

ನೂರುಕೋಟಿ ವಿಸ್ತಾರವಾದ ಪುಣ್ಯಪ್ರದವಾದ ಶ್ರೀರಾಮದೇವರ ಚರಿತ್ರೆ, ಅಷ್ಟೇ ಸಂಖ್ಯೆಯಷ್ಟು ವಿಸ್ತಾರವಾದ ಪಂಚರಾತ್ರ, ಸಮಸ್ತ ಪುರಾಣಗಳು, ಇತಿಹಾಸ, ವೇದಗಳು, ಉಪನಿಷತ್ತುಗಳನ್ನು ದೀರ್ಘತಪಸನೆಂಬ ಬ್ರಾಹ್ಮಣನ ಸಂಗಡ ಪುಣ್ಯಧಾಮನು ಶ್ರವಣಮಾಡಿದನು. ಸಂಧ್ಯಾವಂದನೆ ಮತ್ತು ಹತ್ತು ಗಾಯತ್ರೀ ಜಪವನ್ನು ಮಾತ್ರ ಮಾಡುತ್ತಿದ್ದನು.

**ಅನ್ಯಾನಿ ನಿತ್ಯಕರ್ಮಾಣಿ ತಂತುಮಾತ್ರಂ ಚಕಾರ ಸಃ ।**
**ಮಾರ್ಗಸ್ಥಮಹತಾಂ ಸೇವಾ ಸದಾ ವಿಷ್ಣುಕಥಾಶ್ರುತಿಃ ॥ ೧೮ ॥**
**ಪುಣ್ಯಧಾಮ್ನೋ ದ್ವಿಜಸ್ಯಾಸ್ಯ ಹ್ಯಭೂತ್ತತ್ರ ದ್ವಯೀ ಗತಿಃ ।**

ಇತರ ನಿತ್ಯಕರ್ಮಗಳನ್ನು ಸೂಕ್ಷ್ಮವಾಗಿ ಮಾಡುತ್ತಿದ್ದನು. ಮಾರ್ಗದಲ್ಲಿ ಬರುವವರ ಮಹಾತ್ಮರ ಸೇವಾ ಮತ್ತು ವಿಷ್ಣುಕಥಾಶ್ರವಣ—ಹೀಗೆ ಪುಣ್ಯಧಾಮನಿಗೆ ಎರಡು ದಾರಿಗಳಿದ್ದವು.

**ಏತಸ್ಮಿನ್ನಂತರೇ ಕಾಲೇ ಜ್ಞಾನಸಿಂಧುಧೃತವ್ರತೌ ॥ ೧೯ ॥**
**ಆಜಗ್ಮತುರುಭೌ ತೌ ತು ಪುಣ್ಯಧಾಮಗೃಹಂ ಪ್ರತಿ ।**
**ದಿವಾಕರಾಸ್ತಸಮಯೇ ಶ್ರಾಂತೌ ದೂರಪಥೇನ ತು ॥ ೨೦ ॥**

ಹೀಗಿರಲು ಒಂದು ದಿನ ಜ್ಞಾನಸಿಂಧು, ಧೃತವ್ರತರೆಂಬ ಇಬ್ಬರು ಬ್ರಾಹ್ಮಣರು ಸೂರ್ಯಾಸ್ತಮಯದ ವೇಳೆಗೆ ಪುಣ್ಯಧಾಮನ ಮನೆಗೆ ಬಂದರು. ಬಹಳ ದೂರ ನಡೆದಿದ್ದರಿಂದ ಅವರಿಗೆ ಆಯಾಸವಾಗಿತ್ತು.

**ಅಗಾತ್ಪುಣ್ಯಕಥಾಂ ಶ್ರುತ್ವಾ ಪುಣ್ಯಧಾಮಾಪಿ ಸ್ವಂ ಗೃಹಮ್ ।**
**ತದಾಪಶ್ಯತ್ ಮಹಾತ್ಮಾನೌ ಜ್ಞಾನಸಿಂಧುಧೃತವ್ರತೌ ॥ ೨೧ ॥**

ಶ್ರೀಹರಿಯ ಪುಣ್ಯಕಥೆಯನ್ನು ಶ್ರವಣಮಾಡಿದನಂತರ ಪುಣ್ಯಧಾಮನು ತನ್ನ ಮನೆಗೆ ಬಂದಾಗ ಅಲ್ಲಿಗೆ ಜ್ಞಾನಸಿಂಧು ಹಾಗೂ ಧೃತವ್ರತರು ಬಂದಿರುವುದನ್ನು ನೋಡಿದನು.

**ಸಂತೋಷಮತುಲಂ ಲೇಭೇ ಮೃತಃ ಪ್ರಾಣಾಗಮಾದಿವ ।**
**ತಯೋರ್ವವಂದೇ ಚರಣಾವುತ್ಪತನ್ ಸಂವದನ್ ಭ್ರಮನ್ ॥ ೨೨ ॥**

ಮೃತನಾದವನಿಗೆ ಪುನಃ ಪ್ರಾಣಬಂದರೆ ಹೇಗೆ ಸಂತೋಷವಾಗುವುದೋ ಹಾಗೆ ಪುಣ್ಯಧಾಮನು ತುಂಬ ಹರ್ಷದಿಂದ ಅವರಿಬ್ಬರಿಗೂ ನಮಸ್ಕರಿಸಿ, ಮಾತನಾಡಿಸಿ ಓಡಾಡಿದನು.

**ಸಂತೋಷಪುಲಕಾಂಗಶ್ಚ ತಥಾ ಗದ್ಗದಭಾಷಣಃ ।**
**ಪ್ರತ್ಯುತ್ಥಾಯ ಚ ನಿರ್ಗತ್ಯ ಪಾದೌ ಪ್ರಕ್ಷಾಲ್ಯ ವೈ ತಯೋಃ ॥ ೨೩ ॥**

ಆನಂದದಿಂದ ರೋಮಾಂಚನಗೊಂಡ ಪುಣ್ಯಧಾಮನು ಗದ್ಗದ ಧ್ವನಿಯಲ್ಲಿ ಮಾತನಾಡಿ, ಎದ್ದು, ಅವರಿಬ್ಬರಿಗೂ ಪಾದಪ್ರಕ್ಷಾಲನವನ್ನು ಮಾಡಿದನು.

**ತಜ್ಜಲಂ ಶಿರಸಾ ಧೃತ್ವಾ ಕೃತಕೃತ್ಯ ಇವಾಭವತ್ ।**
**ಸಂಪೂಜ್ಯ ಮಧುಪರ್ಕಾದ್ಯೈಃ ಯಥಾವಿಭವಮಂಜಸಾ ॥ ೨೪ ॥**

ಪಾದ ತೊಳೆದ ನೀರನ್ನು ತಲೆಯಮೇಲೆ ಪ್ರೋಕ್ಷಿಸಿಕೊಂಡು ಕೃತಕೃತ್ಯನಾದನು. ಮಧುಪರ್ಕಾದಿಗಳಿಂದ ಆ ಬ್ರಾಹ್ಮಣರಿಬ್ಬರನ್ನೂ ಸತ್ಕರಿಸಿದನು.

**ತೌ ದೃಷ್ಟ್ವಾ ತು ಭೋಜಯಿತ್ವಾಥ ಸೂಪವಿಷ್ಟೌ ಮಹಾಮತಿಃ ।**
**ತಯೋಃ ಪಪ್ರಚ್ಛ ಕುಶಲಂ ಪ್ರಸನ್ನೇನಾಂತರಾತ್ಮನಾ ॥ ೨೫ ॥**

ಅವರಿಗೆ ಭೋಜನಮಾಡಿಸಿ, ಸುಖಾಸನದಲ್ಲಿ ಕೂಡಿಸಿ ಪ್ರೇಮದಿಂದ ಅವರ ಕುಶಲಪ್ರಶ್ನೆ ಮಾಡಿದನು.

**ದಿಷ್ಟ್ಯಾ ಚ ವಾಂ ಮೇ ಸಂಗೋಽಭೂತ್ ಪಾವಿತಂ ಚ ಕುಲಂ ಮಮ ।**
**ಅದ್ಯ ನಃ ಪಿತರಸ್ತುಷ್ಟಾಃ ಮಾಧವೋಽಪಿ ಪ್ರಸಾದಿತಃ ॥ ೨೬ ॥**

"ನಿಮ್ಮಂತಹ ಸಜ್ಜನರ ಸಹವಾಸವು ಇಂದು ನನಗೆ ಆಗಿ, ನನ್ನ ಕುಲವು ಪವಿತ್ರವಾಯಿತು ; ಈ ದಿನ ನನ್ನ ಪಿತೃಗಳು ಸಂತುಷ್ಟರಾದರು ; ಶ್ರೀಹರಿಯ ಅನುಗ್ರಹವೂ ಆಯಿತು" ಎಂದು ನುಡಿದನು.

**ಬಹುಜನ್ಮಾರ್ಜಿತೈಃ ಪುಣ್ಯೈಃ ಮಹತಾಂ ಸಂಗತಿರ್ಭವೇತ್ ।**
**ದುರ್ಲಭಾಃ ಸಾಧವೋ ಲೋಕೇ ಸದಾ ವಿಷ್ಣು ಕಥಾರತಾಃ ॥ ೨೭ ॥**

**ಅಲಮೇತಾವತಾ ಪುಂಸಾಂ ಸರ್ವಾಘಾನಾಂ ನಿಕೃಂತನೇ ।**
**ಮಹತ್ಸಂಗೇನ ಚ ಸದಾ ಯೇನಾತ್ಮಾ ಸುಪ್ರಸೀದತಿ ॥ ೨೮ ॥**

ಅನೇಕ ಜನ್ಮಗಳಲ್ಲಿ ಮಾಡಿದ ಪುಣ್ಯದಿಂದ ಸಜ್ಜನರ ಸಹವಾಸವು ಲಭಿಸುತ್ತದೆ. ಯಾವಾಗಲೂ ಶ್ರೀಹರಿಯ ಕಥಾಶ್ರವಣದಲ್ಲಿಯೇ ಆಸಕ್ತರಾದ ಸಾಧುಗಳು ದುರ್ಲಭರೇ; ಜನರ ಸಮಸ್ತಪಾಪಗಳೂ ನಾಶವಾಗಲು ಇಷ್ಟು ಸಾಕು. ಮಹಾತ್ಮರ ದರ್ಶನ-ಸಹವಾಸದಿಂದ ಶ್ರೀಹರಿಯ ಅನುಗ್ರಹವೂ ದೊರೆಯುತ್ತದೆ.

**ಭಾರ್ಯಯಾ ವೀಜ್ಯಮಾನೇ ತು ಪಾದೌ ಸಂವಾಹ್ಯ ಸ್ವಾಂಕಯೋಃ ।**
**ಪೀಡಯಾಮಾಸ ಹೃಷ್ಟಾತ್ಮಾ ಯಾವಚ್ಛ್ರಮನಿವಾರಣಮ್ ॥ ೨೯ ॥**

ಪುಣ್ಯಧಾಮನ ಪತ್ನಿಯು ಅವರಿಬ್ಬರಿಗೂ ಬೀಸಣಿಗೆಯಿಂದ ಬೀಸುತ್ತಿದ್ದಾಗ, ಪುಣ್ಯಧಾಮನು ಆ ಅತಿಥಿಗಳ ಪಾದಗಳನ್ನು ತನ್ನ ತೊಡೆಯಮೇಲಿರಿಸಿಕೊಂಡು ಸಂತೋಷದಿಂದ ಒತ್ತುತ್ತಾ ಅವರ ಶ್ರಮವನ್ನು ಪರಿಹರಿಸಿದನು.

**ತಾವಪ್ಯಥೋಚತುಃ ಪುಣ್ಯಧಾಮಾನಂ ಮುನಿಪುಂಗವಮ್ ।**
**ಕಿಂ ವಾ ಕರೋಷಿ ಗ್ರಾಮೇಽಸ್ಮಿನ್ ಕಿಂ ಶೃಣೋಷಿ ನಿರಂತರಮ್ ॥ ೩೦ ॥**
**ದೂರೇ ಕಿಯತಿ ಸಾ ಗಂಗಾ ವರ್ತತೇಽತ್ಯಂತಪಾವಿನೀ ।**
**ಪೃಷ್ಟಸ್ತಾಭ್ಯಾಂ ಸ್ವವೃತ್ತಾಂತಂ ಪುಣ್ಯಧಾಮಾಪ್ಯಭಾಷತ ॥ ೩೧ ॥**

ಜ್ಞಾನಸಿಂಧು, ಧೃತವ್ರತರು ಪುಣ್ಯಧಾಮನನ್ನು ಕೇಳಿದರು "ಈ ಗ್ರಾಮದಲ್ಲಿ ನಿನ್ನ ಉದ್ಯೋಗವೇನು? ನಿತ್ಯವೂ ಏನನ್ನು ಶ್ರವಣಮಾಡುತ್ತೀಯೆ? ಲೋಕವನ್ನೇ ಪಾವನಗೊಳಿಸುವ ಗಂಗಾನದಿಯು ಇಲ್ಲಿಂದ ಎಷ್ಟು ದೂರವಿದೆ?" ಹೀಗೆ ಅವರಿಬ್ಬರೂ ಕೇಳಲು ಪುಣ್ಯಧಾಮನು ತನ್ನ ಸಮಾಚಾರವನ್ನು ಹೇಳಿದನು.

**ಶತಾನ್ಯಬ್ದಾನ್ಯತೀತಾನಿ ತಿಷ್ಠತೋ ನ್ಮೈ ಮಮಾಲಯೇ ।**
**ಬೃಹತ್ತಪಾ ದೀರ್ಘತಪಃ ಕೃತೇ ತತ್ರಾವಬೋಧನಮ್ ॥**
**ತಾವದಬ್ದಸ್ಥಿತಿಶ್ಚಕ್ರೇ ಕರ್ಮಣ್ಯಾಪಿ ಪರಿತ್ಯಜನ್ ॥ ೩೨ ॥**

ನಾನು ಈ ಗ್ರಾಮದಲ್ಲಿಯೇ ನೂರು ವರ್ಷಗಳಿಂದ ಇದ್ದೇನೆ. ಇಲ್ಲಿರುವ ಬೃಹತ್ತಪರೆಂಬುವರು ದೀರ್ಘತಪ ಎಂಬುವರಿಗೆ ನೂರು ವರ್ಷಗಳಿಂದ ತತ್ತ್ವೋಪದೇಶವನ್ನು ಮಾಡುತ್ತಿದ್ದಾರೆ; ಈ ಕಾರಣದಿಂದ ತಮ್ಮ ನಿತ್ಯಕರ್ಮಗಳನ್ನೂ ಸಂಕೋಚಮಾಡಿಕೊಂಡಿದ್ದಾರೆ.

*

**ಅಹಂ ವಿಷ್ಣುಕಥಾಲಾಪಲೋಲುಪಸ್ತತ್ಪ್ರಸಾದತಃ ।**
**ಶೃಣೋಮಿ ದೀರ್ಘತಪಸಾ ಸಾಕಂ ವರ್ಷಶತಂ ತ್ವಹಮ್ ॥**
**ದೂರೇ ಕಿಯತಿ ಸಾ ಗಂಗಾ ನ ಜಾನೇ ನ ಗತಂ ಮಯಾ ॥ ೩೩ ॥**

ಶ್ರೀಹರಿಯ ಅನುಗ್ರಹದಿಂದ ನನಗೆ ಅವನ ಕಥಾಶ್ರವಣದಲ್ಲಿ ತುಂಬ ಆಸಕ್ತಿ. ದೀರ್ಘತಪಸ್ಸನೆಂಬ ಬ್ರಾಹ್ಮಣನೊಡನೆ ನಾನೂ ಸಹ ನೂರು ವರ್ಷಗಳಿಂದ ಶ್ರೀಹರಿಕಥಾಶ್ರವಣ ಮಾಡುತ್ತಿದ್ದೇನೆ. ಗಂಗಾನದಿಯು ಇಲ್ಲಿಂದ ಎಷ್ಟು ದೂರದಲ್ಲಿದೆಯೋ ತಿಳಿಯದು. ನಾನು ಗಂಗಾಸ್ನಾನಕ್ಕೆ ಹೋಗಿಲ್ಲ.

**ಕದಾಪಿ ಮುನಿಶಾರ್ದೂಲೌ ಶ್ರುತಾ ಸಾ ಸಾರ್ಧಯೋಜನೇ ।**
**ತಿಷ್ಠತೀತಿ ಮಹಾಪುಣ್ಯಾ ಜನತಾಂ ವಾರ್ತಯಾ ಮಮ ॥ ೩೪ ॥**
**ದ್ವಯ್ಯೇವ ಮೇ ಗತಿಶ್ಚಾಸೀತ್ಸದಾ ವಿಷ್ಣುಕಥಾರತಿಃ ।**
**ಪಾಂಥಸತ್ಪುರುಷಸೇವಾ ಚ ನಾನ್ಯತ್ಕಿಂಚಿಚ್ಚ ರೋಚತೇ ॥ ೩೫ ॥**

ಬ್ರಾಹ್ಮಣವರ್ಯರೇ, ಜನರು ಹೇಳಿಕೊಳ್ಳುವುದನ್ನು ಕೇಳಿರುತ್ತೇನೆ. ಪುಣ್ಯಕರವಾದ ಗಂಗಾನದಿಯು ಇಲ್ಲಿಂದ ಒಂದೂವರೆ ಯೋಜನದಲ್ಲಿರುವುದಂತೆ. ನನಗೆ ಇಷ್ಟವಾದ ಕಾರ್ಯಗಳೆಂದರೆ ಎರಡು—ಶ್ರೀಹರಿ ಕಥಾಶ್ರವಣ ಮತ್ತು ಈ ಮಾರ್ಗದಲ್ಲಿ ಬರುವ ಸಜ್ಜನರ ಸೇವಾ, ಇವುಗಳನ್ನು ಬಿಟ್ಟರೆ ನನಗೆ ಬೇರೆ ಏನೂ ಬೇಕಾಗಿಲ್ಲ.

**ಇತಿ ತದ್ವಚನಂ ಶ್ರುತ್ವಾ ಜ್ಞಾನಸಿಂಧುಧೃತವ್ರತೌ ।**
**ಅನ್ಯೋನ್ಯಮೂಚತುಶ್ಚೈವಂ ನಿಂದಯಂತೌ ಮಹಾಮುನಿಮ್ ॥ ೩೬ ॥**

ಹೀಗೆ ಪುಣ್ಯಧಾಮನು ನುಡಿಯಲು ಅದನ್ನು ಕೇಳಿದ ಜ್ಞಾನಸಿಂಧು, ಧೃತವ್ರತರು ಪುಣ್ಯಧಾಮನನ್ನು ನಿಂದಿಸುತ್ತಾ ಪರಸ್ಪರವಾಗಿ ಮಾತನಾಡಿಕೊಂಡರು.

**ಪಾಪಸ್ಯಾಸ್ಯ ಗೃಹೇ ಚಾಸ್ಮಿನ್ ಆವಾಭ್ಯಾಂ ಭುಕ್ತಮಂಜಸಾ ।**
**ನಾನೇನ ಸದೃಶಃ ಪಾಪೀ ಯೇನ ಗಂಗಾ ನ ಸೇವಿತಾ ॥ ೩೭ ॥**
**ಗಂಗಾಗಂಗೇತಿ ಯೋ ಬ್ರೂಯಾತ್ ಯೋಜನಾನಾಂ ಶತೈರಪಿ ।**
**ಮುಚ್ಯತೇ ಸರ್ವಪಾಪೇಭ್ಯೋ ವಿಷ್ಣುಲೋಕಂ ಸ ಗಚ್ಛತಿ ॥ ೩೮ ॥**

ಈ ಪಾಪಿಯ ಮನೆಯಲ್ಲಿ ನಾವಿಬ್ಬರೂ ಇಂದು ಊಟಮಾಡಿದೆವು. ಗಂಗಾಸ್ನಾನ ಮಾಡದ ಇಂತಹ ವ್ಯಕ್ತಿಯ ಸದೃಶನಾದ ಪಾಪಿಯು ಬೇರೊಬ್ಬನಿಲ್ಲ. ನೂರು ಯೋಜನ ದೂರದಲ್ಲಿದ್ದರೂ ಸ್ನಾನಮಾಡುವಾಗ "ಗಂಗಾ, ಗಂಗಾ" ಎಂದು ಉಚ್ಚರಿಸಿದರೆ ಸಕಲ ಪಾಪಗಳೂ ನಿವಾರಣೆಯಾಗಿ ವಿಷ್ಣುಲೋಕಕ್ಕೆ ಹೋಗುತ್ತಾನೆ.

**ಕಥಂ ನ ಸೇವಿತಾ ಗಂಗಾ ತಾದೃಶೀ ಲೋಕಪಾವನೀ ।**
**ಶಾಪಂ ಕುತೋ ನ ದಾಸ್ಯಂತಿ ಪಿತರೋsಸ್ಯ ದುರಾತ್ಮನಃ ॥ ೩೯ ॥**

**ಕಥಂ ದೇವಾಶ್ಚ ತುಷ್ಯಂತಿ ಕಥಂ ವಾ ಮಧುಸೂದನಃ ।**
**ಯೋ ಗಂತುಮುತ್ಸಹೇದ್ವಾಪಿ ಗಂಗಾಂ ಲೋಕೈಕಪಾವನೀಮ್ ।**
**ಸ ಸರ್ವಕುಲಮುದ್ಧೃತ್ಯ ವಿಷ್ಣುಲೋಕೇ ಮಹೀಯತೇ ॥ ೪೦ ॥**

ಲೋಕವನ್ನೇ ಪಾವನಮಾಡುವ ಗಂಗೆಯನ್ನು ಈ ಪುಣ್ಯಧಾಮನು ಹೇಗೆ ಸೇವಿಸದೆ ಇದ್ದಾನೆ ? ಇಂತಹ ಪಾಪಿಗೆ ಇವನ ಪಿತೃಗಳು ಶಾಪವನ್ನೇಕೆ ಕೊಟ್ಟಿಲ್ಲ ? ದೇವತೆಗಳು ಇವನ ನಡತೆಯಿಂದ ಹೇಗೆ ಸಂತೋಷಪಡುತ್ತಾರೆ ? ಶ್ರೀಹರಿಯು ತಾನೇ ಹೇಗೆ ಪ್ರಸನ್ನನಾಗುತ್ತಾನೆ? ಲೋಕಪಾವನೆಯಾದ ಗಂಗಾಸ್ನಾನಕ್ಕಾಗಿ ಹೋಗಲು ಪ್ರಯತ್ನಿಸಿದರೂ ಸಾಕು, ಅವನ ಸರ್ವ ಕುಲಗಳೂ ಉದ್ಧೃತವಾಗಿ ಅವನು ಮೋಕ್ಷಕ್ಕೆ ತೆರಳುತ್ತಾನೆ.

**ಸನ್ನಿಧೌ ವಿದ್ಯಮಾನೋsಪಿ ಗಂಗಾಂ ಯಸ್ತು ನ ಸೇವತೇ ।**
**ಆತ್ಮಹಾ ಸ ತು ವಿಜ್ಞೇಯಃ ಸರ್ವಕರ್ಮಬಹಿಷ್ಕೃತಃ ॥ ೪೧ ॥**
**ಸನ್ನಿಧೌ ವಿದ್ಯಮಾನಸ್ತು ಗಂಗಾಸೇವಾಂ ನ ಚೇಚ್ಛತಿ ।**
**ಪಿತೃದೇವಮುನೀನಾಂ ಸ ಆಶಾಚ್ಛೇದೀ ಭವೇದ್ಧ್ರುವಮ್ ॥ ೪೨ ॥**

ಸಮೀಪದಲ್ಲಿಯೇ ಗಂಗಾನದಿ ಇದ್ದರೂ ಯಾರು ಸ್ನಾನಾದಿಗಳನ್ನು ಮಾಡುವುದಿಲ್ಲವೋ ಅವನು ಆತ್ಮಹತ್ಯ ಮಾಡಿಕೊಂಡಂತೆ ಆಗುತ್ತಾನೆ ; ಸರ್ವ ಸತ್ಕರ್ಮಗಳಿಂದಲೂ ದೂರ ; ಸಮೀಪದ ಗಂಗೆಯಲ್ಲಿ ಸ್ನಾನಮಾಡಲು ಯಾರಿಗೆ ಇಚ್ಛೆಯೇ ಇಲ್ಲವೋ ಅವನು ದೇವತೆಗಳ, ಪಿತೃಗಳ, ಋಷಿಗಳ ಆಸೆಯನ್ನು ಕತ್ತರಿಸಿದಂತೆಯೇ ಸರಿ.

**ಅಹೋ ಆಶ್ಚರ್ಯಮತ್ಯಂತಂ ಪುಣ್ಯಧಾಮ್ನಾಪಿ ನೋ ಕೃತಮ್ ।**
**ಗಂಗಾವಗಾಹನಂ ಕ್ವಾಪಿ ಕಸ್ಯೇದಂ ಕರ್ಮಣಃ ಫಲಮ್ ॥ ೪೩ ॥**

ಇದು ಆಶ್ಚರ್ಯ, ಇಷ್ಟು ಸಮೀಪದಲ್ಲಿದ್ದರೂ ಪುಣ್ಯಧಾಮನು ಗಂಗಾಸ್ನಾನವನ್ನು ಈವರೆಗೆ ಮಾಡದೇ ಇರುವುದು ಯಾವ ದುಷ್ಕರ್ಮದ ಫಲ !

**ವಿಲಪ್ಯ ತೌ ಬಹುವಿಧಂ ತಂ ವಿನಿಂದ್ಯ ಪುನಃ ಪುನಃ ।**
**ಅಜ್ಞಾನಾತ್ಪಾಪಿಸಂಗೇನ ಮಹತ್ಪಾಪಮುಪಾಗತಮ್ ॥ ೪೪ ॥**
**ಅನಿಚ್ಛಯಾಪಿ ಸಂಸ್ಪೃಷ್ಟೋ ದಹತ್ಯೇವ ಹಿ ಪಾವಕಃ ।**
**ಕಿಂ ದುಃಖಂ ನ ಕರೋತ್ಯೇಷ ದುಃಸಂಗಾ ಮಹತಾಮಪಿ ॥ ೪೫ ॥**

ಈ ರೀತಿಯಾಗಿ ಜ್ಞಾನಸಿಂಧು, ಧೃತವ್ರತರು ಪುಣ್ಯಧಾಮನನ್ನು ನಾನಾ ರೀತಿಯಿಂದ ಪದೇ ಪದೇ ನಿಂದಿಸಿ ಅಜ್ಞಾನವಶದಿಂದ ತಾವೇ ಪಾಪಕ್ಕೆ ಒಳಗಾದರು. ತಿಳಿಯದೇ ಮುಟ್ಟಿದರೂ ಬೆಂಕಿಯು ಸುಡುತ್ತದೆ. ದುರ್ಜನರ ಸಂಗವು ಮಹಾತ್ಮರಿಗೂ ಸಹ ದುಃಖದಾಯಕವೇ.

**ಇತ್ಯುಚ್ಚಾರ್ಯ ತತಃ ಶೀಘ್ರಂ ರಾತ್ರಾವೇವ ತು ತಾವುಭೌ ।**
**ಯಯತುಃ ನಿಂದಯಂತೌ ತಂ ತಸ್ಮಿನ್ ಗ್ರಾಮೇ ಸ್ಥಲಾಂತರಮ್ ॥೪೬॥**

ಹೀಗೆಂದು ಅನ್ನುತ್ತಾ ಶೀಘ್ರವಾಗಿ ಆ ರಾತ್ರಿಯಲ್ಲಿಯೇ ಅವರಿಬ್ಬರೂ ಪುಣ್ಯಧಾಮನನ್ನು ನಿಂದಿಸುತ್ತಾ ಅದೇ ಗ್ರಾಮದಲ್ಲಿ ಬೇರೊಂದು ಸ್ಥಳಕ್ಕೆ ಹೊರಟುಹೋದರು.

**ಪ್ರಾತರ್ಗಂಗಾಸಮೀಪಂ ಚ ಜಗ್ಮತುಃ ಶೀಘ್ರಗೌ ಮುದಾ ।**
**ಆರಾತ್ಪ್ರಣೇಮತುರ್ಗಂಗಾಂ ಪ್ರಸನ್ನೇನಾಂತರಾತ್ಮನಾ ॥**
**ಆಪ್ಯ ಗಂಗಾತಟಂ ಪಶ್ಚಾನ್ನಾಂಭೋ ದದೃಶತುಶ್ಚ ತೌ ॥ ೪೭ ॥**

ಪ್ರಾತಃಕಾಲದಲ್ಲಿ ವೇಗದಿಂದ ನಡೆದು ಗಂಗಾನದಿಯ ಸಮೀಪಕ್ಕೆ ಬಂದು ಸಂತೋಷದಿಂದ ನಮಸ್ಕರಿಸಿ ದಡಕ್ಕೆ ಬಂದಾಗ ಅವರಿಬ್ಬರಿಗೂ ಗಂಗೆಯ ನೀರೇ ಕಾಣಲಿಲ್ಲ.

**ಸರ್ವೇsಪಿ ಚಾವಗಾಹಂತಿ ನೈತಯೋರ್ಜಲದರ್ಶನಮ್ ।**
**ಅಭೂತ್ ಕ್ವಾಪಿ ತತಶ್ಚಾಪಿ ಗಂಗಾಯಾಮಟತೋರಪಿ ॥ ೪೮ ॥**

ಎಲ್ಲ ಜನರೂ ಗಂಗೆಯಲ್ಲಿ ಸ್ನಾನಮಾಡುತ್ತಿದ್ದರೂ, ಗಂಗಾನದಿಯ ದಡದಲ್ಲಿ ಅತ್ತಿತ್ತ ತಿರುಗಾಡಿದರೂ ಸಹ ಇವರಿಬ್ಬರಿಗೆ ಮಾತ್ರ ನೀರು ಕಾಣಲಿಲ್ಲ.

**ಆಗಂಗಾ ಸಾಗರಾಂತಂ ಚ ಕಾಶೀಮಾರಭ್ಯ ತೌ ಗತೌ ।**
**ಅಪಿ ಗೋಷ್ಪದಮಾತ್ರಂ ವಾ ನ ಲಬ್ಧಂ ಜಲಮೇತಯೋಃ ॥ ೪೯ ॥**

ಗಂಗೆಯು ಉತ್ಪನ್ನವಾಗುವ ಸ್ಥಳದಿಂದ ಕಾಶಿಯನ್ನೂ ಸೇರಿಸಿ ಸಮುದ್ರದ ಪರ್ಯಂತ ಹೋದರೂ ಸಹ ಇವರಿಬ್ಬರಿಗೆ ಗಂಗೆಯ ನೀರು ಕಾಣಲಿಲ್ಲ.

**ಸ್ವೈರಂ ಸರ್ವೇsವಗಾಹಂತಿ ತಿಷ್ಠಂತ್ಯತ್ರ ಸದಾ ಜನಾಃ ।**
**ತಥಾಪಿ ನೈತಯೋಶ್ಚಾಸೀಜ್ಜಲಂ ಸರ್ಷಪಮಾತ್ರಕಮ್ ॥ ೫೦ ॥**

ಅನೇಕ ಜನರು ಸ್ನಾನವನ್ನು ಮಾಡುತ್ತಿದ್ದರೂ, ಬಹಳ ಮಂದಿ ಸ್ವೇಚ್ಛಾನುಸಾರವಾಗಿ ನದಿಯಲ್ಲಿ ಓಡಾಡುತ್ತಿದ್ದರೂ ಇವರಿಬ್ಬರಿಗೆ ಮಾತ್ರ ಗಂಗೆಯ ನೀರು ಸಾಸುವೆ ಕಾಳಿನಷ್ಟು ಸಹ ಸಿಕ್ಕಲಿಲ್ಲ.

**ಪಶ್ಚಾದ್ದುಃಖೇನ ಮಹತಾ ಪ್ರಾಪ್ತೌ ಹಿಮವದುತ್ತರಮ್ ।**
**ನಾಪಶ್ಯತಾಂ ಚ ತತ್ರಾಪಿ ಪಯಃಕಣಮಥಾಪಿ ವಾ ॥ ೫೧ ॥**

ತುಂಬ ದುಃಖಿತರಾದ ಅವರು ಹಿಮಾಚಲ ಮೇಲ್ಭಾಗಕ್ಕೆ ಉತ್ತರದಿಕ್ಕಿನಲ್ಲಿ ಬಂದು ನೋಡಿದರೂ ಅಲ್ಲಿಯೂ ಸಹ ಗಂಗೆಯ ಒಂದು ಹನಿ ನೀರೂ ಕಾಣಿಸಲಿಲ್ಲ.

**ಪುನರ್ಯಾತೌ ಸಾಗರಾಂತಂ ನ ಪ್ರಾಪ್ತಂ ಕಿಂಚಿದಂಬು ವೈ ।**
**ಕಾಶೀಮೇವ ಪುನಃ ಪ್ರಾಪ್ಯ ದುಃಖಾಕುಲಿತಮಾನಸೌ ॥ ೫೨ ॥**

ಪುನಃ ಸಾಗರದವರೆಗೂ ಹೋದರೂ ನೀರು ಕಾಣಲಿಲ್ಲ. ಅತ್ಯಂತ ದುಃಖದಿಂದ ಪುನಃ ಕಾಶಿಗೆ ಬಂದರು.

**ಅಸ್ತೌಷ್ಟಾತಾಂ ತತೋ ಗಂಗಾಂ ಸ್ತೋತ್ರೈರ್ನಾನಾವಿಧೈರಪಿ ।**
**ರುದ್ರೋऽಪಿ ಭಗವಾನಂಬ ಯಾಂ ಕೃತ್ವಾ ವೈ ಶಿರೋಮಣಿಮ್ ॥ ೫೩ ॥**
**ಕೃಷ್ಣಾಂಗುಷ್ಠಸಮುದ್ಭೂತಾಂ ಧೃತ್ವಾ ಲೋಕೇ ಶಿವೋऽಭವತ್ ।**
**ಸಾಗರಾ ಅಪಿ ಭೂಪಾಲಾಃ ತ್ವತ್ತ ಆಪುಃ ಶುಭಾಂ ಗತಿಮ್ ॥ ೫೪ ॥**

ನಂತರ ಅವರಿಬ್ಬರೂ ಗಂಗೆಯನ್ನು ನಾನಾವಿಧದಿಂದ ಸ್ತುತಿಸಿದರು— ತಾಯಿಯೇ, ಶ್ರೀಹರಿಯ ಅಂಗುಷ್ಠದಿಂದ ಉತ್ಪನ್ನಳಾದ ನಿನ್ನನ್ನು ರುದ್ರದೇವರು ತಮ್ಮ ಶಿರಸ್ಸಿನಲ್ಲಿ ಧರಿಸಿ ಲೋಕದಲ್ಲಿ "ಶಿವ"ನೆಂದೆನಿಸಿದರು. ಸಗರರಾಜನ ವಂಶದವರೆಲ್ಲ ನಿನ್ನ ಅನುಗ್ರಹದಿಂದ ಸದ್ಗತಿಯನ್ನು ಪಡೆದರು.

**ನಮಸ್ತೇ ಸರ್ವಕಲ್ಯಾಣಿ ನಮಸ್ತೇ ಲೋಕಪಾವನಿ ।**
**ಸುಭಗೇ ತ್ರಾಹಿ ನೌ ಪಾಪೌ ಕೃಪಾಲುನಖಸಂಭವೇ ॥ ೫೫ ॥**

ಸರ್ವರಿಗೂ ಮಂಗಳವನ್ನೀಯುವ ನಿನಗೆ ನಮಸ್ಕಾರ. ಕೃಪಾಸಾಗರನಾದ ಶ್ರೀಹರಿಯ ನಖಗಳಿಂದ ಉತ್ಪನ್ನಳಾದ ಲೋಕವನ್ನೇ ಪವಿತ್ರೀಕರಿಸುವ ನಿನಗೆ ನಮಸ್ಕಾರ. ಪಾಪಿಷ್ಠರಾದ ನಮ್ಮಿಬ್ಬರನ್ನೂ ರಕ್ಷಿಸು.

**ಉದ್ದಿಶ್ಯ ತ್ವಾಂ ಮಹೋತ್ಸಾಹೌ ತ್ವಚ್ಚಿತ್ತೌ ತ್ವತ್ಪರಾಯಣೌ ।**
**ಕೃತಾರ್ಥತಾಂ ಮನ್ಯಮಾನೌ ದೂರಾದಾವಾಂ ಸಮಾಗತೌ ॥ ೫೬ ॥**

ಉತ್ಸಾಹಭರಿತರಾದ ನಾವು ನಿನ್ನಲ್ಲಿಯೇ ಮನಸ್ಸನ್ನಿಟ್ಟು ಕೃತಾರ್ಥರಾಗಬೇಕೆಂಬ ಉದ್ದೇಶದಿಂದ ದೂರದಿಂದ ಇಲ್ಲಿಗೆ ಬಂದಿದ್ದೇವೆ.

**ತ್ವಂ ಮಾತಾ ಸರ್ವಲೋಕಾನಾಂ ತ್ವಮೇವ ಜಗತಾಂ ಗತಿಃ ।**
**ಯಥಾ ತ್ವಜ್ಜನಕೋ ವಿಷ್ಣುಸ್ತಥಾ ತ್ವಂ ಜನರಕ್ಷಿಕಾ ॥ ೫೭ ॥**

ನೀನು ಸರ್ವ ಜಗತ್ತಿಗೆ ತಾಯಿ, ನೀನೇ ಎಲ್ಲರಿಗೂ ಸದ್ಗತಿಪ್ರದಳು, ನಿನ್ನ ತಂದೆಯಾದ ವಿಷ್ಣುವು ಹೇಗೆ ಲೋಕರಕ್ಷಕನೋ, ನೀನೂ ಸಹ ಹಾಗೆಯೇ ಜನರಕ್ಷಕಳು.

**ಅಪರಾಧಕರಂ ಮಾತಾ ಶಿಶುಂ ನಿರ್ಭರ್ತ್ಸ್ಯ ವೈ ಪುನಃ ।**
**ಕಾಮಾನಿಷ್ಟಾನ್ ದದಾತ್ಯೇವ ನ ಹಿತಂ ಸಾ ಪರಿತ್ಯಜೇತ್ ॥ ೫೮ ॥**

ಅಪರಾಧಮಾಡಿದ ಮಗುವನ್ನು ತಾಯಿಯು ಬೈದು, ಮಗುವಿಗೆ ಇಷ್ಟವಾದುದನ್ನು ನೀಡುವಳೇ ವಿನಹ ಮಗುವಿನ ಹಿತವನ್ನು ಬಿಡುವುದಿಲ್ಲ.

**ತಸ್ಮಾದಿದಂ ಜಗದ್ಧಾತ್ರಿ ಯತ್ಕೃತಂ ತಚ್ಚ ಕ್ಷಮ್ಯತಾಮ್ ।**
**ಇತಿ ತಾಭ್ಯಾಂ ಸ್ತುತಾ ಗಂಗಾ ಪ್ರತ್ಯಕ್ಷಂ ಸಮಜಾಯತ ॥ ೫೯ ॥**

ಜಗತ್ತಿಗೆ ಧಾರಕಳಾದ ನೀನು ನಮ್ಮಿಬ್ಬರ ಅಪರಾಧವನ್ನು ಕ್ಷಮಿಸು. ಹೀಗೆ ಸ್ತುತಿಸಲ್ಪಟ್ಟ ಗಂಗೆಯು ಅವರಿಗೆ ದರ್ಶನ ಕೊಟ್ಟಳು.

**ಸ್ತನಭಾರನಮನ್ಮಧ್ಯಾ ರಣತ್ಕಂಕಣನಿಃಸ್ವನಾ ।**
**ಪುರ್ಣೇಂದುವದನಾ ಪುಣ್ಯಾ ವರದಾಭಯಪಾಣಿನಾ ॥ ೬೦ ॥**

ತನ್ನ ಸ್ತನಗಳ ಭಾರದಿಂದ ಸೊಂಟವು ಸ್ವಲ್ಪ ಬಗ್ಗಿದ, ಕೈಗಳಲ್ಲಿದ್ದ ಕಂಕಣಗಳ ಶಬ್ದದಿಂದ, ಹುಣ್ಣಿಮೆಯ ಚಂದ್ರನಂತೆ ಕಾಂತಿಯುಕ್ತವಾದ ಮುಖದಿಂದ, ಅಭಯಮುದ್ರಿಕೆಯನ್ನು ತೋರಿಸುವ ಕೈಯಿಂದ, ಪುಣ್ಯಕರವಾದ ಸೌಂದರ್ಯದ ಮೂರ್ತಿಯಾದ ಗಂಗೆಯು ಪ್ರತ್ಯಕ್ಷಳಾದಳು.

[**ವಿಶೇಷಾಂಶ :** ಗಂಗಾನದಿಯ ನೀರು—ಎಲ್ಲ ನದಿಗಳ ನೀರಿನಂತೆ—ಜಡ. ಅಂತಹ ನದೀನೀರಿನಿಂದ ಭಿನ್ನವಾದ ನದಿಯ ಅಭಿಮಾನಿ ದೇವತೆ ಗಂಗಾದೇವಿ– ಆ ದೇವತೆಯ ರೂಪವು ಸೌಂದರ್ಯರಾಶಿ. ಅದರ ವರ್ಣನೆಯನ್ನು ಶ್ರೀ ವಾದಿರಾಜರು "ತೀರ್ಥಪ್ರಬಂಧ" ಗ್ರಂಥದಲ್ಲಿ ಹೃದಯಂಗಮವಾಗಿ ಮಾಡಿದ್ದಾರೆ. ಈ ದೇವತೆಯು ಪ್ರತ್ಯಕ್ಷಳಾದಳೆಂದು ಅಭಿಪ್ರಾಯ.]

**ತಾಂ ದೃಷ್ಟ್ವಾ ಚಕ್ರತುರ್ದಂಡಪ್ರಣಾಮಂ ತೌ ಮಹಾಮತೀ ।**
**ದುಃಖಾದ್ಬಾಷ್ಪನಿರುದ್ಧಾಕ್ಷೌ ತಥಾ ಗದ್ಗದಭಾಷಿಣೌ ॥ ೬೧ ॥**

ಆ ದೇವಿಯನ್ನು ನೋಡಿ ಅವರಿಬ್ಬರೂ ದುಃಖಾಶ್ರುಗಳಿಂದ ಯುಕ್ತರಾಗಿ ಗದ್ಗದ ಕಂಠದಿಂದ ಮಾತನಾಡುತ್ತ ಸಾಷ್ಟಾಂಗನಮಸ್ಕಾರ ಮಾಡಿದರು.

**ಉವಾಚ ಸಸ್ಮಿತಂ ಗಂಗಾ ಮೇಘಗಂಭೀರಯಾ ಗಿರಾ ।**
**ಭವದ್ಭ್ಯಾಂ ನಿಂದಿತೋ ಯಸ್ಮಾತ್ ಪುಣ್ಯಧಾಮಾ ಮಹಾಮತಿಃ ॥ ೬೨ ॥**

**ಆಕಾಂಕ್ಷಮಾಣಾ ಯತ್ಪಾದರೇಣುಂ ತಿಷ್ಠಾಮ್ಯಹರ್ನಿಶಮ್ ।**
**ಯತ್ರ ವಿಷ್ಣುಕಥಾ ಲೋಕೇ ಮಾಧವಶ್ಚ ತದಾಶ್ರಯಃ ॥ ೬೩ ॥**

ಮಂದಸ್ಮಿತಳಾದ ಗಂಗೆಯು ಅವರಿಬ್ಬರನ್ನೂ ಕುರಿತು ಮೇಘದಂತೆ ಗಂಭೀರವಾದ ವಾಣಿಯಿಂದ ಹೀಗೆ ನುಡಿದಳು: ಯಾರ ಪಾದರಜಸ್ಸನ್ನು ನಾನು ಅಪೇಕ್ಷಿಸುತ್ತಾ ಇರುವೆನೋ ಅಂತಹ ಮಹಾತ್ಮನಾದ ಪುಣ್ಯಧಾಮನನ್ನು ನೀವು ನಿಂದಿಸಿರುತ್ತೀರಿ. ಲೋಕದಲ್ಲಿ ಎಲ್ಲಿ ವಿಷ್ಣುವಿನ ಕಥಾಪ್ರಸಂಗವು ನಡೆಯುತ್ತದೆಯೋ ಅಲ್ಲಿ ಭಕ್ತರ ಅಧೀನನೆಂದೆನಿಸಿ ಶ್ರೀಹರಿಯು ಸನ್ನಿಹಿತನಾಗಿರುತ್ತಾನೆ.

**ತತ್ರ ತೀರ್ಥಾನಿ ಸರ್ವಾಣಿ ನಾತ್ರ ಕಾರ್ಯಾ ವಿಚಾರಣಾ ।**
**ವಿಧಿರ್ವಿಷ್ಣುಕಥಾಲಾಪೋ ನಿಷೇಧಸ್ತಸ್ಯ ವಿಸ್ಮೃತಿಃ ॥ ೬೪ ॥**

ಆ ಸ್ಥಳದಲ್ಲಿ ಸಮಸ್ತ ತೀರ್ಥಾಭಿಮಾನಿದೇವತೆಗಳೂ ಇರುತ್ತಾರೆ, ಸಂಶಯವಿಲ್ಲ. ನಿತ್ಯದಲ್ಲಿಯೂ ವಿಷ್ಣುಕಥಾಶ್ರವಣವೇ ವಿಧಿ ; ಅದನ್ನು ಮರೆಯುವುದೇ ನಿಷೇಧ.

[**ವಿಶೇಷಾಂಶ :** ಸ್ಮರ್ತವ್ಯಃ ಸತತಂ ವಿಷ್ಣುಃ ವಿಸ್ಮರ್ತವ್ಯೋ ನ ಜಾತುಚಿತ್ ।
ಸರ್ವೇ ವಿಧಿನಿಷೇಧಾ ಸ್ಯುಃ ಏತಯೋರೇವ ಕಿಂಕರಾಃ ॥
—ಸದಾಚಾರಸ್ಮೃತಿ

ಸಂತತವಾಗಿ ವಿಷ್ಣುವನ್ನು ಸ್ಮರಣೆಮಾಡುತ್ತಿರಬೇಕು. ಒಂದು ಕ್ಷಣವೂ ಸಹ ಮರೆಯಬಾರದು. ಎಲ್ಲ ಶಾಸ್ತ್ರೋಕ್ತವಾದ ವಿಧಿ ನಿಷೇಧಗಳು ಶ್ರೀಹರಿಯ ಸ್ಮರಣೆ-ವಿಸ್ಮರಣೆಯನ್ನು ಅನುಸರಿಸುತ್ತವೆ.]

**ವಿಧಯಶ್ಚ ನಿಷೇಧಾಶ್ಚ ತಯೋರೇವ ಹಿ ಕಿಂಕರಾಃ ।**
**ಬ್ರಹ್ಮಹತ್ಯಾಸಹಸ್ರಸ್ಯ ಪಾಪಂ ಶಾಮ್ಯೇತ್ಕಥಂಚನ ॥ ೬೫ ॥**

**ನಿಂದನಾದ್ವಿಷ್ಣುಭಕ್ತಾನಾಂ ಜನಾನಾಂ ಪಾಪಕಾರಿಣಾಮ್ ।**
**ಪಾಪಂ ನ ನಶ್ಯತೇ ತಚ್ಚ ಕುಲಕೋಟಿಶತೈರಪಿ ॥ ೬೬ ॥**

ವಿಧಿಗಳೂ, ನಿಷೇಧಗಳೂ ಶ್ರೀವಿಷ್ಣುವಿನ ಸ್ಮರಣೆ ಮತ್ತು ವಿಸ್ಮರಣೆಗಳ ಸೇವಕರಂತೆ ಇವೆ. ಸಾವಿರ ಬ್ರಹ್ಮಹತ್ಯದ ಪಾಪವನ್ನು ಯಾವುದಾದರೂ ಬಗೆಯಿಂದ ಪರಿಹರಿಸಿಕೊಳ್ಳಬಹುದು. ಆದರೆ ಶ್ರೀವಿಷ್ಣುಭಕ್ತರನ್ನು ನಿಂದಿಸಿರುವ ಜನರ ಮಹಾಪಾಪವು ನೂರು ಕೋಟಿ ಜನ್ಮಗಳಾದರೂ ಸಹ ಪರಿಹಾರವಾಗುವುದಿಲ್ಲ.

**ಅಪಿ ಪಾಪಸಹಸ್ರಸ್ಯ ನಿಷ್ಕೃತಿಸ್ತು ಭವಿಷ್ಯತಿ ।**
**ವಿಷ್ಣೋಃ ವಿಷ್ಣುಕಥಾಯಾಶ್ಚ ತದ್ಭಕ್ತಾನಾಂ ಚ ನಿಂದಯಾ ॥ ೬೭ ॥**

**ಯತ್ಪಾಪಂ ತಚ್ಚ ಕೇನಾಪಿ ಕ್ಷೀಯತೇ ನೈವ ಸರ್ವಶಃ ।**
**ಯಸ್ತು ವಿಷ್ಣುಕಥಾಲಾಪಪರೋ ನಿತ್ಯಂ ಮಹಾಮತಿಃ ॥ ೬೮ ॥**

**ಕಿಂ ವಾ ನಾನುಷ್ಠಿತಂ ತೇನ ತೇನ ಸರ್ವಮನುಷ್ಠಿತಮ್ ।**
**ಅಪರಾಧಸಹಸ್ರಂ ವಾ ಸ್ವಸ್ಯಾಂಗಚ್ಛೇದನಮೇವ ವಾ ॥ ೬೯ ॥**

**ಕ್ಷಮತೇ ಭಗವಾನ್ ವಿಷ್ಣುರ್ಯೇನಕೇನಾಪಿ ಕರ್ಮಣಾ ।**
**ಭಕ್ತಾವಮಾನಂ ಕ್ಷಮತೇ ನೈವ ಕ್ವಾಪಿ ಕಥಂಚನ ॥ ೭೦ ॥**

ಸಹಸ್ರಾರು ಪಾಪಗಳನ್ನು ಮಾಡಿದರೂ ಪ್ರಾಯಶ್ಚಿತ್ತದಿಂದ ನಾಶವಾಗಬಹುದು. ಆದರೆ ವಿಷ್ಣುವಿನನ್ನು, ವಿಷ್ಣುವಿನ ಲೀಲಾವತಾರ ಕಥೆಗಳನ್ನು, ಅವನ ಭಕ್ತರನ್ನು ನಿಂದಿಸಿದರೆ ಬರುವ ಪಾಪವು ಏನು ಮಾಡಿದರೂ ಪೂರ್ಣವಾಗಿ ನಾಶವಾಗುವುದಿಲ್ಲ. ಯಾರು ಶ್ರೀಹರಿಯ ಕಥೆಗಳನ್ನು ನಿತ್ಯದಲ್ಲಿಯೂ ಶ್ರವಣ ಮಾಡುತ್ತಿರುವನೋ ಅವನು ಅನುಷ್ಠಾನ ಮಾಡದೇ ಇರುವ ಕರ್ಮ ಯಾವುದು? ಅವನು ಸಕಲಸತ್ಕರ್ಮಗಳನ್ನು ಆಚರಿಸಿದಂತೆಯೇ. ಸಾವಿರ ಪಾಪಗಳನ್ನು ಮಾಡಿರಲಿ, ತನ್ನ ಅವಯವಗಳನ್ನೇ ಕತ್ತರಿಸಿಕೊಂಡಿದ್ದರೂ, ಎಂತಹ ಕರ್ಮಗಳನ್ನು ಆಚರಿಸಿದ್ದರೂ ಷಡ್ಗುಣೈಶ್ವರ್ಯಪೂರ್ಣನಾದ ವಿಷ್ಣುವು ಕ್ಷಮಿಸುತ್ತಾನೆ. ಆದರೆ ತನ್ನ ಭಕ್ತರಿಗೆ ಅವಮಾನಮಾಡಿದ ಪಾಪವನ್ನು ಎಂದಿಗೂ ಕ್ಷಮಿಸುವುದಿಲ್ಲ.

**ಕಥಂಚಿದ್ರಮಣೀಂ ತ್ಯಕ್ತುಂ ವಿಷ್ಣುರುತ್ಸಹತೇ ಕ್ವಚಿತ್ ।**
**ತ್ಯಕ್ತುಮುತ್ಸಹತೇ ಕ್ವಾಪಿ ನ ಭಕ್ತಾನ್ ಭಕ್ತವತ್ಸಲಃ ॥ ೭೧ ॥**

ತನ್ನ ಪತ್ನಿಯಾದ ಮಹಾಲಕ್ಷ್ಮಿಯನ್ನು ಶ್ರೀವಿಷ್ಣುವು ಒಂದು ವೇಳೆ ತ್ಯಜಿಸಿದರೂ ತ್ಯಜಿಸಬಹುದು. ಆದರೆ ಭಕ್ತವತ್ಸಲನಾದ ಅವನು ತನ್ನ ಭಕ್ತರನ್ನು ಎಂದಿಗೂ ಕೈಬಿಡುವುದಿಲ್ಲ.

[**ವಿಶೇಷಾಂಶ :** ಕೌಂತೇಯ ಪ್ರತಿಜಾನೀಹಿ ನ ಮೇ ಭಕ್ತಃಪ್ರಣಶ್ಯತಿ । —ಗೀತಾ ಅರ್ಜುನನೇ, ನನ್ನ ಭಕ್ತನು ಎಂದಿಗೂ ನರಕಾದ್ಯನರ್ಥಗಳನ್ನು ಹೊಂದುವುದಿಲ್ಲ, ಪ್ರತಿಜ್ಞೆಮಾಡು.]

**ತಸ್ಮಾತ್ ಪ್ರಸಾದ್ಯ ತಂ ವಿಪ್ರಂ ಪುಣ್ಯಧಾಮಾನಮಾದರಾತ್ ।**
**ತಾವನ್ನಾಹಂ ಪ್ರಸನ್ನಾಸ್ಮಿ ವಿಷ್ಣೋರಾಜ್ಞಾಂ ಕರಿಷ್ಯತೀ ॥ ೭೨ ॥**

ಆದುದರಿಂದ ನೀವಿಬ್ಬರೂ ಪುಣ್ಯಧಾಮನನ್ನು ಸಂತೋಷಪಡಿಸುವ ತನಕ ವಿಷ್ಣುವಿನ ಆಜ್ಞಾಧಾರಕಳಾದ ನಾನು ನಿಮ್ಮಮೇಲೆ ಅನುಗ್ರಹಮಾಡುವುದಿಲ್ಲ.

**ಪ್ರತೀಪಕಾರಿಣೋ ವಿಷ್ಣೋಃ ತದ್ಭಕ್ತಾನಾಂ ವಿಶೇಷತಃ ।**
**ನ ಗೋಪನಸಮರ್ಥಾಃ ಸ್ಯುರ್ದೇವಾ ಬ್ರಹ್ಮಪುರಃಸರಾಃ ॥**

**ಪಶ್ಚಾದಾಗಚ್ಛತಂ ಶೀಘ್ರಂ ದದಾಮೀಷ್ಟಾನ್ ಮನೋರಥಾನ್ ॥ ೭೩ ॥**

ವಿಷ್ಣುವನ್ನು ದ್ವೇಷಮಾಡುವವರನ್ನೂ, ವಿಶೇಷವಾಗಿ ಅವನ ಭಕ್ತರನ್ನು ನಿಂದಿಸುವವರನ್ನೂ ಬ್ರಹ್ಮಾದಿ ದೇವತೆಗಳೂ ಸಹ ರಕ್ಷಿಸಲಾರರು. ನೀವು ಕೂಡಲೇ ಪುಣ್ಯಧಾಮನಲ್ಲಿಗೆ ಹೋಗಿ ಅವನನ್ನು ಪ್ರಸನ್ನೀಕರಿಸಿಕೊಂಡು ಬನ್ನಿ; ನಿಮ್ಮ ಇಷ್ಟಾರ್ಥಗಳನ್ನೆಲ್ಲ ನೀಡುವೆನು.

**ತೌ ಹಿ ಸಂಪ್ರೇಷಿತೌ ದೇವ್ಯಾ ಸಾಧ್ವಸಾನ್ಮುನಿಪುಂಗವೌ ।**
**ಗ್ರಾಮಂ ಸತ್ಯವ್ರತಂ ಪ್ರಾಪ್ತೌ ಪ್ರಾರ್ಥಯಾಮಾಸತುರ್ದ್ವಿಜಮ್ ॥ ೭೪ ॥**

ಗಂಗಾದೇವಿಯಿಂದ ಕಳಿಸಲ್ಪಟ್ಟ ಆ ಇಬ್ಬರೂ ಸತ್ಯವ್ರತ ಎಂಬ ಗ್ರಾಮಕ್ಕೆ ಬಂದು ಪುಣ್ಯಧಾಮನನ್ನು ಪ್ರಾರ್ಥಿಸಿದರು.

**ದೃಷ್ಟಂ ಕಥಾಯಾ ಮಾಹಾತ್ಮ್ಯಂ ದೃಷ್ಟಂ ಭಾಗವತಸ್ಯ ಚ ।**
**ವೃಥಾ ಪಂಡಿತಮಾನಿಭ್ಯಾಂ ನಿಂದಿತಸ್ತ್ವಂ ಮಹಾಮತೇ ॥ ೭೫ ॥**

ಶ್ರೀಹರಿಯ ಕಥಾಲಾಪದ ಮಾಹಾತ್ಮ್ಯೆಯನ್ನೂ ಭಾಗವತರ ಮಾಹಾತ್ಮ್ಯೆಯನ್ನೂ ತಿಳಿದುಕೊಂಡೆವು. ಪಂಡಿತರೆಂಬ ದುರಹಂಕಾರಯುಕ್ತರಾದ ನಮ್ಮಿಬ್ಬರಿಂದಲೂ ಮಹಾತ್ಮನಾದ ನೀನು ನಿಂದಿತನಾದೆ.

**ಕ್ಷಮಸ್ವ ಕೃಪಯಾ ಬ್ರಹ್ಮನ್ ಕೃಪಾಂ ಕುರು ಕೃಪಾನಿಧೇ ।**
**ತ್ವದವಜ್ಞಾಪ್ರಾಪ್ತದಂಡೌ ಗಂಗಯಾ ಚ ಕೃಪಾಲಯಾ ॥ ೭೬ ॥**

ದಯಾಶೀಲನೇ, ಕೃಪೆಮಾಡಿ ನಮ್ಮನ್ನು ಕ್ಷಮಿಸು. ನಿನ್ನನ್ನು ಅವಮಾನಗೊಳಿಸಿದ ನಾವು ಗಂಗಾದೇವಿಯಿಂದ ಆಜ್ಞಪ್ತರಾಗಿ ಬಂದಿದ್ದೇವೆ.

**ಪುಣ್ಯಧಾಮಾ ತತಸ್ತಾಭ್ಯಾಂ ಶ್ರುತಂ ಸ್ವಗುರವೇಽಬ್ರವೀತ್ ।**
**ಬೃಹತ್ತಪಾಸ್ತು ತತ್ ಶ್ರುತ್ವಾ ಜ್ಞಾನಸಿಂಧುರ್ಧೃತವ್ರತೌ ॥ ೭೭ ॥**
**ಉವಾಚ ಪರಯಾ ಪ್ರೀತ್ಯಾ ವಯಂ ವರ್ಷದ್ವಯೋತ್ತರೇ ।**
**ಸಮಾಪ್ಯ ಸಕಲಾಂ ವಿದ್ಯಾಮಾಗಚ್ಛಾಮಸ್ತತಃಪರಮ್ ॥ ೭೮ ॥**
**ಗಂಗಾಂ ವಿಷ್ಣುಪದೋದ್ಭೂತಾಂ ಜಾಹ್ನವೀಂ ಭುವನೇಶ್ವರೀಮ್ ।**
**ತಾವದ್ಭವಂತೌ ವಸತಾಂ ಗಂಗಾತೀರೇ ಶುಭಪ್ರದೇ ॥ ೭೯ ॥**

ಅವನು ಹೇಳಿದ ವಿಷಯಗಳನ್ನು ಪುಣ್ಯಧಾಮನು ತನ್ನ ಗುರುವಾದ ಬೃಹತ್ತಪನಿಗೆ ತಿಳಿಸಿದನು. ಬೃಹತ್ತಪನು ಜ್ಞಾನಸಿಂಧು, ಧೃತವ್ರತರನ್ನು ಕುರಿತು ಪ್ರೀತಿಯಿಂದ ಹೀಗೆ ಹೇಳಿದನು—"ನಾವು ಇನ್ನು ಎರಡು ವರ್ಷಗಳಲ್ಲಿ ಎಲ್ಲ ವಿದ್ಯೆಗಳನ್ನು ಪೂರ್ಣಮಾಡಿಕೊಂಡು ಗಂಗಾತೀರಕ್ಕೆ ಬರುತ್ತೇವೆ. ಅಲ್ಲಿಯ ತನಕ ನೀವು ವಿಷ್ಣುಪಾದದಿಂದ ಉದ್ಭವಳಾದ, ಲೋಕಮಾತೆಯಾದ ಪುಣ್ಯಪ್ರದಳಾದ ಗಂಗಾದೇವಿಯ (ನದಿಯ) ತೀರದಲ್ಲಿ ವಾಸಮಾಡಿಕೊಂಡಿರಿ."

**ಇತ್ಯುಕ್ತ್ವಾ ಪ್ರೋಚತುಸ್ತೇನ ಮುನೀಂದ್ರಂ ಸಂಶಿತವ್ರತಮ್ ।**
**ಗತ್ವಾ ಕಿಂ ವಾ ಕರಿಷ್ಯಾವಃ ತಾವದಾವಾಂ ತವಾಂತಿಕೇ ॥ ೪೦ ॥**
**ಶಿಷ್ಯಾವ ಇತಿ ತಂ ಚೋಕ್ತ್ವಾ ತಸ್ಥತುಸ್ತೌ ಮಹಾಮತೀ ।**

ಹೀಗೆಂದು ನುಡಿದ ವ್ರತನಿಷ್ಠನಾದ ಬೃಹತ್ತಪನಿಗೆ ಜ್ಞಾನಸಿಂಧು, ಧೃತವ್ರತರು ಹೇಳಿದರು— "ಗಂಗಾದಡಕ್ಕೆ ಹೋಗಿ ನಾವು ಮಾಡಬೇಕಾದುದಾದರೂ ಏನು? ನಾವು ಇಲ್ಲಿಯೇ ಇರುತ್ತೇವೆಂದು ನುಡಿದು ಆ ಗ್ರಾಮದಲ್ಲಿಯೇ ಇದ್ದರು."

**ತತೋ ವರ್ಷದ್ವಯಸ್ಯಾಂತೇ ಸರ್ವಾ ವಿದ್ಯಾಃ ಸಮಾಪ್ಯ ಚ ॥ ೪೧ ॥**
**ಶಿಷ್ಯಾಭ್ಯಾಂ ಚ ತಥಾ ತಾಭ್ಯಾಂ ಯಯೌ ಸಾಕಂ ಬೃಹತ್ತಪಾಃ ।**
**ಜಾಹ್ನವೀಂ ತಾಂಸ್ತತೋ ಜ್ಞಾತ್ವಾ ಪ್ರತ್ಯುತ್ಥಾಯಾರ್ಹಣಾದಿಭಿಃ ॥ ೪೨ ॥**
**ಉಪತಸ್ಥೇ ಮಹಾಗಂಗಾ ಸಂಭ್ರಮಾಕುಲಮಾನಸಾ ।**
**ಸಹಾಗತೌ ಮುನೀಂದ್ರಾತ್ತೌ ಜಲಪೂರ್ಣಾಂ ಮಹಾನದೀಮ್ ॥ ೪೩ ॥**
**ದೃಷ್ಟ್ವಾ ಪ್ರಹೃಷ್ಟಮನಸೌ ತೈರನುಜ್ಞಾಂ ಸಮಾಪ್ಯ ಚ ।**
**ತೈಃ ಸಾಕಂ ಚಕ್ರತುಃ ಸ್ನಾನಂ ಸಿದ್ಧಿಮಾಪುಶ್ಚ ಪಂಚ ತೇ ॥ ೪೪ ॥**

ಎರಡು ವರ್ಷಗಳನಂತರ ಎಲ್ಲ ವಿದ್ಯೆಗಳನ್ನೂ ಪೂರ್ಣಗೊಳಿಸಿ ಬೃಹತ್ತಪನೂ, ಅವನ ಶಿಷ್ಯರಾದ ಪುಣ್ಯಧಾಮ ಮತ್ತು ದೀರ್ಘತಪನೂ, ಜ್ಞಾನಸಿಂಧು, ಧೃತವ್ರತನೂ ಗಂಗಾಸ್ನಾನಕ್ಕಾಗಿ ನದಿಯ ದಡಕ್ಕೆ ಬಂದರು. ಆ ಕಾಲದಲ್ಲಿ ಗಂಗಾದೇವಿಯು ಪೂಜಾದ್ರವ್ಯಗಳಿಂದ ಸಹಿತಳಾಗಿ ಇವರನ್ನು ಸಂಭ್ರಮದಿಂದ ಎದುರುಗೊಂಡಳು. ಜ್ಞಾನಸಿಂಧು, ಧೃತವ್ರತರು ನೀರಿನ ಪ್ರವಾಹದಿಂದ ತುಂಬಿದ್ದ ನದಿಯನ್ನು ಕಂಡು, ಸಂತೋಷಭರಿತರಾಗಿ, ಇತರರ ಅನುಜ್ಞೆಯನ್ನು ಪಡೆದು, ಅವರ ಜತೆಯಲ್ಲಿಯೇ ಸ್ನಾನವನ್ನು ಮಾಡಿ ಆ ಎಲ್ಲ ಐದು ಜನರೂ ಸಿದ್ಧಿಯನ್ನು ಪಡೆದರು.

**ಅತಃ ಸರ್ವಂ ಪರಿತ್ಯಜ್ಯ ಶ್ರುತಾ ವಿಷ್ಣುಕಥಾ ಶುಭಾ ।**
**ದದಾತಿ ಸರ್ವಾನರ್ಥಾಂಶ್ಚ ನಾತ್ರ ಕಾರ್ಯಾ ವಿಚಾರಣಾ ॥ ೪೫ ॥**

**ಕೃತಾನ್ಯಪಿ ಚ ಕರ್ಮಾಣಿ ವಿನಾ ವಿಷ್ಣುಕಥಾಂ ಶುಭಾಮ್ ।**
**ಅಜಾಗಲಸ್ತನಮಿವ ವೃಥಾ ತಾನಿ ವಿದೋ ವಿದುಃ ॥ ೮೭ ॥**

ಸಕಲ ಕರ್ಮಗಳನ್ನೂ ಸಂಕೋಚಗೊಳಿಸಿ ಪುಣ್ಯಕರವಾದ ಶ್ರೀವಿಷ್ಣುಕಥಾವನ್ನು ಶ್ರವಣಮಾಡಿದರೆ ಎಲ್ಲ ಪುರುಷಾರ್ಥಗಳೂ ಲಭಿಸುತ್ತವೆ, ಸಂಶಯವಿಲ್ಲ. ಎಲ್ಲ ಕರ್ಮಗಳನ್ನೂ ಆಚರಿಸಿ ವಿಷ್ಣುವಿನ ಕಥಾಲಾಪಗಳನ್ನು ಶ್ರವಣಮಾಡದಿದ್ದರೆ ಅದು ನಿಷ್ಫಲ, ಆಡಿನ ಕುತ್ತಿಗೆಯಲ್ಲಿನ ಮೊಲೆಯಂತೆ—ಎಂದು ಜ್ಞಾನಿಗಳು ತಿಳಿಯುತ್ತಾರೆ.

[**ವಿಶೇಷಾಂಶ :** ಈ ಅಧ್ಯಾಯದಲ್ಲಿ ಪರಮಾತ್ಮನ ಕಥಾಶ್ರವಣವು ಸಾಧಕನಿಗೆ ಎಷ್ಟು ಅವಶ್ಯಕವೆಂಬುದನ್ನು ನಿರೂಪಿಸಲಾಗಿದೆ. ಶ್ರೀಹರಿಯಲ್ಲಿ ಮಾಹಾತ್ಮ್ಯಜ್ಞಾನಪೂರ್ವಕವಾದ ಭಕ್ತಿಯು ಅಭಿವೃದ್ಧಿಯಾಗಲು ಅವನ ಲೀಲಾವತಾರಗಳನ್ನು ವರ್ಣನೆಮಾಡಿರುವ ಭಾಗವತ, ಮಹಾಭಾರತ ಮುಂತಾದ ಗ್ರಂಥಗಳನ್ನು ನಿತ್ಯದಲ್ಲಿಯೂ ಶ್ರವಣಮಾಡಬೇಕು. ನವವಿಧ ಭಕ್ತಿಯನ್ನು ವಿವರಿಸುವಾಗ ಶ್ರೀ ಪ್ರಹ್ಲಾದರಾಜರು ಮೊದಲು "ಶ್ರವಣ"ವೆಂದೇ ಹೇಳಿದ್ದಾರೆ.

**ಈದೃಶಂ ಶ್ರವಣಂ ಶ್ರೇಷ್ಠಂ ಸರ್ವೇಷಾಂ ಪರಮಂ ಹಿತಮ್ ।**
**ಅತಃ ಸದ್ಭ್ಯೋಽನಿಶಂ ಕುರ್ಯಾಚ್ಛ್ರವಣಂ ತೇನ ಸದ್ಗತಿಃ ॥**
**ತದ್ದಿನಂ ದುರ್ದಿನಂ ಮನ್ಯೇ ಮೇಘಚ್ಛನ್ನಂ ನ ದುರ್ದಿನಮ್ ।**
**ಯದ್ದಿನಂ ಹರಿಸಂಕೀರ್ತಿಕಥಾಮೃತವಿವರ್ಜಿತಮ್ ॥**

—ವಿಷ್ಣುರಹಸ್ಯ

ಸಾಧುಸಂಗದಲ್ಲಿದ್ದು ಅದರಿಂದ ದೊರೆಯುವ ಶ್ರವಣವನ್ನು ಅವಶ್ಯವಾಗಿ ಆಚರಿಸಬೇಕು. ಶ್ರವಣವು ಸರ್ವರಿಗೂ ಬಹಳ ಹಿತವಾದುದು. ಅದರಿಂದಲೇ ಮುಕ್ತಿಯು. ಯಾವ ದಿನ ಕೀರ್ತನ, ಕಥಾಶ್ರವಣಗಳಿಂದ ರಹಿತವಾದುದೋ ಆ ದಿನವೇ ದುರ್ದಿನ, ಮೋಡದಿಂದ ಆಚ್ಛಾದಿತವಾದ ದಿನವು ದುರ್ದಿನವಲ್ಲ.

ಈ ರೀತಿಯಲ್ಲಿ "ಶ್ರವಣ"ಕ್ಕೆ ಶ್ರೇಷ್ಠವಾದ ಸ್ಥಾನವಿರುವುದರಿಂದ ಸಾಧಕರು ಅವಶ್ಯವಾಗಿ ಸಚ್ಛಾಸ್ತ್ರಶ್ರವಣಮಾಡಬೇಕು.]

ಇತಿ ಶ್ರೀ ವಾಯುಪುರಾಣೇ ಮಾಘಮಾಸಮಾಹಾತ್ಮ್ಯೇ
ವಿಂಶೋಽಧ್ಯಾಯಃ
ಶ್ರೀ ವಾಯುಪುರಾಣಾಂತರ್ಗತ ಮಾಘಮಾಸಮಾಹಾತ್ಮ್ಯೆಯಲ್ಲಿ
ಇಪ್ಪತ್ತನೆಯ ಅಧ್ಯಾಯವು ಸಮಾಪ್ತಿಯಾಯಿತು.

**ಶಾಂಡಿಲ್ಯ ಉವಾಚ—**

**ಯೋಗಾದ್ವಿಶ್ರಾಮಕಾಲೇ ಚ ಮನಸಾ ಚಿಂತಯೇಚ್ಛುಭಾನ್ ।**
**ನಾಶುಭಾಂಶ್ಚಿಂತಯೇತ್ಕ್ವಾಪಿ ತೇನ ದುಃಖಾನಿ ವಿಂದತೇ ॥ ೧ ॥**

ಶಾಂಡಿಲ್ಯರು ನುಡಿದರು—

ಧ್ಯಾನಯೋಗದಿಂದ ನಿವೃತ್ತನಾಗಿರುವ ಕಾಲದಲ್ಲಿ ಮನಸ್ಸಿನಲ್ಲಿ ಪುಣ್ಯಕರವಾದ ವಿಷಯಗಳನ್ನೇ ಆಲೋಚಿಸುತ್ತಿರಬೇಕು. ಅಶುಭಕರವಾದ ವಿಚಾರಗಳನ್ನು ಚಿಂತಿಸಬಾರದು—ಇದರಿಂದ ದುಃಖಗಳು ಬರುತ್ತವೆ.

[**ವಿಶೇಷಾಂಶ : ನ ಹಿ ಕಶ್ಚಿತ್ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್ ।** —ಗೀತಾ ಯಾರೂ ಸಹ ಯಾವ ವಿಧವಾದ ಕರ್ಮವನ್ನೂ ಮಾಡದೇ ಒಂದು ಕ್ಷಣವಾದರೂ ಇರುವುದಿಲ್ಲ. ಏನಾದರೂ ಮಾನಸಿಕ ವ್ಯಾಪಾರವಾದರೂ ಇದ್ದೇ ಇರುತ್ತದೆ.]

**ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ ।**
**ತಸ್ಮಾನ್ಮನೋ ಜಯೇನ್ನಿತ್ಯಂ ಯತ್ನಂ ಕುರ್ಯಾದ್ವಿಚಕ್ಷಣಃ ॥ ೨ ॥**

ಸಂಸಾರಬಂಧನ (ದುಃಖಾದಿಗಳು), ಸಂಸಾರ ನಿವೃತ್ತಿ (ಸುಖಾದಿಗಳು) ಇವುಗಳಿಗೆ ಜೀವರ ಮನಸ್ಸೇ ಕಾರಣ. ಆದುದರಿಂದ ಜ್ಞಾನಿಯು ನಿತ್ಯದಲ್ಲಿಯೂ ಈ ಮನಸ್ಸನ್ನು ಜಯಿಸಲು ಪ್ರಯತ್ನಿಸಬೇಕು.

**ಜಿತೇ ಮನಸಿ ಯತ್ನೇನ ಸರ್ವಾನ್ ಕಾಮಾನವಾಪ್ನುಯಾತ್ ।**
**ತಸ್ಮಿನ್ನೇವಾಜಿತೇ ಸರ್ವಾನ್ ಕಾಮಾನ್ನೈವಾಪ್ನುಯಾತ್ಕ್ವಚಿತ್ ॥ ೩ ॥**

ಪ್ರಯತ್ನದಿಂದ ಮನಸ್ಸನ್ನು ಜಯಿಸಿದರೆ ಸಕಲ ಇಷ್ಟಾರ್ಥಗಳೂ ಪೂರ್ಣವಾಗುತ್ತವೆ. ಮನಸ್ಸೇ ಮನುಷ್ಯನನ್ನು ಜಯಿಸಿದರೆ ಅವನ ಇಷ್ಟಾರ್ಥಗಳು ಪೂರ್ಣವಾಗುವುದಿಲ್ಲ.

**ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಮ್ ।**
**ಸುಶೀಲಪುತ್ರಯೋರ್ವೃತ್ತಂ ಶ್ರವಣಾದ್ರೋಮಹರ್ಷಣಮ್ ॥ ೪ ॥**

ಈ ಸಂದರ್ಭದಲ್ಲಿ ಹಿಂದಿನ ಒಂದು ಇತಿಹಾಸ ವೃತ್ತಾಂತವನ್ನು ಹೇಳುತ್ತೇನೆ. ಅದು ಸುಶೀಲನೆಂಬ ಬ್ರಾಹ್ಮಣನ ಇಬ್ಬರು ಮಕ್ಕಳನ್ನು ಕುರಿತದ್ದು, ಕೇಳುವುದರಿಂದ ರೋಮಾಂಚನವಾಗುತ್ತದೆ.

**ಸುಕರ್ಮತನಯಃ ಪುಣ್ಯಸುಶೀಲೋ ವೈ ಮಹಾದ್ವಿಜಃ ।**
**ಕಾಸಿದೇಶೇ ಮಹಾಪುಣ್ಯೇ ಗ್ರಾಮೇ ನಂದಿವರೇ ಶುಭೇ ॥ ೫ ॥**

ಕಾಶೀಕ್ಷೇತ್ರದ ಮಹಾಪುಣ್ಯಕರವಾದ ನಂದಿವರ ಎಂಬ ಸ್ಥಳದಲ್ಲಿ ಸುಕರ್ಮ ನೆಂಬ ಬ್ರಾಹ್ಮಣನಿಗೆ ಪುಣ್ಯಾತ್ಮನಾದ ಸುಶೀಲನೆಂಬ ಮಗನಿದ್ದನು.

**ಸುವೃತ್ತವೃತ್ತನಾಮಾನೌ ತಸ್ಯ ಪುತ್ರೌ ವಯೋಗತೌ ।**
**ಯಾಜಕೌ ಗುಣಸಂಪನ್ನೌ ನಾನಾವಿದ್ಯಾವಿಶಾರದೌ ॥ ೬ ॥**

ಸುಶೀಲನಿಗೆ ಸುವೃತ್ತ, ವೃತ್ತ ಎಂಬ ಹೆಸರಿನ ಇಬ್ಬರು ಮಕ್ಕಳಿದ್ದರು. ಇವರು ಯೌವನಸ್ಥರು, ಯಾಜಕರು, ಒಳ್ಳೆ ಗುಣಾಢ್ಯರು, ಅನೇಕ ವಿದ್ಯೆಗಳಲ್ಲಿ ಚತುರರು.

**ಕದಾಚಿದಟಮಾನೌ ತೌ ಪ್ರಯಾಗಂ ಯಯತುರ್ಮುನೀ ।**
**ಕೃಷ್ಣಾಷ್ಟಮ್ಯುತ್ಸವಶ್ಚಾಸೀತ್ತಸ್ಯಾಂ ರಾತ್ರೌ ಗುಣೋತ್ತಮಃ ॥ ೭ ॥**

ಅಲ್ಲಲ್ಲಿ ತಿರುಗುತ್ತಾ ಇವರಿಬ್ಬರು ಪ್ರಯಾಗಕ್ಕೆ ಬಂದರು. ಆ ದಿನ ರಾತ್ರಿ ವಿಜೃಂಭಣೆಯಿಂದ ನಡೆಯುವ ಕೃಷ್ಣಾಷ್ಟಮೀ ಉತ್ಸವವು ಇತ್ತು.

**ದೇವಾಲಯೇ ಮಹಾಪುಣ್ಯೇ ಮಾಧವಸ್ಯ ಮಹಾತ್ಮನಃ ।**
**ತೌ ಗತೌ ಚೋತ್ಸವಂ ದ್ರಷ್ಟುಂ ಪ್ರತೋಲ್ಯಾಂ ಪುರುಷಧ್ವಜೌ ॥ ೮ ॥**

ಪ್ರಯಾಗ ಮಾಧವನ ದೇವಾಲಯದಲ್ಲಿ ನಡೆಯುವ ಈ ಉತ್ಸವವನ್ನು ನೋಡಲು ಸುವೃತ್ತ ಮತ್ತು ವೃತ್ತರೆಂಬ ಬ್ರಾಹಣೋತ್ತಮರು ದೊಡ್ಡ ದಾರಿಯಲ್ಲಿ ರಾತ್ರಿಯಲ್ಲಿ ಹೋದರು.

[**ವಿಶೇಷಾಂಶ :** ಪ್ರಯಾಗ ಮಾಧವನ ಸ್ಮರಣೆ, ದರ್ಶನಗಳು ಏನು ಫಲ ಕೊಡುತ್ತವೆ ಎಂಬುದನ್ನು ಶ್ರೀವಾದಿರಾಜರು ತೀರ್ಥಪ್ರಬಂಧದಲ್ಲಿ ಹೀಗೆ ವರ್ಣಿಸಿದ್ದಾರೆ.

**ಪ್ರಯಾಗಮಾಧವೋ ಭೂಯಾದ್ದಯಾವಾರಿನಿಧಿರ್ಹೃದಿ ।**
**ಪ್ರಕೃಷ್ಟಯಾಗಸದೃಶೀ ಸಕೃದ್ಯಸ್ಯ ಹಿ ಸಂಸ್ಮೃತಿಃ ॥**

ದಯಾಸಮುದ್ರನಾದ ಪ್ರಯಾಗಮಾಧವನು ನಮ್ಮ ಹೃದಯದಲ್ಲಿ ಸದಾ ಇರಲಿ. ಅವನನ್ನು ಒಂದು ಬಾರಿ ಸ್ಮರಣೆಮಾಡುವಮಾತ್ರದಿಂದಲೇ ಶ್ರೇಷ್ಠವಾದ ಯಾಗಮಾಡಿದಂತಾಗುತ್ತದೆ.]

**ಮಹಾವೃಷ್ಟಿಸ್ತದಾ ಚಾಸೀತ್ತಥಾ ಭ್ರಷ್ಟಪಥಾವುಭೌ ।**
**ವೇಶ್ಯಾಗಾರಮಗಾದೇಕ ಏಕೋ ದೇವಾಲಯಂ ಗತಃ ॥ ೯ ॥**

ಆಗ ಭಾರಿಮಳೆ ಬಂದು ಅಣ್ಣತಮ್ಮಂದಿರು ಬೇರೆ ಬೇರೆ ದಾರಿಯಾದರು. ಒಬ್ಬನು ವೇಶ್ಯೆಯ ಮನೆಯಲ್ಲಿ ಆಶ್ರಯ ಪಡೆದನು, ಮತ್ತೊಬ್ಬನು ದೇವಾಲಯಕ್ಕೆ ಹೋದನು.

**ವೃತ್ತೋ ದೇವಾಲಯಂ ಗತ್ವಾ ಚಿಂತಯಾಮಾಸ ದುಷ್ಟಧೀಃ ।**
**ಸುವೃತ್ತೋ ಹ್ಯಗಮದ್ವೇಶ್ಯಾಗಾರಂ ಕ್ರೀಡಾಪದಂ ಶುಭಮ್ ॥ ೧೦ ॥**

ದುಷ್ಟಬುದ್ಧಿಯ ವೃತ್ತನು ದೇವಾಲಯಕ್ಕೆ ಹೋಗಿ ಈರೀತಿ ಚಿಂತಿಸುತ್ತಿದ್ದನು —ಸುವೃತ್ತನು ವೇಶ್ಯಾಗೃಹಕ್ಕೆ ಹೋಗಿದ್ದಾನೆ, ಅದು ಮನೋರಂಜಕವಾದ ಆಟ ಪಾಟಗಳಿಗೆ ಸರಿಯಾದ ಸ್ಥಳ.

**ಕೋಮಲಾಂಗ್ಯಾ ತಯಾ ಸಾರ್ಧಂ ಸೂಪವಿಷ್ಟೋ ಮಹಾಸನೇ ।**
**ಯಥಾಸುಖಂ ಚ ಸರಸಂ ಸಹಾಲಪತಿ ನಿಶ್ಚಯಮ್ ॥ ೧೧ ॥**
**ತಾಂಬೂಲಚರ್ವಣಾತ್ಕಾಲಸ್ತಯಾ ಸಾಕಂ ಗಮಿಷ್ಯತಿ ।**
**ನಿರ್ಭರಂ ಪರಿರಂಭಂ ಚ ಕರಿಷ್ಯತಿ ನ ಸಂಶಯಃ ॥ ೧೨ ॥**
**ಸಂಶೇತೇ ಚ ತಯಾ ಸಾರ್ಧಂ ಪರ್ಯಂಕೇ ಚ ಮನೋಹರೇ ।**
**ಇತ್ಯಾದಿಚಿಂತಯಾ ನೀತೋ ರಾತ್ರಿಶೇಷೋ ದುರಾತ್ಮನಾ ॥ ೧೩ ॥**

ಅಲ್ಲಿ ಕೋಮಲಾಂಗಿಯಾದ ವೇಶ್ಯೆಯೊಡನೆ ಸುಖಾಸನದಲ್ಲಿ ಕುಳಿತು ಸರಸ ಸಲ್ಲಾಪಗಳನ್ನಾಡುತ್ತಾ, ಅವಳೊಡನೆ ತಾಂಬೂಲವನ್ನು ಮೆಲ್ಲುತ್ತಾ, ಅವಳನ್ನು ಗಟ್ಟಿಯಾಗಿ ತಬ್ಬಿಕೊಳ್ಳುತ್ತಾ, ಸುಪ್ಪತ್ತಿಗೆಯಮೇಲೆ ಅವಳೊಡನೆ ಮಲಗಿರುತ್ತಾನೆ ; ಇದು ನಿಶ್ಚಯ. ಇದೇ ಮುಂತಾದ ಯೋಚನೆಮಾಡುತ್ತಾ ರಾತ್ರಿಯ ಉಳಿದ ಭಾಗವನ್ನು ಕಳೆದನು.

**ಪಶ್ಯನ್ನಪಿ ಮಹಾವಿಷ್ಣುಂ ಸ್ವರ್ಚಿತಂ ಚ ನ ಪಶ್ಯತಿ ।**
**ಶೃಣ್ವನ್ಕಥಾಂ ಮಹಾದಿವ್ಯಾಂ ನ ಶೃಣೋತಿ ಹಿ ಚಿಂತಯಾ ॥ ೧೪ ॥**
**ನಮಸ್ಕರೋತಿ ಕಾಯೇನ ಮನಸಾ ನ ನಮಸ್ಕ್ರಿಯಾಮ್ ।**
**ವಾಚಾ ಸ್ತೋತ್ರಂ ವದನ್ನಾಪಿ ನ ವದತ್ಯೇವ ಚಂಚಲಃ ॥ ೧೫ ॥**

ಅಲಂಕರಿಸಿ ಪೂಜಿಸಲ್ಪಟ್ಟಿದ್ದ ಮಾಧವನ ಮೂರ್ತಿಯು ಕಣ್ಣಿಗೆ ಕಾಣಿಸುತ್ತಿದ್ದರೂ ನೋಡಲಿಲ್ಲ ; ಪರಮ ಪಾವನವಾದ ಶ್ರೀಹರಿಯ ಕಥೆಯು ಕಿವಿಗಳಮೇಲೆ

ಬೀಳುತ್ತಿದ್ದರೂ ಮನಃಪೂರ್ವಕವಾಗಿ ಶ್ರವಣಮಾಡಲಿಲ್ಲ; ದೇಹದಿಂದ ದೇವರಿಗೆ ನಮಸ್ಕರಿಸಿದರೂ ಮನಸ್ಸಿನಿಂದ ವಂದಿಸಲಿಲ್ಲ; ಬಾಯಿಂದ ಸ್ತೋತ್ರಗಳನ್ನು ಉಚ್ಚರಿಸುತ್ತಿದ್ದರೂ ಚಂಚಲಮನಸ್ಸಿನಿಂದ ಕೂಡಿದ ವೃತ್ತನು ಮನಃಪೂರ್ವಕವಾಗಿ ಸ್ತೋತ್ರಗಳನ್ನು ಪಠಿಸಲಿಲ್ಲ.

**ರಾತ್ರೌ ಭಕ್ತೈಶ್ಚ ನೃತ್ಯದ್ಭಿಃ ನೃತ್ಯನ್ನಪಿ ನ ನೃತ್ಯತಿ ।**
**ಆಲಪನ್ ಬಹುಧಾಲಾಪಂ ನಾಲಪನ್ನಿವ ತಿಷ್ಠತಿ ॥ ೧೬ ॥**

**ಗತೇ ಮನಸಿ ಚಾನ್ಯತ್ರ ಚಿತ್ರಾರ್ಪಿತ ಇವ ಸ್ಥಿತಃ ।**

ರಾತ್ರಿಯಲ್ಲಿ ನರ್ತನಮಾಡುತ್ತಿದ್ದ ಭಕ್ತರೊಡನೆ ತಾನೂ ಕುಣಿಯುತ್ತಿದ್ದರೂ, ಮನಃಪೂರ್ವಕವಾಗಿ ನರ್ತಿಸಲಿಲ್ಲ; ಬಹುಜನರು ಅವನೊಡನೆ ಮಾತನ್ನಾಡಿದರೂ ತಾನು ಉತ್ತರವನ್ನೇ ಕೊಡದೆ ನಿಂತಿರುತ್ತಿದ್ದನು. ಮನಸ್ಸೆಲ್ಲ ವೇಶ್ಯೆಯ ಗೃಹದಲ್ಲಿ ಇತ್ತು; ಆದುದರಿಂದ ಚಿತ್ರದಲ್ಲಿನ ಬೊಂಬೆಯಂತೆ ದೇವಾಲಯದಲ್ಲಿ ಇದ್ದನು.

**ವೇಶ್ಯಾಗಾರಸ್ಥಿತೋಪ್ಯೇವಂ ಚಿಂತಯಾಮಾಸ ತನ್ಮನಾಃ ॥ ೧೭ ॥**

ವೇಶ್ಯೆಯ ಗೃಹದಲ್ಲಿದ್ದ ಸುವೃತ್ತನು ಈ ರೀತಿ ಚಿಂತಿಸುತ್ತಿದ್ದನು.

**ಕಿಂ ತೇನ ಸುಕೃತಂ ಪೂರ್ವಂ ಕೃತಂ ಜನ್ಮಸಹಸ್ರಕೈಃ ।**
**ತದದ್ಯ ಫಲಿತಂ ತಸ್ಯ ಪ್ರಾಯೋ ದ್ರಕ್ಷ್ಯತಿ ಮಾಧವಮ್ ॥ ೧೮ ॥**

ನನ್ನ ಸಹೋದರನಾದ ವೃತ್ತನು ಹಿಂದಿನ ಸಹಸ್ರಾರು ಜನ್ಮಗಳಲ್ಲಿ ಎಂತಹ ಪುಣ್ಯ ಮಾಡಿರಬಹುದು! ಅದೀಗ ಫಲಿಸಿದೆ, ಮಾಧವನನ್ನು ನೋಡುತ್ತಿದ್ದಾನೆ.

**ಕೃಷ್ಣಾಯಾರ್ಘ್ಯಂ ದದಾತ್ಯದ್ಧಾ ವಿದ್ವದ್ಭಿರನುಮೋದಿತಃ ।**
**ನೇತ್ರಾಭ್ಯಾಂ ಮಾಧವಸ್ಯಾಸ್ಯ ಪೂಜಾಂ ಪಶ್ಯತಿ ನಿಶ್ಚಯಮ್ ॥ ೧೯ ॥**

**ವಿಷ್ಣೋಃ ಸರ್ವಾಧಿಕಂ ಪುಣ್ಯಂ ದಿವ್ಯಂ ಚಂದ್ರಸಮಾನನಮ್ ।**
**ಯೇನ ದೃಷ್ಟಂ ನೇತ್ರಫಲಂ ಸಮ್ಯಗಾಪ್ತಂ ನ ಸಂಶಯಃ ॥ ೨೦ ॥**

**ಪುಷ್ಪಾಂಜಲಿಂ ಮಹಾವಿಷ್ಣೋಃ ಯಾಮೇ ಯಾಮೇ ಕರಿಷ್ಯತಿ ।**
**ನಮಸ್ಕರೋತಿ ಮೂರ್ಧ್ನಾ ಚ ವಾಚಾ ಸ್ತೌತಿ ನಿರಂತರಮ್ ॥ ೨೧ ॥**

ಶ್ರೀ ಕೃಷ್ಣನಿಗೆ ಅರ್ಘ್ಯವನ್ನು ಕೊಡುತ್ತಾನೆ, ಪಂಡಿತರಿಂದ ಸನ್ಮಾನಿಸಲ್ಪಡುತ್ತಾನೆ, ತನ್ನ ಕಣ್ಣುಗಳಿಂದ ಶ್ರೀಮಾಧವನ ಪೂಜೆಯನ್ನು ನೋಡುತ್ತಾನೆ. ಚಂದ್ರನಂತೆ ಆಹ್ಲಾದಕರವಾದ ಸರ್ವಶ್ರೇಷ್ಠವಾದ ಶ್ರೀವಿಷ್ಣುವಿನ ಮೂರ್ತಿಯನ್ನು ಯಾವನು ನೋಡುತ್ತಿರುವನೋ ಅವನ ಮನೋಭೀಷ್ಟಗಳೆಲ್ಲ ಪೂರ್ಣವಾದಂತೆಯೇ,

ಸಂಶಯುವಿಲ್ಲ. ವೃತ್ತನು ಪ್ರತಿಯಾಮದಲ್ಲಿಯೂ ಪುಷ್ಪಾಂಜಲಿಯನ್ನು ಅರ್ಪಿಸು ತ್ತಾನೆ, ಸಾಷ್ಟಾಂಗ ನಮಸ್ಕಾರ ಮಾಡುತ್ತಾನೆ, ಒಂದೇ ಸಮನೆ ಶ್ರೀಹರಿಯ ಸ್ತೋತ್ರಗಳನ್ನು ಉಚ್ಚರಿಸುತ್ತಾ ಇರುತ್ತಾನೆ.

**ಕಥಾಂ ಶ್ರೋಷ್ಯತಿ ವೈಕುಂಠಪತೇರ್ನಾರಾಯಣಸ್ಯ ಚ ।**
**ಶ್ರೋತ್ರಾರಾಮಾಂ ಮಹಾಪುಣ್ಯಾಂ ಸದ್ಭಕ್ತಮುಖನಿಃಸೃತಾಮ್ ॥ ೨೨ ॥**
**ನೃತ್ಯದ್ಭಿರುತ್ಸವೇ ಭಕ್ತೈಃ ಸಹ ನೃತ್ಯತಿ ನಿಶ್ಚಯಮ್ ।**
**ಧೂಪಕಾಲೇ ಹರೇರ್ಮೂರ್ತಿಂ ಧೂಪಧೂಮ್ರಾಂ ಚ ಪಶ್ಯತಿ ॥ ೨೩ ॥**

ಒಳ್ಳೆಯ ಸಾತ್ವಿಕಭಕ್ತರ ಮುಖದಿಂದ ಬರುವ ವೈಕುಂಠಪತಿಯಾದ ಶ್ರೀಹರಿಯ ಮಂಗಳ ಕಥೆಯನ್ನು ಕೇಳುತ್ತಾನೆ. ನರ್ತನಮಾಡುವ ಭಕ್ತರ ಸಂಗಡ ತಾನೂ ಸಹ ನರ್ತನ ಮಾಡುತ್ತಾನೆ. ಶ್ರೀಮಾಧವನಿಗೆ ಧೂಪಸಮರ್ಪಣದ ಕಾಲದಲ್ಲಿ ಧೂಪದಿಂದ ವ್ಯಾಪ್ತವಾದ ಆ ಮೂರ್ತಿಯನ್ನು ದರ್ಶನ ಮಾಡುತ್ತಾನೆ.

**ನಾನೇನ ಸದೃಶೋ ಲೋಕೇ ಕೃತಕೃತ್ಯೋ ಭವಿಷ್ಯತಿ ।**
**ಪಶ್ಯಾದೃಷ್ಟಂ ಮಮ ಮುನೇರ್ದಿವಸೇ ಕೃಷ್ಣವಲ್ಲಭೇ ॥ ೨೪ ॥**
**ವೇಶ್ಯಾಗಾರೇಽಭವದ್ವಾಸಃ ಸರ್ವಪಾಪಾಲಯೇಽಶುಭೇ ।**
**ಸ ಕಾಲೋಽದ್ಯ ವೃಥಾ ಯಾತಃ ಶ್ರೋತ್ರರಂಧ್ರೇ ಚ ಮೇ ವೃಥಾ ॥ ೨೫ ॥**

ವೃತ್ತನಿಗೆ ಸಮಾನನಾದ ಕೃತಕೃತ್ಯನು ಬೇರೊಬ್ಬನಿಲ್ಲ. ನನ್ನ ಪರಿಸ್ಥಿತಿ ಯನ್ನು ನೋಡಿರಿ. ಶ್ರೀಕೃಷ್ಣನಿಗೆ ಅತ್ಯಂತ ಪ್ರಿಯವಾದ ಕೃಷ್ಣಾಷ್ಟಮಿಯಲ್ಲಿ, ಅಮಂಗಳಕರವಾದ ಸಮಸ್ತಪಾಪಗಳಿಗೆ ಆಶ್ರಯವೆನಿಸಿದ ವೇಶ್ಯೆಯ ಮನೆಯಲ್ಲಿ ನನ್ನ ವಾಸ. ಕಾಲವನ್ನು ವ್ಯರ್ಥವಾಗಿ ಕಳೆದೆ. ಹರಿಕೀರ್ತನೆಯನ್ನು ಶ್ರವಣ ಮಾಡದ ನನ್ನ ಕಿವಿಗಳು ವ್ಯರ್ಥವಾದವು.

**ಬರ್ಹಾಯಿತೇ ಮೇ ನಯನೇ ಮಹೋತ್ಸವಮಪಶ್ಯತಃ ।**
**ಭಸ್ತ್ರಾಯಿತೋ ಮಮೋಚ್ಛ್ವಾಸಃ ತನ್ನಿರ್ಮಾಲ್ಯಮಜಿಘ್ರತಃ ॥ ೨೬ ॥**
**ದರ್ವೀಭೂತೌ ತು ಮೇ ಹಸ್ತೌ ವೃಥಾ ಜಾತೌ ದುರಾತ್ಮನಃ ।**
**ನಾಂಜಲಿಃ ಶಿರಸಾ ಬದ್ಧೋ ವಿಷ್ಣವೇ ಪರಮಾತ್ಮನೇ ॥ ೨೭ ॥**

ಅಂತಹ ವೈಭವದ ಉತ್ಸವವನ್ನು ನೋಡದಿರುವ ನನ್ನ ಕಣ್ಣುಗಳು ನವಿಲು ಗರಿಯ ಕಣ್ಣುಗಳಿಗೆ ಸಮಾನ; ಶ್ರೀಹರಿನಿರ್ಮಾಲ್ಯವನ್ನು ಆಘ್ರಾಣಮಾಡದಿರುವ ನನ್ನ ಉಚ್ಛ್ವಾಸವು ಚರ್ಮದ ತಿದಿಯಂತೆ; ಪರಮಾತ್ಮನ ಪೂಜೆಯನ್ನು ಮಾಡದೇ ಇರುವ ನನ್ನ ಕೈಗಳು ಅಡಿಗೆಯ ಸೌಟುಗಳಂತೆ; ಶ್ರೀವಿಷ್ಣುವಿಗೆ ನಾನು ಕೈಮುಗಿಯಲಿಲ್ಲ, ಶಿರಸ್ಸಿನಿಂದ ಸಾಷ್ಟಾಂಗ ನಮಸ್ಕಾರಮಾಡಲಿಲ್ಲ.

**ತ್ರಾಹಿ ತ್ರಾಹೀತಿ ನೋ ಜಾತು ಪ್ರಾರ್ಥಿತೋ ಹರಿರೀಶ್ವರಃ ।**
**ಪ್ರದಕ್ಷಿಣಾನಮಸ್ಕಾರೈಃ ಸ್ತೋತ್ರೈಃ ನಾನಾವಿಧೈರಪಿ ॥ ೨೮ ॥**

ಜಗದೊಡೆಯನಾದ ಶ್ರೀಹರಿಯನ್ನು "ತ್ರಾಹಿ ತ್ರಾಹಿ" ಎಂದು ಒಂದು ಬಾರಿಯಾದರೂ ಪ್ರಾರ್ಥಿಸಲಿಲ್ಲ; ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಲಿಲ್ಲ; ನಾನಾವಿಧವಾಗಿ ಸ್ತೋತ್ರ ಮಾಡಲಿಲ್ಲ.

**ಮಯಾ ನ ತುಷ್ಟೋ ಭಗವಾನ್ ಸಂಸಾರಾರ್ಣವತಾರಕಃ ।**
**ವಿನಾ ಸಮಾಗಮಂ ಸದ್ಭಿಃ ತ್ರುಟಿರ್ಮೇಽದ್ಯ ಯುಗಾಯತೇ ॥ ೨೯ ॥**

ಸಂಸಾರ ಸಮುದ್ರದಿಂದ ಪಾರುಮಾಡುವ ಷಡ್ಗುಣೈಶ್ವರ್ಯಪೂರ್ಣನಾದ ಆ ಪರಮಾತ್ಮನನ್ನು ನಾನು ಸಂತೋಷಪಡಿಸಲಿಲ್ಲ. ಸಜ್ಜನರ ಸಹವಾಸವನ್ನು ಮಾಡಲಿಲ್ಲ. ಈ ಸ್ಥಳದಲ್ಲಿ ಒಂದು ಕ್ಷಣವೂ ಯುಗದಂತೆ ಇದೆ.

**ಕಾಲೋ ವಿಷಾಯತೇ ಮೇಽದ್ಯ ಕಂಸಶತ್ರುಮಸೇವತಃ ।**
**ಕಿಯತಾಂ ಜನ್ಮನಾಂ ಪಾಪಂ ಫಲಿತಂ ಮೇ ದುರಾತ್ಮನಃ ॥ ೩೦ ॥**
**ದುರದೃಷ್ಟಂ ಮಹಾವೃಷ್ಟಿಸ್ವರೂಪೇಣಾದ್ಯ ಚಾಗತಮ್ ।**
**ಅಹೋ ಚಾತೀವ ಪಾಪೀಯಾನ್ ಪ್ರಯಾಗೇ ಮುಕ್ತಿಗೇ ಶುಭೇ ॥ ೩೧ ॥**

ಕಂಸಾರಿಯನ್ನು ಸೇವಿಸದೆ ಇರುವ ನನಗೆ ಕಾಲವೆಂಬುದು ವಿಷದಂತಾಗಿದೆ. ದುರಾತ್ಮನಾದ ನನ್ನ ಎಷ್ಟು ಜನ್ಮಗಳ ಪಾಪಗಳು ಈ ಫಲ ಕೊಡುತ್ತಿವೆಯೋ! ನನ್ನ ಪ್ರಾರಬ್ಧಕರ್ಮದ ಫಲವಾಗಿಯೇ ಈರೀತಿಯ ಭಯಂಕರವಾದ ಮಳೆ ಬಂದಿತು. ಅತ್ಯಂತ ಶುಭಕರವಾದ ಪ್ರಯಾಗ ಕ್ಷೇತ್ರದಲ್ಲಿ ಅತ್ಯಂತ ಪಾಪಿಯಾದ ನಾನು ಇದ್ದೇನೆ.

**ದುಃಸಂಗೋ ನರಕಾವಾಪ್ತಿಕಾರಣಂ ಚ ಕುತೋ ಮಮ ।**
**ಏಕಸ್ಯೈವ ಸುತಾವಾವಾಂ ಪಥಾ ಚೈಕೇನ ಚಾಗತೌ ॥ ೩೨ ॥**
**ಗ್ರಾಮಮೇಕಂ ಗತೌ ವಿಪ್ರೌ ಸ್ಥಿತಿರ್ಭಿನ್ನಾವಯೋಃ ಕಥಮ್ ।**
**ಕೃಷ್ಣಜನ್ಮದಿನೇ ಪುಣ್ಯೇ ನ ಚಾರ್ಘ್ಯಂ ವಿಷ್ಣವೇಽರ್ಪಿತಮ್ ॥ ೩೩ ॥**

ನರಕಕ್ಕೆ ಕಾರಣವಾಗುವ ಈ ದುಃಸಂಗವು ನನಗೆ ಏನು ಕಾರಣದಿಂದ ಆಯಿತು? ನಾವಿಬ್ಬರೂ ಒಂದೇ ತಂದೆಯ ಮಕ್ಕಳು, ಒಂದೇ ರಸ್ತೆಯಲ್ಲಿ ಬಂದೆವು, ಒಂದೇ ಊರನ್ನು ತಲುಪಿದೆವು, ನಂತರ ನಮ್ಮಿಬ್ಬರ ದಾರಿಗಳು ಬೇರೆ ಹೇಗಾದವು? ಪುಣ್ಯಕರವಾದ ಕೃಷ್ಣನ ಜನ್ಮದಿನ ನಾನು ಅರ್ಘ್ಯವನ್ನೇ ಕೊಡಲಿಲ್ಲ.

*

**ನ ಜಾಗರಃ ಕೃತೋ ರಾತ್ರೌ ಪ್ರೀತಯೇ ಮಧುಹಾತ್ಮನಃ ।**
**ಮಯಾ ಶ್ರುತಾನಿ ಶಾಸ್ತ್ರಾಣಿ ವೇದಾಶ್ಚೈವ ವಿಚಾರಿತಾಃ ॥ ೩೪ ॥**
**ಕಥಂ ನೋತ್ಪಾದಯಂತ್ಯೇತೇ ದ್ವಂದ್ವದುಃಖಸಹಿಷ್ಣುತಾಮ್ ।**
**ಕಥಂ ಪುಂಸೋಽಲ್ಪಭಾಗ್ಯಸ್ಯ ಭವಿಷ್ಯಂತಿ ಸಮೃದ್ಧಯಃ ॥ ೩೫ ॥**

ರಾತ್ರಿಯಲ್ಲಿ ನಾನು ಜಾಗರಣೆಯನ್ನುಮಾಡಿ ಮಧುಸೂದನನನ್ನು ಸಂತುಷ್ಟಗೊಳಿಸಲಿಲ್ಲ. ನಾನು ಅನೇಕ ಶಾಸ್ತ್ರಗಳನ್ನು ಕೇಳಿರುತ್ತೇನೆ, ವೇದಾಧ್ಯಯನವನ್ನೂ ಮಾಡಿದ್ದೇನೆ. ಹೀಗಿದ್ದೂ ನನಗೆ ಮಳೆಯ ದೆಸೆಯಿಂದ ಆಗುವ ಸ್ವಲ್ಪ ದುಃಖವನ್ನು ಸಹಿಸಿಕೊಳ್ಳುವ ಬುದ್ಧಿಯು ಯಾತಕ್ಕೆ ಹುಟ್ಟಲಿಲ್ಲ ? ಅಲ್ಪಭಾಗ್ಯನಾದ ನನಗೆ ಇಂತಹ ದೊಡ್ಡ ಭಾಗ್ಯವು ಹೇಗೆ ತಾನೆ ದೊರಕುತ್ತದೆ ?

**ಕಥಂ ತೇನ ಸಹಾಯಾತಃ ಕಥಂ ಭಿನ್ನಪಥಾ ಗತಃ ।**
**ಮತಿದಾರ್ಢ್ಯವಿಹೀನಾನಾಂ ಮಾಯಾ ವಿಷ್ಣೋರ್ದುರತ್ಯಯಾ ॥ ೩೬ ॥**

ನನ್ನ ಸಹೋದರನಾದ ವೃತ್ತನ ಸಂಗಡಲೇ ಬಂದರೂ ಸಹ ನಮ್ಮಿಬ್ಬರ ದಾರಿಗಳು ಬೇರೆ ಬೇರೆ ಹೇಗಾದವು ? ಮನಸ್ಸು ದೃಢವಾಗಿಲ್ಲದವರಿಗೆ ಶ್ರೀವಿಷ್ಣುವಿನ ಮಾಯೆಯನ್ನು ಅತಿಕ್ರಮಿಸುವುದು ಕಷ್ಟವೇ ಸರಿ.

**ಸುಪುಷ್ಟಂ ಬಹುಧಾ ಪಾಪೈಃ ಕಾಯಮೇತತ್ಪತಿಷ್ಯತಿ ।**
**ಅನೇಕದೋಷದುಷ್ಟೇಽಸ್ಮಿನ್ ಕಥಂ ಲೋಭೋ ಮಯಾರ್ಜಿತಃ ॥ ೩೭ ॥**

ಅನೇಕ ಪಾಪಗಳಿಂದ ಪುಷ್ಟವಾಗಿರುವ ಈ ಜನ್ಮದ ಶರೀರವು ಒಂದು ದಿನ ಬೀಳುತ್ತದೆ. ಇಂತಹ ನಾನಾ ದೋಷಗಳಿಂದ ಯುಕ್ತವಾಗಿರುವ ನನ್ನ ಶರೀರದ ಮೇಲೆ ಲೋಭ (ಮಮತಾ ಬುದ್ಧಿ) ಹೇಗೆ ಉಂಟಾಯಿತು ?

**ತೇ ಧನ್ಯಾಃ ಪ್ರಾಣಿನೋ ಲೋಕೇ ಸುಖದುಃಖಸಹಿಷ್ಣವಃ ।**
**ಯೇಷಾಂ ಗತಿರ್ಮಹಾವಿಷ್ಣುಃ ಯೋಗಿಧ್ಯೇಯಾಂಘ್ರಿಪಂಕಜಃ ॥ ೩೮ ॥**

ಲೋಕದಲ್ಲಿ ಯಾರು ಸುಖದುಃಖಗಳನ್ನು ಒಂದೇರೀತಿ ಎಂಬುದಾಗಿ ತಿಳಿದು (ಸುಖ ಬಂದಾಗ ಸಂತೋಷಪಡೆಯದೇ, ದುಃಖ ಬಂದಾಗ ಕುಗ್ಗದೇ) ವರ್ತಿಸುವರೋ ಅವರೇ ಧನ್ಯರು ; ಅಂತಹವರಿಗೆ ಯೋಗಿಗಳ ಧ್ಯಾನಕ್ಕೆ ವಿಷಯನಾಗಿರುವ, ಕಮಲದಂತೆ ಇರುವ ಪಾದಗಳನ್ನುಳ್ಳ ಶ್ರೀಮಹಾವಿಷ್ಣುವೇ ಗತಿಪ್ರದನು.

**ಶರೀರಪೋಷಣೇ ಸಕ್ತಾ ದುರಾತ್ಮಾನಶ್ಚ ಮಾದೃಶಃ ।**
**ಪುಷ್ಟಂ ದೇಹಂ ವಿನಶ್ಯಂತಂ ತಂ ವಿಹಾಯ ಪತಂತ್ಯಧಃ ॥ ೩೯ ॥**

ಶರೀರಪೋಷಣೆಯಲ್ಲಿಯೇ ನಿರತರಾದ ನನ್ನಂತಹ ದುರಾತ್ಮರು ಪುಷ್ಟವಾದ ದೇಹವನ್ನು ಪರಿತ್ಯಜಿಸಿ ನರಕದಲ್ಲಿ ಬೀಳುತ್ತಾರೆ.

**ಇತಿ ಸಂಚಿಂತಯಾ ತಸ್ಯ ರಾತ್ರಿಶೇಷೋ ಗತೋಽಭವತ್ ।**
**ಪುನಃ ಪ್ರಾತರ್ಮಿಲಿತಯೋಃ ಭ್ರಾತ್ರೋರ್ದೈವಾನುಕೂಲತಃ ॥ ೪೦ ॥**
**ಅಭ್ರೊದಶನಿಪಾತೇನ ಯುಗಪನ್ಮರಣಂ ತಯೋಃ ।**
**ಆಜಗ್ಮತುಸ್ತು ತೌ ನೇತುಂ ದ್ವೌ ವಿಷ್ಣೋಃ ಕಿಂಕರೌ ಶುಭೌ ॥ ೪೧ ॥**

ಹೀಗೆ ಸುವೃತ್ತನು ಚಿಂತಿಸುತ್ತಿರಲು ಉಳಿದಿದ್ದ ರಾತ್ರಿಯು ಕಳೆದು ಬೆಳಗಾಯಿತು. ಸಹೋದರರು ಭೇಟಿಯಾದರು. ಆದರೆ ದೈವಯೋಗದಿಂದ ಸಿಡಿಲು ಹೊಡೆದು ಇಬ್ಬರು ಏಕಕಾಲದಲ್ಲಿಯೇ ಮೃತರಾದರು. ಅವರಿಬ್ಬರನ್ನೂ ಕರೆದುಕೊಂಡು ಹೋಗಲು ವಿಷ್ಣುವಿನ ಇಬ್ಬರು ದೂತರು ಬಂದರು.

**ಯಮದೂತಾಸ್ತ್ರಯಶ್ಚಾಪಿ ಸಹಸಾ ಲೋಕಶಿಕ್ಷಕಾಃ ।**
**ಸುವೃತ್ತಂ ವಿಷ್ಣುದೂತೌ ದ್ವೌ ವಿಮಾನೇ ಸ್ಥಾಪ್ಯ ತಸ್ಥತುಃ ॥ ೪೨ ॥**

ಅದೇ ಸಮಯದಲ್ಲಿ ಪಾಪಾತ್ಮರನ್ನು ಶಿಕ್ಷಿಸುವ ಮೂರು ಮಂದಿ ಯಮ ದೂತರೂ ಪ್ರಾಪ್ತರಾದರು. ವಿಷ್ಣುದೂತರಿಬ್ಬರೂ ಸುವೃತ್ತನನ್ನು ತಮ್ಮ ವಿಮಾನ ದಲ್ಲಿ ಕೂಡಿಸಿಕೊಂಡರು.

**ಸ್ಥಿತಂ ದೇವಾಲಯೇ ವೃತ್ತಂ ಬಬಂಧುಸ್ತೇ ಯಮಾನುಗಾಃ ।**
**ದೂತಾಸ್ತೇ ವಿಷ್ಣುಯಮಯೋಃ ಕ್ರಮಾದ್ಗಂತುಂ ಸಮುದ್ಯತಾಃ ॥ ೪೩ ॥**

ರಾತ್ರಿಯೆಲ್ಲ ದೇವಾಲಯದಲ್ಲಿದ್ದ ವೃತ್ತನನ್ನು ಯಮದೂತರು ಪಾಶದಿಂದ ಬಿಗಿದರು. ವಿಷ್ಣುದೂತರೂ, ಯಮದೂತರೂ ಸುವೃತ್ತ ವೃತ್ತರನ್ನು ತಮ್ಮ ತಮ್ಮ ಸ್ಥಾನಗಳಿಗೆ ಕರೆದುಕೊಂಡು ಹೋಗಲು ಸಿದ್ಧರಾದಾಗ

**ಸುವೃತ್ತೋ ವಿಸ್ಮಿತೋ ಭೂತ್ವಾ ವಿಷ್ಣುದೂತಾವಥಾಬ್ರವೀತ್ ।**

ಆಶ್ಚರ್ಯಚಕಿತನಾದ ಸುವೃತ್ತನು ವಿಷ್ಣು ದೂತರಿಗೆ ಹೀಗೆ ಹೇಳಿದನು :

**ವೈಷಮ್ಯಂ ಕ್ರಿಯತೇ ಕಸ್ಮಾತ್ ಕರ್ಮಣೋಃ ಪಾಪಪುಣ್ಯಯೋಃ ॥ ೪೪ ॥**
**ನ ಶ್ರುತಂ ನ ಚ ದೃಷ್ಟಂ ಚ ವೈದಿಕೇ ಲೌಕಿಕೇಽಪಿ ವಾ ।**
**ವೃತ್ತೇನ ಪುಣ್ಯದಿವಸೇ ಜಯಂತ್ಯಾಂ ಕೃಷ್ಣವಲ್ಲಭೇ ॥ ೪೫ ॥**
**ಪ್ರಯಾಗೇ ಚ ಸ್ಥಿತಂ ತೇನ ತಥಾ ಮಾಧವಮಂದಿರೇ ।**

ಪಾಪಪುಣ್ಯಗಳ ವಿಷಯದಲ್ಲಿ ನೀವು ಯಾತಕ್ಕೆ ಹೀಗೆ ಪಕ್ಷಪಾತ ಮಾಡು ತ್ತಿದ್ದೀರಿ ? ಈ ವಿಧವಾದ ಪಕ್ಷಪಾತವು ಕೇಳಲ್ಪಟ್ಟಿಲ್ಲ, ವೇದಗಳಲ್ಲಿ ಹೇಳಲ್ಪಟ್ಟಿಲ್ಲ. ಪುಣ್ಯದಿನವಾದ ಕೃಷ್ಣನ ಜಯಂತಿ ದಿನದಲ್ಲಿ ವೃತ್ತನು ಪ್ರಯಾಗಕ್ಷೇತ್ರದ ಮಾಧವನ ದೇವಾಲಯದಲ್ಲಿ ಇದ್ದನು.

**ಜಾಗರಸ್ತು ಕೃತಸ್ತೇನ ಕೃಷ್ಣಾಯಾರ್ಘ್ಯಂ ನಿವೇದಿತಮ್ ॥ ೪೬ ॥**
**ಪುಷ್ಪಾಂಜಲಿಃ ಕೃತಾನೇನ ಶ್ರುತಾ ವಿಷ್ಣುಕಥಾ ಶುಭಾ ।**
**ತಥೈವ ಮಹತಾಂ ಸಂಗೋ ಜಾತೋ ದೈವಾನ್ಮಹಾತ್ಮನಃ ॥ ೪೭ ॥**

ದೇವಾಲಯದಲ್ಲಿ ಅವನು ಕೃಷ್ಣನಿಗೆ ಅರ್ಘ್ಯವನ್ನು ಕೊಟ್ಟನು, ಪುಷ್ಪಾಂಜಲಿ ಯನ್ನು ಸಮರ್ಪಿಸಿದನು, ಪುಣ್ಯಕರವಾದ ವಿಷ್ಣುಕಥೆಯನ್ನು ಶ್ರವಣಮಾಡಿದನು, ದೈವಯೋಗದಿಂದ ಮಹಾತ್ಮರ ಸಂಗದಲ್ಲಿದ್ದನು.

**ವೇಶ್ಯಾಗಾರೇ ಪ್ರಯಾಗೇ ತು ಸ್ಥಿತಂ ದುಷ್ಟಾತ್ಮನಾ ಮಯಾ ।**
**ನ ಕೃತಃ ಪುಣ್ಯದಿವಸೇ ಜಾಗರೋ ವಿಷ್ಣುವಲ್ಲಭಃ ॥ ೪೮ ॥**

ನೀಚನಾದ ನಾನು ಆ ಪುಣ್ಯದಿನದ ರಾತ್ರಿಯಲ್ಲಿ ಪ್ರಯಾಗದಲ್ಲಿ ವೇಶ್ಯೆಯ ಮನೆಯಲ್ಲಿದ್ದೆ. ವಿಷ್ಣುವಿಗೆ ಪ್ರೀತಿಕರವಾದ ಜಾಗರಣೆ ಮಾಡಲಿಲ್ಲ.

**ತಥಾ ಕೃಷ್ಣಜಯಂತ್ಯಾಂ ನೋ ಕೃಷ್ಣಾಯಾರ್ಘ್ಯಂ ನಿವೇದಿತಮ್ ।**
**ಸರ್ವಪುಣ್ಯಾಧಿಕಃ ಕಾಲೋ ವೃಥಾ ನೀತೋ ಮಯಾತ್ರ ವೈ ॥ ೪೯ ॥**
**ಪೂರ್ವಂ ಚ ಸಮಕರ್ಮಾಣೌ ಸಹಾಧೀತೌ ಸಹಾಶ್ರುತೌ ।**
**ತಥಾಪಿ ಗತಿವೈಷಮ್ಯಮಾವಯೋಃ ವಿಷ್ಣುಕಿಂಕರೌ ॥ ೫೦ ॥**

ಕೃಷ್ಣಜಯಂತಿಯಂದು ನಾನು ಅರ್ಘ್ಯ ಕೊಡಲಿಲ್ಲ. ಪುಣ್ಯಕಾಲಗಳಲ್ಲಿ ಶ್ರೇಷ್ಠವಾದ ಆ ರಾತ್ರಿಯನ್ನು ನಾನು ವ್ಯರ್ಥವಾಗಿ ಕಳೆದೆ. ಈ ಹಿಂದೆ ನಾವಿಬ್ಬರೂ ಒಂದೇ ವಿಧವಾದ ಕರ್ಮಗಳನ್ನು ಆಚರಿಸಿದ್ದೆವು, ಒಟ್ಟಿಗೆ ವೇದಾಧ್ಯಯನ ಮಾಡಿದ್ದೆವು, ಒಟ್ಟಿಗೆ ಸಚ್ಛಾಸ್ತ್ರಗಳನ್ನು ಶ್ರವಣಮಾಡಿದ್ದೆವು. ಹಾಗಿದ್ದರೂ ನಮ್ಮಿಬ್ಬರಿಗೂ ಗತಿಯಲ್ಲಿ ಪಕ್ಷಪಾತ ಬರಲು ಕಾರಣವೇನು ?

**ಕಸ್ಮಾಜ್ಜಾತಂ ಚ ವದತಂ ವಿಸ್ತರಾನ್ಮೇ ಮಹಾಮತೀ ।**
**ಇತಿ ತದ್ವಚನಂ ಶ್ರುತ್ವಾ ಸುವೃತ್ತಸ್ಯ ಮಹಾತ್ಮನಃ ॥ ೫೧ ॥**
**ಪ್ರತ್ಯೂಚತುರ್ವಿಷ್ಣುದೂತೌ ಸುವೃತ್ತಂ ವಿಸ್ಮಯಾಕುಲಮ್ ।**
**ಶೃಣು ಧರ್ಮರಹಸ್ಯಂ ತ್ವಂ ವಿಚಿತ್ರಂ ರೋಮಹರ್ಷಣಮ್ ॥ ೫೨ ॥**

ಈ ವಿಚಾರವನ್ನು ವಿಸ್ತಾರವಾಗಿ ಹೇಳಿರಿ. ಮಹಾತ್ಮನಾದ ಸುವೃತ್ತನ ಈ ಪ್ರಶ್ನೆಯನ್ನು ಕೇಳಿ ವಿಸ್ಮಿತನಾದ ಅವನಿಗೆ ವಿಷ್ಣುದೂತರು ಉತ್ತರವನ್ನು ಕೊಟ್ಟರು—ಕೇಳಿದರೆ ರೋಮಾಂಚನವಾಗುವ ಧರ್ಮದ ರಹಸ್ಯವನ್ನು ಹೇಳುತ್ತೇವೆ, ಕೇಳು :

**ಕರ್ಮಣಾ ಕೃತಿಮಾತ್ರಂ ತು ನ ದದಾತಿ ಫಲಂ ಮಹತ್ ।**
**ಸರ್ವೇಷಾಮಪಿ ಧರ್ಮಾಣಾಂ ಮನಃಶುದ್ಧಿರ್ಹಿ ಕಾರಣಮ್ ॥ ೫೩ ॥**

ಕೇವಲ ಕರ್ಮಮಾತ್ರದಿಂದ ಮಹತ್ತಾದ ಫಲವು ದೊರೆಯುವುದಿಲ್ಲ. ಎಲ್ಲ ಧರ್ಮಕಾರ್ಯಗಳ ಆಚರಣೆಗೂ ಅಂತಃಕರಣ ಶುದ್ಧಿಯೇ ಮುಖ್ಯ ಕಾರಣ.

**ಮನಸಾ ಚಂಚಲೇನೈವ ಕೃತಂ ಕರ್ಮ ಚ ದುಃಖದಮ್ ।**
**ಶುದ್ಧೇನ ಚೇತಸಾ ಕರ್ಮ ಕೃತಂ ಭೂರಿ ಫಲಪ್ರದಮ್ ॥ ೫೪ ॥**

ಚಂಚಲಮನಸ್ಸಿನಿಂದ ಮಾಡಿದ ಕರ್ಮವು ದುಃಖವನ್ನುಂಟುಮಾಡುತ್ತದೆ. ಅಂತಃಕರಣಶುದ್ಧಿಯಿಂದ ಆಚರಿಸಿದ ಕರ್ಮವು ಮಹತ್ತಾದ ಫಲವನ್ನು ಕೊಡುತ್ತದೆ.

**ಮನಸಾ ಚಿಂತಿತೋ ವಾಪಿ ಧರ್ಮಃ ಫಲವಿವರ್ಧನಃ ।**
**ಕೃತಂ ಭೂರ್ಯಸಕೃತ್ಕರ್ಮ ಚಿತ್ತೇನಾಶುಭಚಿಂತಯಾ ॥ ೫೫ ॥**
**ತಸ್ಮಾತ್ತು ನರಕಂ ಯಾತಿ ಘೋರೇಣ ಚ ತಥಾ ಹ್ಯಸೌ ।**
**ತ್ವಯಾ ತು ಗಮ್ಯತೇ ಲೋಕೋ ಹ್ಯಪ್ರಾಪ್ಯೋ ವೈ ದುರಾತ್ಮನಾಮ್ ॥**

ಶುದ್ಧವಾದ ಮನಸ್ಸಿನಿಂದ ಶುಭಕರ್ಮಗಳಾಚರಣೆಯನ್ನು ಆಲೋಚಿಸಿದರೂ ಪುಣ್ಯವು ಅಭಿವೃದ್ಧಿಯಾಗುತ್ತದೆ. ದುಷ್ಟವಾದ ಮನಸ್ಸಿನಿಂದ ವೃತ್ತನು ಮಾಡಿದಂತೆ ಅಶುಭ ಕರ್ಮಾಚರಣೆಯ ಆಲೋಚನೆ ಮಾಡಿದರೂ ಸಹ ಘೋರವಾದ ನರಕಕ್ಕೆ ಹೋಗುತ್ತಾನೆ—ನೀನಾದರೋ ದುರಾತ್ಮರಿಗೆ ಅಲಭ್ಯವಾದ ಲೋಕಕ್ಕೆ ಹೋಗುತ್ತೀಯೆ.

**ಚಿಂತಯಾ ಶುಭಯಾ ದಾತುರ್ವಿಷ್ಣೋರ್ದೇವಸ್ಯ ಚಕ್ರಿಣಃ ।**
**ಇತ್ಯುಕ್ತೇ ವಿಷ್ಣುದೂತಾಭ್ಯಾಂ ಸುವೃತ್ತೋ ವಾಕ್ಯಮಬ್ರವೀತ್ ॥ ೫೭ ॥**

ಶುಭಕರವಾದ ಸತ್ಕರ್ಮಗಳ ವಿಷಯದಲ್ಲಿ ಆಲೋಚನೆಮಾಡಿದರೂ ಚಕ್ರಧಾರಿಯಾದ ವಿಷ್ಣುವಿನ ಲೋಕಕ್ಕೆ ತೆರಳುತ್ತಾನೆ. ಹೀಗೆಂದು ವಿಷ್ಣುದೂತರು ನುಡಿಯಲು ಸುವೃತ್ತನು ಹೇಳಿದನು :

**ನೈನಂ ವಿಹಾಯ ಗಂತುಂ ಮೇ ಮನ ಉತ್ಸಹತೇ ಪ್ರಭೋ ।**
**ಕಥಂ ವಾ ಯಮಪಾಶಾಭ್ಯಾಂ ಮುಕ್ತಿಃ ಸ್ಯಾದ್ಭ್ರಾತುರಸ್ಯ ಮೇ ॥ ೫೮ ॥**
**ವದತಾಂ ಕರುಣಾರ್ದ್ರೇಣ ಚಿತ್ತೇನಾನುಸ್ಮರಂ ಚ ಮಾಮ್ ।**
**ಆಶ್ರುತ್ಯೈವಂ ಸುವೃತ್ತೋಕ್ತಮೂಚತುಃ ವಿಷ್ಣುಕಿಂಕರೌ ॥ ೫೯ ॥**

ನನ್ನ ಸಹೋದರನಾದ ವೃತ್ತನನ್ನು ಬಿಟ್ಟು ನಾನು ಮಾತ್ರ ಸದ್ಗತಿಗೆ ಹೋಗಲು ಮನಸ್ಸು ಒಪ್ಪುತ್ತಿಲ್ಲ ; ಅವನಿಗೆ ಯಮಪಾಶದಿಂದ ಬಿಡುಗಡೆಯಾಗಲು ಯಾವ ಮಾರ್ಗ ಎಂಬುದನ್ನು ಕರುಣಾಶಾಲಿಗಳಾದ ನೀವು ನನ್ನ ಮೇಲಿನ ಕರುಣೆ ಯಿಂದ ಹೇಳಬೇಕೆನ್ನಲು ಆ ಮಾತನ್ನು ಲಾಲಿಸಿದ ವಿಷ್ಣುದೂತರು ನುಡಿದರು :

**ಯದ್ಯಸ್ತಿ ತೇ ದಯಾ ತಸ್ಮಿನ್ ಮಾಘಸ್ನಾನಫಲಂ ಶುಭಮ್ ।**
**ಪೂರ್ವಜನ್ಮಕೃತಂ ತಸ್ಮಿನ್ ಮನಃಪೂರ್ವಂ ಸ್ವಸುಃಸ್ಥಿತಮ್ ॥ ೬೦ ॥**
**ದೇಹಿ ತತ್ಪುಣ್ಯಮತುಲಂ ಮುಕ್ತಿರಸ್ಯ ಭವಿಷ್ಯತಿ ।**

ನಿನಗೆ ವೃತ್ತನಲ್ಲಿ ದಯೆ ಇರುವುದಾದರೆ ನೀನು ಹಿಂದಿನ ಜನ್ಮದಲ್ಲಿ ಮಾಡಿದ ಶುಭಕರವಾದ ಮಾಘಸ್ನಾನದ ಫಲವನ್ನು ಅವನಿಗೆ ಮನಃಪೂರ್ವಕವಾಗಿ ಕೊಡು. ಅದು ಎಣೆಯಿಲ್ಲದ ಪುಣ್ಯವಾದ ಪ್ರಯುಕ್ತ ಅವನಿಗೆ ಮುಕ್ತಿಯು ದೊರೆಯುತ್ತದೆ.

**ವಿಷ್ಣುದೂತವಚಃ ಶ್ರುತ್ವಾ ಸುವೃತ್ತಃ ಸುಮನಾದ್ವಿಜಃ ॥ ೬೧ ॥**
**ದದೌ ತೇನೋಕ್ತಮಾರ್ಗೇಣ ಪುಣ್ಯಂ ತಸ್ಮೈ ಸಮಾಹಿತಃ ।**
**ತೇನ ಪುಣ್ಯಪ್ರಭಾವೇನ ಮುಕ್ತೋಽಭೂದ್ಯಮಪಾಶತಃ ॥ ೬೨ ॥**

ವಿಷ್ಣುದೂತರ ಮಾತನ್ನು ಕೇಳಿ ಬ್ರಾಹ್ಮಣಶ್ರೇಷ್ಠನಾದ ಸುವೃತ್ತನು ಅವರು ಹೇಳಿದ ಕ್ರಮದಂತೆ ಮಾಘಸ್ನಾನದ ಪುಣ್ಯವನ್ನು ವೃತ್ತನಿಗೆ ಸಂತೋಷದಿಂದ ಕೊಟ್ಟನು. ಆ ಪುಣ್ಯಪ್ರಭಾವದಿಂದ ವೃತ್ತನಿಗೆ ಯಮಪಾಶದಿಂದ ಬಿಡುಗಡೆ ಯಾಯಿತು.

**ತತೋ ಭ್ರಾತ್ರಾ ಸಹಾಸ್ಥಾಯ ವಿಮಾನಂ ಪತಗದ್ಯುತಿ ।**
**ವಿಷ್ಣುಲೋಕಂ ಗತೋ ಧೀಮಾನ್ ವಿಷ್ಣುಪಾರ್ಷದಚೋದಿತಃ ೬೩ ॥**

ನಂತರ ವೃತ್ತನು ತನ್ನ ಸಹೋದರನಿಂದ ಸಹಿತನಾಗಿ ತೇಜಸ್ಸಿನಿಂದ ಕೂಡಿದ ವಿಮಾನದಲ್ಲಿ ಕುಳಿತು ವಿಷ್ಣುದೂತರ ಆಜ್ಞಾನುಸಾರವಾಗಿ ವಿಷ್ಣುಲೋಕಕ್ಕೆ ತೆರಳಿದನು.

**ತಸ್ಮಾದ್ದಾನಂ ತಪೋ ಹೋಮಃ ಸ್ವಾಧ್ಯಾಯಃ ಪಿತೃತರ್ಪಣಮ್ ।**
**ನಿತ್ಯಂ ನೈಮಿತ್ತಿಕಂ ಚಾಪಿ ಚರೇತ್ ಶುದ್ಧೇನ ಚೇತಸಾ ॥ ೬೪ ॥**

**ತೇನ ಕಾಮಾನವಾಪ್ನೋತಿ ಭುಕ್ತಿಂ ಮುಕ್ತಿಂ ನ ಸಂಶಯಃ ।**
**ಅವಶೀಕೃತಚಿತ್ತಸ್ಯ ಕುತೋ ಯೋಗಸಮಾಧಯಃ ॥ ೬೫ ॥**

ಶಾಂಡಿಲ್ಯರು ಹೇಳಿದರು—ಆದುದರಿಂದ ನಾವು ಮಾಡುವ ತಪಸ್ಸು, ಹೋಮ, ದಾನ, ಶಾಸ್ತ್ರಾಧ್ಯಯನ, ಪಿತೃತರ್ಪಣ, ಮುಂತಾದ ನಿತ್ಯ-ನೈಮಿತ್ತಿಕ ಕರ್ಮಗಳನ್ನು ಶುದ್ಧವಾದ ಮನಸ್ಸಿನಿಂದ ಆಚರಿಸಬೇಕು. ಹೀಗೆ ಮಾಡುವುದರಿಂದ ಐಹಿಕ ಕಾಮನಾಗಳನ್ನು ಪಡೆಯುತ್ತಾನೆ, ನಂತರ ಮುಕ್ತಿಯನ್ನೂ ಹೊಂದುತ್ತಾನೆ. ಆದರೆ ಮನಸ್ಸನ್ನು ಸ್ವಾಧೀನದಲ್ಲಿ ಇಟ್ಟುಕೊಳ್ಳದವನಿಗೆ ಸಮಾಧಿಯೋಗ ಮೊದಲಾದ ಸಾಧನೆಗಳು ಹೇಗೆ ಲಭ್ಯ ?

**ಮನೋನಿಗ್ರಹಣೇ ತಸ್ಮಾದ್ಯತ್ನಂ ಕುರ್ಯಾದ್ವಿಚಕ್ಷಣಃ ।**
**ಸಚ್ಛಾಸ್ತ್ರಶ್ರವಣೇನೈವ ಮನಸೋ ನಿಗ್ರಹೋ ಭವೇತ್ ॥ ೬೬ ॥**

ಜ್ಞಾನಿಯಾದವನು ಮನಸ್ಸನ್ನು ನಿಗ್ರಹಿಸಲು ಪ್ರಯತ್ನಿಸಬೇಕು. ಸಚ್ಛಾಸ್ತ್ರಗಳನ್ನು ಆದರದಿಂದ ಶ್ರವಣಮಾಡುವುದೇ ಮನಸ್ಸನ್ನು ನಿಗ್ರಹಿಸಲು ಸಾಧನ.

**ಸಂಪ್ರದಾಯಜ್ಞಗುರುಣಾ ಸಂಶಯಚ್ಛೇದಶಕ್ತಿನಾ ।**
**ಶ್ರೋತವ್ಯಂ ಸತತಂ ಭಕ್ತ್ಯಾ ಸತ್ಕರ್ಮ ಶ್ರುತಿಪೂರ್ವಕಮ್ ॥ ೬೭ ॥**

ಸಂಪ್ರದಾಯವನ್ನು ಬಲ್ಲ, ಸಂಶಯಗಳನ್ನು ಪರಿಹರಿಸಲು ಸಮರ್ಥನಾದ ಗುರುಮುಖದಿಂದ ಭಕ್ತಿಪುರಸ್ಸರವಾಗಿ ನಿತ್ಯದಲ್ಲಿಯೂ ಸತ್ಕರ್ಮನಿರತನಾಗಿ ಸಚ್ಛಾಸ್ತ್ರವನ್ನು ಶ್ರವಣಮಾಡಬೇಕು.

**ತೇನಾಂತಃಕರಣಕಾಲುಷ್ಯಂ ಪ್ರಯಾತ್ಯೇವ ನ ಸಂಶಯಃ ।**
**ಗುರುಶುಶ್ರೂಷಯಾ ಭಕ್ತ್ಯಾ ಶ್ರದ್ಧಯಾ ಚ ದಮೇನ ಚ ॥**
**ಶಮೇನ ನಿಯಮೇನೈವ ಯೋಗೀ ಯೋಗಿತ್ವಮಾಪ್ನುಯಾತ್ ॥ ೬೮ ॥**

ಹೀಗೆ ಶ್ರವಣಮಾಡುವುದರಿಂದ ಮನಸ್ಸಿನ ಕಲ್ಮಷವೆಲ್ಲ ಹೋಗುತ್ತದೆ. ಗುರುವನ್ನು ಭಕ್ತಿಯಿಂದ ಸೇವೆಮಾಡುವುದರಿಂದ, ಶ್ರದ್ಧೆಯಿಂದ ಶ್ರವಣಮಾಡುವುದರಿಂದ, ಇಂದ್ರಿಯನಿಗ್ರಹದಿಂದ, ಶಾಂತಸ್ವಭಾವದಿಂದ, ಜೀವನಕ್ರಮದಲ್ಲಿ ನಿಯಮವನ್ನು ಅನುಸರಿಸುವುದರಿಂದ ಯೋಗಿಯಾಗಲು ಪ್ರಯತ್ನಮಾಡುತ್ತಿರುವವನು ನಿಜವಾಗಿ ಯೋಗಿಯಾಗುತ್ತಾನೆ.

ಇತಿ ಶ್ರೀ ವಾಯುಪುರಾಣೇ ಮಾಘಮಾಸಮಾಹಾತ್ಮ್ಯೇ ಏಕವಿಂಶೋಽಧ್ಯಾಯಃ

ಶ್ರೀ ವಾಯುಪುರಾಣಾಂತರ್ಗತ ಮಾಘಮಾಸ ಮಾಹಾತ್ಮ್ಯೆಯಲ್ಲಿ
ಇಪ್ಪತ್ತೊಂದನೇ ಅಧ್ಯಾಯವು ಸಮಾಪ್ತಿಯಾಯಿತು.

## ಅಧ್ಯಾಯ ೨೨

**ಶಾಂಡಿಲ್ಯ ಉವಾಚ—**

**ಚಿತ್ತಸ್ವಾಸ್ಥ್ಯಂ ಯದಾ ನಾಸ್ತಿ ತದಾ ವಿಷ್ಣೋರ್ಮಹಾತ್ಮನಃ ।**
**ಸ್ಥೂಲರೂಪೇ ಮನಸ್ತತ್ರ ಧಿಯಾ ಸಂಧಾರಯೇದ್ಬುಧಃ ॥ ೧ ॥**

ಶಾಂಡಿಲ್ಯರು ನುಡಿದರು :

ಮನಸ್ಸು ಒಂದೇ ಸ್ಥಳದಲ್ಲಿ ನಿಲ್ಲಲು ಅಸಮರ್ಥವಾದಾಗ ಸಾಧಕನು ಕೌಶಲ್ಯದಿಂದ ತನ್ನ ಮನಸ್ಸನ್ನು ಮಹಾಮಹಿಮನಾದ ಶ್ರೀವಿಷ್ಣುವಿನ ಸ್ಥೂಲರೂಪದಲ್ಲಿ ನಿಲ್ಲಿಸಬೇಕು.

**ವಿಶೇಷಸ್ತತ್ರ ದೇಹೋsಯಂ ಮಹಾನಪಿ ಮಹೀಯಸಾಮ್ ।**
**ಜಿತೇಂದ್ರಿಯೋ ಜಿತಶ್ವಾಸೋ ನಿಃಸಂಗೋ ನಿಯತಾತ್ಮನಃ ॥ ೨ ॥**

ಈ ಸ್ಥೂಲರೂಪವು ಶ್ರೀವಿಷ್ಣುವಿನ ಎಲ್ಲ ದೊಡ್ಡ ರೂಪಗಳಲ್ಲಿಯೂ ಅತ್ಯಂತ ದೊಡ್ಡದಾದುದು. ಇಂದ್ರಿಯನಿಗ್ರಹವುಳ್ಳವನೂ, ಪ್ರಾಣಾಯಾಮದಲ್ಲಿ ಕುಶಲನೂ, ವೈರಾಗ್ಯಯುಕ್ತನೂ, ಮನಸ್ಸನ್ನು ಸ್ವಾಧೀನಪಡಿಸಿಕೊಂಡವನೂ ಈ ಸ್ಥೂಲರೂಪದಲ್ಲಿ ಮನಸ್ಸನ್ನು ಇಡಲು,

**ಭೂತಂ ಭಾವಿ ಭವಚ್ಚಾಪಿ ದೃಶ್ಯತೇ ಯತ್ರ ಚಾಖಿಲಮ್ ।**
**ವಿರಾಡ್ರೂಪೇ ಮನಸ್ತಸ್ಮಿನ್ ಧಾರಯೇದವ್ಯಯಾತ್ಮನಿ ॥ ೩ ॥**

ಅವನಿಗೆ ಭೂತ, ಭವಿಷ್ಯತ್, ವರ್ತಮಾನಗಳು ತಿಳಿಯುತ್ತವೆ. ಇಂತಹ ವಿರಾಡ್ರೂಪದಲ್ಲಿ ನಾಶರಹಿತನಾದ ಶ್ರೀಹರಿಯ ರೂಪವನ್ನು ಮನಸ್ಸಿನಲ್ಲಿಟ್ಟು ಚಿಂತಿಸಿದರೆ

**ಯಾ ಧಾರಣಾ ತ್ವಸ್ಯ ಪುಂಸೋ ದಹತ್ಯಾಶು ಮನೋಮಲಮ್ ।**

ಆ ಸಾಧಕನ ಮನಸ್ಸಿನ ಮಾಲಿನ್ಯವೆಲ್ಲ ಶೀಘ್ರದಲ್ಲಿಯೇ ನಾಶವಾಗುತ್ತದೆ.

**ಪಾತಾಲಂ ಪಾದಮೂಲೇ ಚ ಚಿಂತಯೇಚ್ಚ ರಸಾತಲಮ್ ॥ ೪ ॥**
**ಸಾಕ್ಷಾತ್ತು ವಿಷ್ಣೋಃ ಪ್ರಪದೇ ಗುಲ್ಫಯೋಸ್ತು ಮಹಾತಲಮ್ ।**
**ತಲಾತಲಂ ಜಂಘಯೋಶ್ಚ ಜಾನ್ವೋಶ್ಚ ಸುತಲಂ ತಥಾ ॥ ೫ ॥**
**ವಿತಲಂ ಚಾತಲಂ ಚೋರ್ವೋರ್ಜಘನೇ ಚ ಮಹೀತಲಮ್ ।**
**ನಾಭೌ ನಭಸ್ತಲಂ ವಿಷ್ಣೋಃ ಹೃದಿ ಜ್ಯೋತಿರ್ಗಣಂ ವಿದುಃ ॥ ೬ ॥**

ಆ ವಿರಾಡ್ರೂಪದಲ್ಲಿ ಈ ರೀತಿ ಚಿಂತಿಸಬೇಕು : ಪಾದಮೂಲದಲ್ಲಿ ಪಾತಾಲ ಲೋಕ, ಪಾದದ ಕೊನೆಯಲ್ಲಿ ರಸಾತಲ, ಪಾದದ ಹರಡಿನಲ್ಲಿ ಮಹಾತಲ, ತೊಡೆಯ ಕೆಳಭಾಗದಲ್ಲಿ ತಲಾತಲ, ಮೊಣಕಾಲುಗಳಲ್ಲಿ ಸುತಲ, ತೊಡೆಗಳಲ್ಲಿ ಅತಲ ಮತ್ತು ವಿತಲ, ಕಟಿಪ್ರದೇಶದಲ್ಲಿ ಮಹೀತಲ, ನಾಭಿಯಲ್ಲಿ ನಭಸ್ಥಳ, ಹೃದಯದಲ್ಲಿ ನಕ್ಷತ್ರ ಸಮುದಾಯ (ಜ್ಯೋತಿರ್ಲೋಕ).

**ಗ್ರೀವಾಯಾಂ ತು ಮಹರ್ಲೋಕೋ ವದನೇ ತು ಜನಸ್ತಥಾ ।**
**ಲಲಾಟೇ ತು ತಪೋಲೋಕಂ ಸತ್ಯಂ ಶೀರ್ಷ್ಣಿ ಮಹಾತ್ಮನಃ ॥ ೭ ॥**

**ಇಂದ್ರಾದ್ಯಾ ಬಾಹವಸ್ತಸ್ಯ ದಿಗ್ದೇವಾಃ ಶ್ರೋತ್ರಯೋರ್ವಿದುಃ ।**
**ಆಹುಸ್ತದಿಂದ್ರಿಯೇ ಶಬ್ದಂ ನಾಸಾಯಾಮಶ್ವಿನೌ ವಿದುಃ ॥ ೮ ॥**

**ಘ್ರಾಣೇಂದ್ರಿಯೇ ತಥಾ ಗಂಧಂ ಮುಖೇ ಚಾಗ್ನಿಸಮುದ್ಭವಃ ।**
**ತಸ್ಯ ದ್ಯೌರಕ್ಷಿಣೀ ಪ್ರೋಕ್ತೇ ಚಕ್ಷುಃ ಶಶಿದಿವಾಕರೌ ॥ ೯ ॥**

ಕುತ್ತಿಗೆಯಲ್ಲಿ ಮಹರ್ಲೋಕ, ಮುಖದಲ್ಲಿ ಜನೋಲೋಕ, ಲಲಾಟದಲ್ಲಿ ತಪೋಲೋಕ, ಶಿರಸ್ಸಿನಲ್ಲಿ ಸತ್ಯಲೋಕ,—ಹೀಗೆ ಚಿಂತಿಸಬೇಕು. ಬಾಹುಗಳಲ್ಲಿ ಇಂದ್ರನೇ ಮೊದಲಾದ ದೇವತೆಗಳನ್ನು, ಕಿವಿಗಳಲ್ಲಿ ದಿಗ್ದೇವತೆಗಳನ್ನು ಮತ್ತು ಶಬ್ದವನ್ನು, ನಾಸಿಕೇಂದ್ರಿಯದಲ್ಲಿ ಅಶ್ವಿನೀ ದೇವತೆಗಳನ್ನು ಮತ್ತು ಗಂಧವನ್ನು, ಮುಖದಲ್ಲಿ ಅಗ್ನಿಯನ್ನು, ಕಣ್ಣುಗುಡ್ಡೆಗಳಲ್ಲಿ ಆಕಾಶವನ್ನು, ನೇತ್ರಗಳಲ್ಲಿ ಚಂದ್ರ ಸೂರ್ಯರನ್ನು,

**ಪಕ್ಷ್ಮಣೀ ಚಾಹನೀ ತಸ್ಯ ಸಂಧ್ಯೇ ಚಾಸ್ಯ ಚ ವಾಸಸೀ ।**
**ಮೂರ್ಧಜೇಷ್ವಂಬುವಾಹಾಶ್ಚ ಹೃದಯೇಽವ್ಯಕ್ತಮೇವ ಚ ॥ ೧೦ ॥**

**ವಿಕಾರಕೋಶಶ್ಚಂದ್ರಶ್ಚ ಮನಸ್ತಸ್ಯ ಮಹಾತ್ಮನಃ ।**
**ಮನೋವಿಜ್ಞಾನಶಕ್ತಿಂ ಚ ಗಿರಿತ್ರಂ ಚಾಂತರಾದಯಃ ॥ ೧೧ ॥**

**ಅಶ್ವಾಶ್ವತರ್ಯುಷ್ಟ್ರಗಜಾ ನಖೇಷ್ವಸ್ಯ ಮಹಾತ್ಮನಃ ।**
**ಮನೀಷಾಯಾಂ ಮನುಂ ಚಾಹುಃ ನಿವಾಸೇ ಮನುಜಂ ವಿದುಃ ॥ ೧೨ ॥**

ಎವೆಗಳಲ್ಲಿ ದಿವಸಗಳು, ಧಾರಣಮಾಡಿರುವ ವಸ್ತ್ರದಲ್ಲಿ ಸಂಧ್ಯೆಗಳು, ಕೂದಲು ಗಳಲ್ಲಿ ನೀರಿನಪ್ರವಾಹಗಳು, ಹೃದಯದಲ್ಲಿ ಅವ್ಯಕ್ತಾಕಾಶ, ಮನಸ್ಸಿನ ವಿಕಾರಕೋಶ ದಲ್ಲಿ ಚಂದ್ರ, ಮನಸ್ಸಿನಲ್ಲಿ ವಿಜ್ಞಾನಶಕ್ತಿ, ಉಗುರುಗಳಲ್ಲಿ ಗಿರಿತ್ರಗಳು, ತೊಡೆಗಳಲ್ಲಿ ಕುದುರೆ, ಹೇಸರಗತ್ತೆ, ಒಂಟೆ, ಆನೆಗಳು, ಬುದ್ಧಿಯಲ್ಲಿ ಮನು, ನಿವಾಸದಲ್ಲಿ ಮನುಗಳೂ,

ಗಂಧರ್ವಚಾರಣಾದ್ಯಾಶ್ಚ ಸ್ವರೇ ವಿಷ್ಣೋರ್ಮಹಾತ್ಮನಃ ।
ವಚಾಂಸಿ ತದ್ವ್ಯಾಹರಣಂ ಸ್ಮೃತಾವಸುರಸಂತತಿಃ ॥ ೧೩ ॥

ಮೃಗಾಶ್ಚ ಪಶವಶ್ಚೈವ ಶ್ರೋಣಿದೇಶೇ ಮಹಾತ್ಮನಃ ।
ಕುಕ್ಷೌ ಸಮುದ್ರಾಃ ಸರ್ವೇಽಪಿ ನದ್ಯೋ ನಾಡೀಷು ಸಂಸ್ಥಿತಾಃ ॥ ೧೪ ॥

ಗಿರಯಶ್ಚಾಸ್ಥಿಸಂಘೇಷು ತರವಶ್ಚ ತನೂರುಹಾಃ ।
ಬ್ರಾಹ್ಮಣಶ್ಚ ಮುಖೇ ತಸ್ಯ ಬಾಹ್ವೋಃ ಕ್ಷತ್ರಂ ವಿದೋ ವಿದುಃ ॥ ೧೫ ॥

ಊರೌ ವೈಶ್ಯಃ ಪದೇ ಶೂದ್ರಃ ತಲೇ ಸಂಕರಜಾತಯಃ ।
ಗುಹ್ಯಂ ಪ್ರಜಾಪತಿಂ ಚಾಹುಃ ವೃಷಣೇ ಮಿತ್ರಮೇವ ಚ ॥ ೧೬ ॥

ವೀರ್ಯೇ ಚಾನ್ನಂ ಸ್ಥಿತಂ ಚಾಹುಃ ಶ್ವಸಿತೇ ಚ ಸದಾಗತಿಃ ।
ಗತಿರ್ವಯಶ್ಚ ಜಂತೂನಾಂ ಬ್ರಹ್ಮಾಯುಃ ಭ್ರೂವಿಜೃಂಭಣಮ್ ॥ ೧೭ ॥

ಮಹಾಮಹಿಮನಾದ ವಿಷ್ಣುವಿನ ಸ್ವರದಲ್ಲಿ ಚಾರಣರೂ, ಗಂಧರ್ವರೂ, ವಚನಗಳಲ್ಲಿ ವ್ಯವಹಾರಗಳೂ, ಸ್ಮೃತಿಯಲ್ಲಿ ಅಸುರಸಮುದಾಯವೂ, ಕಟಿಯ ಹಿಂಭಾಗದಲ್ಲಿ ಮೃಗಗಳೂ, ಪಶುಗಳೂ, ಕುಕ್ಷಿಯಲ್ಲಿ ಸಮುದ್ರಗಳೂ, ನಾಡಿಗಳಲ್ಲಿ ನದೀ ನದಗಳು, ಅಸ್ಥಿಗಳಲ್ಲಿ ಪರ್ವತಗಳು, ಕೂದಲುಗಳಲ್ಲಿ ಗಿಡಗಳು, ಮುಖದಲ್ಲಿ ಬ್ರಾಹ್ಮಣರು, ಬಾಹುಗಳಲ್ಲಿ ಕ್ಷತ್ರಿಯರು, ತೊಡೆಗಳಲ್ಲಿ ವೈಶ್ಯರು, ಪಾದಗಳಲ್ಲಿ ಶೂದ್ರರು, ಪಾದತಲದಲ್ಲಿ ಸಂಕರಜಾತಿಗಳು, ಗುಹ್ಯಶಿಶ್ನದಿಂದ ಪ್ರಜಾಪತಿಯು, ವೃಷಣ ಅಂಡದಲ್ಲಿ ಮಿತ್ರನು, ವೀರ್ಯದಲ್ಲಿ ಅನ್ನ, ಶ್ವಾಸೋಚ್ಛ್ವಾಸದಲ್ಲಿ ವಾಯು, ಗತಿಗಳಲ್ಲಿ ಜಂತುಗಳ ವಯಸ್ಸು, ಭ್ರೂವಿಜೃಂಭಣೆಯಲ್ಲಿ ಚತುರ್ಮುಖಬ್ರಹ್ಮದೇವರ ಆಯುಸ್ಸು.

ತಾಲುರಾಪೋ ರಸೋ ಜಿಹ್ವಾ ಗಿರಶ್ಛಂದಾಂಸಿ ವೈ ಹರೇಃ ।
ದಂಷ್ಟ್ರಯೋಃ ಯಮಮೃತ್ಯೂ ಚ ದಂತಾನುಡುಗಣಾನ್ ವಿದುಃ ॥ ೧೮ ॥

ಜನೋನ್ಮಾದಕರೀ ಮಾಯಾ ಹಾಸಸ್ತಸ್ಯ ಮಹಾತ್ಮನಃ ।
ಜಗತ್ಸೃಷ್ಟಿಶ್ಚ ಮಹತೀ ಯಸ್ಯಾಪಾಂಗವಿಮೋಕ್ಷಣಮ್ ॥ ೧೯ ॥

ತಾಲುವೇ ನೀರು, ನಾಲಿಗೆಯೇ ರಸ, ಶ್ರೀಹರಿಯ ಮಾತುಗಳೇ ಛಂದಸ್ಸು, ಕೋರೇಹಲ್ಲುಗಳಲ್ಲಿ ಯಮನು, ಮೃತ್ಯುವು, ಹಲ್ಲುಗಳಲ್ಲಿ ನಕ್ಷತ್ರಗಣಗಳು, ಹಾಸ್ಯದ ಮಾತುಗಳಲ್ಲಿ ಜನರನ್ನು ಮಾಯೆಯಿಂದ ಆವರಿಸುವ ಶಕ್ತಿ, ಕಡೆಗಣ್ಣಿನ ನೋಟದಿಂದ ಜಗತ್ತಿನ ಸೃಷ್ಟಿ,

ಲಜ್ಜೋರ್ಧ್ವೋಷ್ಠೇ ಮಹಾವಿಷ್ಣೋಃ ಲೋಭಸ್ತಸ್ಯಾಧರೋಷ್ಠಕೇ ।
ಧರ್ಮಶ್ಚ ಸ್ತನಯೋರಾಹುಃ ಪೃಷ್ಠೇ ಚಾಧರ್ಮಪದ್ಧತಿಃ ॥ ೨೦ ॥

**ಯದೇತತ್ಸಕಲಂ ಲೋಕೇ ವಿಷ್ಣೋರಂಗೇಷು ಚಿಂತಯೇತ್ ।**
**ಅಲಮೇತಾವತಾ ಪುಂಸಃ ಪಾಪನಿರ್ಹರಣಾಯ ವೈ ॥ ೨೧ ॥**

ಶ್ರೀಹರಿಯ ಮೇಲಿನ ತುಟಿಯಲ್ಲಿ ಲಜ್ಜೆ, ಕೆಳತುಟಿಯಲ್ಲಿ ಲೋಭ, ಸ್ತನಗಳಲ್ಲಿ ಧರ್ಮ, ಪೃಷ್ಠಭಾಗದಲ್ಲಿ ರಾಹು-ಅಧರ್ಮ—ಈ ರೀತಿಯಿಂದ ಈ ಲೋಕದಲ್ಲಿ ಇರುವ ಸಮಸ್ತವನ್ನೂ ವಿಷ್ಣುವಿನ ವಿವಿಧ ಅವಯವಗಳಲ್ಲಿ ಚಿಂತಿಸಬೇಕು. ಮನುಷ್ಯನ ಪಾಪನಾಶಕ್ಕೆ ಇಷ್ಟು ಚಿಂತನೆಯು ಸಾಕು.

**ಗುಣಾನಾಂ ಕರ್ಮಣಾಂ ಚೈವ ಕೀರ್ತನಂ ವಾ ಗದಾಭೃತಃ ।**
**ಕಲೌ ಕಲುಷಚಿತ್ತಾನಾಂ ನರಾಣಾಮಲ್ಪಮೇಧಸಾಮ್ ॥ ೨೨ ॥**

**ಗುಣಸಂಕೀರ್ತನಂ ವಿಷ್ಣೋಃ ಸಕಲಾ ಧ್ಯಾನಸಂತತಿಃ ।**
**ವಿಷ್ಣೋರೇಕೈಕನಾಮಾಪಿ ಸರ್ವವೇದಾಧಿಕಂ ಮತಮ್ ॥ ೨೩ ॥**

ಗದಾಧಾರಿಯಾದ ಶ್ರೀಹರಿಯ ಗುಣ-ಕರ್ಮಗಳ ಕೀರ್ತನೆಯು ಕಲಿಯುಗ ದಲ್ಲಿ ಕಲ್ಮಷದಿಂದಯುಕ್ತವಾದ ಅಲ್ಪಬುದ್ಧಿಯುಳ್ಳ ಮನುಷ್ಯರಿಗೆ ಪಾಪವನ್ನು ನಾಶಮಾಡುವ ಉಪಾಯ. ವಿಷ್ಣುವಿನ ಒಂದೊಂದು ನಾಮೋಚ್ಚಾರಣೆಯೂ ಸಕಲವೇದಗಳ ಅಧ್ಯಯನ ಮಾಡಿದ ಫಲಕ್ಕೆ ಕಾರಣ.

[ವಿಶೇಷಾಂಶ : **ಕೃತೌ ಯದ್ಧ್ಯಾಯತೇ ವಿಷ್ಣುಂ ತ್ರೇತಾಯಾಂ ಯಜತೇ ಮಖೈಃ।**
**ದ್ವಾಪರೇ ಪರಿಚರ್ಯಾಯಾಂ ಕಲೌ ತತ್ ಹರಿಕೀರ್ತನಾತ್ ॥**
—ಸ್ಮೃತಿವಾಕ್ಯ

ಕೃತಯುಗದಲ್ಲಿ ಶ್ರೀವಿಷ್ಣುವಿನ ಅನುಗ್ರಹಕ್ಕಾಗಿ ಉಗ್ರವಾದ ಧ್ಯಾನಮಾಡ ಬೇಕು. ತ್ರೇತಾಯುಗದಲ್ಲಿ ಯಜ್ಞಯಾಗಾದಿಗಳನ್ನು ಆಚರಿಸಬೇಕು. ದ್ವಾಪರಯುಗ ದಲ್ಲಿ ಪೂಜಾ, ಪರಿಚರ್ಯಾದಿಗಳನ್ನು ಮಾಡಬೇಕು. ಕಲಿಯುಗದಲ್ಲಿಯಾದರೋ ಅಷ್ಟೇ ಅನುಗ್ರಹವು ಭಕ್ತಿಯಿಂದ ಶ್ರೀಹರಿಯ ಕೀರ್ತನೆ ಮಾತ್ರದಿಂದ ದೊರೆಯುತ್ತದೆ.]

**ನಾಮ್ನಿ ಸಂಕೀರ್ತಿತೇ ನಿತ್ಯಂ ಕಿಂ ತಸ್ಯ ಸುಕೃತೈಃ ಪರೈಃ ।**
**ಮೃತಪತ್ಯಾ ಯಥಾ ನಾರ್ಯಾಃ ಸರ್ವಲಕ್ಷಣಸಂಪದಃ ॥ ೨೪ ॥**
**ಶರೀರಾಣಾಂ ಗತಾಸೂನಾಂ ಯಥಾಲಂಕರಣಕ್ರಿಯಾ ।**
**ವಿದ್ಯೋನಪುರುಷಸ್ಯೇವ ಸರ್ವೇಂದ್ರಿಯಪರಿಷ್ಕ್ರಿಯಾ ॥ ೨೫ ॥**

ಶ್ರೀಹರಿಯ ನಾಮವನ್ನು ನಿತ್ಯದಲ್ಲಿಯೂ ಸಂಕೀರ್ತನೆ ಮಾಡುವವನಿಗೆ ಬೇರೆ ಪುಣ್ಯಕರ್ಮಗಳು ಇನ್ನೇಕೆ ? ಸಂಕೀರ್ತನೆ ಇಲ್ಲದೆ ಕೇವಲ ಪುಣ್ಯಕರ್ಮಗಳನ್ನು ಮಾತ್ರವೇ ಆಚರಿಸಿದರೆ ಅದು ಪತಿಯನ್ನು ಕಳೆದುಕೊಂಡ ಸ್ತ್ರೀಯರು ಸಕಲಾಭರಣ

ಧರಿಸಿದಂತೆಯೆ ಸರಿ ! ಪ್ರಾಣಹೋದ ಶರೀರಗಳಿಗೆ ಎಲ್ಲ ವಿಧವಾದ ವೇಷಭೂಷಣ ಗಳಿಂದ ಅಲಂಕಾರಮಾಡಿದಂತೆ—ವಿದ್ಯೆಯೇ ಇಲ್ಲದ ಪುರುಷನು ತನ್ನ ಸಮಸ್ತ ಇಂದ್ರಿಯಗಳನ್ನೂ ಶುದ್ಧಗೊಳಿಸಿ ವಿಭೂಷಿತನಾದಂತೆ—

**ನಪುಂಸಕಸ್ಯ ಭಾರ್ಯೇವ ಪುಂಸೋ ವಂಧ್ಯಾಪರಿಗ್ರಹಃ ।**
**ಯಥೈವಾಪಯಶಾಃ ಪುತ್ರಃ ಕುಲಸ್ಯೇವ ದುರಾತ್ಮವಾನ್ ॥ ೨೬ ॥**

ನಪುಂಸಕನಿಗೆ ಪತ್ನಿಯಿರುವಹಾಗೆ, ಬಂಜೆಸ್ತ್ರೀಯನ್ನು ಲಗ್ನವಾದಂತೆ, ದುಷ್ಟನಾದ, ಅಪಯಶಸ್ಸನ್ನು ತರುವ ಪುತ್ರನು ಸತ್ಕುಲದಲ್ಲಿ ಹುಟ್ಟಿದಂತೆ

**ವಿಷ್ಣುಭಕ್ತಿವಿಹೀನಸ್ಯ ತಥಾ ಜನ್ಮ ನಿರರ್ಥಕಮ್ ।**

ವಿಷ್ಣುಭಕ್ತಿಯಿಲ್ಲದ ಪುರುಷನ ಜನ್ಮವು ಇವುಗಳಂತೆ ವ್ಯರ್ಥ.

**ಯಾ ಶಕ್ತಿಃ ಪಾಪನಿರ್ಹಾರೇ ನಾಮ್ನೋಽಸ್ತಿ ಮಹತೀ ವಿಭೋಃ ।**
**ತಾವತ್ಕರ್ತುಂ ನ ಶಕ್ನೋತಿ ಪಾತಕಂ ಪಾತಕೀಜನಃ ॥ ೨೭ ॥**

ಪರಮಾತ್ಮನ ನಾಮೋಚ್ಚಾರಣದಿಂದ ಎಷ್ಟು ಪಾಪಗಳು ನಾಶವಾಗುತ್ತವೆಯೋ ಅಷ್ಟು ಪಾಪಗಳನ್ನು ಆಚರಿಸುವುದಕ್ಕೆ ಎಂತಹ ಪಾಪಿಷ್ಠನಿಗೂ ಸಾಮರ್ಥ್ಯವಿಲ್ಲ.

**ಪರೇಣೋಚ್ಚಾರಿತಂ ವಾಪಿ ಶ್ರುತಂ ನಾಮಾಘಪಾವಕಮ್ ।**
**ನಯತ್ಯೂರ್ಧ್ವಂ ನ ಸಂದೇಹೋ ನರಕಸ್ಥಾನಪಿ ಧ್ರುವಮ್ ॥ ೨೮ ॥**

ಪಾಪರಾಶಿಯನ್ನು ಸುಡುವ ಶ್ರೀಹರಿಯ ನಾಮವನ್ನು ಇತರರು ಉಚ್ಚರಿಸಿದಾಗ ಕೇಳುವುದರಿಂದ ಸಹ ಸದ್ಗತಿಯಾಗುತ್ತದೆ. ನರಕದಲ್ಲಿರುವವರಿಗೂ ಸಹ ನಿಶ್ಚಯವಾಗಿ ಸದ್ಗತಿಯಾಗುತ್ತದೆ, ಸಂದೇಹವಿಲ್ಲ.

**ನ ಜಾನಂತಿ ನರಾಃ ಕಿಂವಾ ನಾರದಸ್ಯ ಮಹಾತ್ಮನಃ ।**
**ವಸತಾಂ ಯಮಲೋಕೇ ತು ನಾರಕಾಣಾಂ ಸಮುದ್ಧೃತಿಮ್ ॥ ೨೯ ॥**

ನರಕದಲ್ಲಿ ದುಃಖವನ್ನು ಅನುಭವಿಸುತ್ತಿರುವವರನ್ನು ಮಹಾತ್ಮರಾದ ನಾರದರು ಹೇಗೆ ಉದ್ಧಾರ ಮಾಡಿದರೆಂಬುದನ್ನು ಜನರು ಅರಿಯರೇ ?

ಅಷ್ಟಾವಿಂಶತಿದಿವ್ಯಪುರುಷಾ ಊಚುಃ—(ಶಾಂಡಿಲ್ಯರ ಉಪದೇಶವನ್ನು ಶ್ರವಣಮಾಡುತ್ತಿದ್ದ) ಇಪ್ಪತ್ತೆಂಟು ದಿವ್ಯಪುರುಷರು ಕೇಳಿದರು—

**ಕಿಂ ವ್ಯಧಾದ್ಯಮಲೋಕೇ ತು ನಾರದೋ ಭಗವಾನ್ ಮುನಿಃ ।**
**ಕಥಂ ವಾಭೂನ್ನಾರಕಾಣಾಮುದ್ಧಾರಃ ಪಾಪಕರ್ಮಣಾಮ್ ॥**
**ಏತತ್ ಬ್ರಹ್ಮನ್ ವದಾಶ್ಚರ್ಯಂ ಶ್ರೋತುಂ ಕೌತೂಹಲಂ ಹಿ ನಃ ॥೩೦॥**

ಜ್ಞಾನಿವರ್ಯರೇ, ಪರಮಪೂಜ್ಯರಾದ ನಾರದರು ನರಕದಲ್ಲಿದ್ದವರನ್ನು ಉದ್ಧರಿಸಲು ಏನು ಕ್ರಮ ಕೈಗೊಂಡರು, ನರಕವಾಸಿಗಳಿಗೆ ಹೇಗೆ ಸದ್ಗತಿಯಾಯಿತು ಎಂಬುದನ್ನು ಕೇಳಲು ನಮಗೆ ಕುತೂಹಲವಾಗಿದೆ, ದಯಮಾಡಿ ತಿಳಿಸಿರಿ.

**ಶಾಂಡಿಲ್ಯ ಉವಾಚ—**

**ಪುರಾ ತು ನಾರದೋ ಗತ್ವಾ ವೈಕುಂಠಂ ವಿಷ್ಣುಮಂದಿರಮ್ ।**
**ಸ್ತುತ್ವಾ ತು ವಿವಿಧೈಃ ಸ್ತೋತ್ರೈಃ ನಾರಾಯಣಮನಾಮಯಮ್ ॥ ೩೧ ॥**
**ಅನುಜ್ಞಾತಸ್ತತಸ್ತೇನ ದೇವೇಂದ್ರಭವನಂ ಯಯೌ ।**
**ದೃಷ್ಟ್ವಾ ತು ವಿಷ್ಣುಂ ತತ್ರಸ್ಥಾನ್ ವಿಶೇಷಾಂಶ್ಚಾಪ್ಯಚಿಂತಯತ್ ॥ ೩೨ ॥**

ಶಾಂಡಿಲ್ಯರು ನುಡಿದರು :

ಹಿಂದೆ ಒಂದುಬಾರಿ ನಾರದರು ಶ್ರೀವಿಷ್ಣುವಿನ ಮಂದಿರವಾದ ವೈಕುಂಠಕ್ಕೆ ಬಂದು, ನಿರ್ದೋಷನಾದ ಆ ಸರ್ವೋತ್ತಮನನ್ನು ನಾನಾಬಗೆಯಿಂದ ಸ್ತೋತ್ರ ಮಾಡಿ, ಅವನ ಅನುಜ್ಞೆಯನ್ನು ಪಡೆದು ದೇವೇಂದ್ರನ ಪಟ್ಟಣಕ್ಕೆ ಬಂದರು. ವಿಷ್ಣುವಿನ ಆರಾಧನೆಯಲ್ಲಿಯೇ ನಿರತರಾದ ಅಲ್ಲಿಯ ವಾಸಿಗಳನ್ನು ನೋಡಿ ಹೀಗೆ ಆಲೋಚಿಸಿದರು—

**ಇತಃ ಪರಂ ತು ಗಂತವ್ಯಂ ಮಯಾ ಕುತ್ರೇತಿ ನಾರದಃ ।**
**ಸರ್ವೇ ದೃಷ್ಟಾ ಮಯಾ ಲೋಕಾ ವಿಶೇಷಾ ಅಪಿ ತತ್ರಗಾಃ ॥ ೩೩ ॥**

ಎಲ್ಲ ಲೋಕಗಳನ್ನೂ ಅವುಗಳಲ್ಲಿರುವ ವಿಶೇಷಗಳನ್ನೂ ನೋಡಿರುತ್ತೇನೆ. ಇನ್ನು ಮುಂದೆ ನಾನು ಎಲ್ಲಿಗೆ ಹೋಗಬೇಕು ?

**ಕದಾಪ್ಯದೃಷ್ಟೋऽಲೋಕೋऽಯಂ ಯಮಸ್ಯ ಚ ಮಹಾತ್ಮನಃ ।**
**ಸ ದ್ರಷ್ಟವ್ಯೋ ಮಯೇದಾನೀಂ ನರಕಾ ಅಪಿ ದಾರುಣಾಃ ॥ ೩೪ ॥**
**ವಿಚಾರ್ಯೈವಂ ಯಯೌ ಧೀಮಾನ್ ಯಮಲೋಕಂ ದುರಾಸದಮ್ ।**
**ತತ್ರಾಪಶ್ಯನ್ಮುನೀಂದ್ರೋऽಸೌ ಪುರೀಂ ಸಂಯಮನೀಂ ಮಹಾನ್ ॥ ೩೫ ॥**

ಮಹಾತ್ಮನಾದ ಯಮದೇವರ ಲೋಕವನ್ನು ನಾನಿನ್ನೂ ನೋಡಿಲ್ಲ. ಈಗ ಆ ಲೋಕವನ್ನೂ, ಅಲ್ಲಿ ದುಃಖಪಡುತ್ತಿರುವವರನ್ನೂ ನೋಡಬೇಕು—ಹೀಗೆ

ಯೋಚಿಸಿ ಆ ಜ್ಞಾನಿಗಳು ದುಸ್ಸಾಧ್ಯವಾದ ಯಮಲೋಕಕ್ಕೆ ಹೋದರು. ಅಲ್ಲಿ ಮಹತ್ತರವಾದ ಯಮದೇವರ ಪಟ್ಟಣವನ್ನೆಲ್ಲ ನೋಡಿದರು.

**ನರಕಾನ್ ದಾರುಣಾಂಶ್ಚೈವ ಭೃಶಮಾಕ್ರಂದಿತಾನ್ ಜನಾನ್ ।**
**ತಪ್ತತಾಮ್ರಕಟಾಹಸ್ಥಾನ್ ಧಾವತಶ್ಚ ತತಸ್ತತಃ ॥ ೩೭ ॥**
**ತೈಲಕುಂಭೇ ನಿರುಚ್ಛ್ವಾಸೇ ಕ್ವಾಥ್ಯಮಾನಾನ್ ಕ್ವಚಿತ್ ಕ್ವಚಿತ್ ।**
**ತೈಲಯಂತ್ರೇ ಪೀಡ್ಯಮಾನಾನ್ ಇಕ್ಷುಯಂತ್ರೇ ತಥಾಪರಾನ್ ॥ ೩೮ ॥**

ನರಕದಲ್ಲಿ ಹಿಂಸೆಯನ್ನು ಅನುಭವಿಸಲು ಸಾಧ್ಯವಿಲ್ಲದೇ ಆರ್ತನಾದ ಮಾಡುತ್ತಿದ್ದ ಜನರನ್ನೂ, ಚೆನ್ನಾಗಿ ಕಾಯಿಸಿದ ತಾಮ್ರದ ಕೊಪ್ಪರಿಗೆಯಲ್ಲಿ ನಿಲ್ಲಲಾರದೆ, ಅತ್ತಿಂದಿತ್ತ ಓಡಾಡುತ್ತಿರುವ ಪಾಪಿಷ್ಠರನ್ನೂ, ಎಣ್ಣೆಯ ಕೊಡಗಳಲ್ಲಿ ಬಿದ್ದು ಉಸಿರಾಡಲು ಸಾಮರ್ಥ್ಯವಿಲ್ಲದೇ ಕುದಿಸಲ್ಪಡುತ್ತಿರುವ ಜನರನ್ನೂ, ಎಣ್ಣೆಯ ಗಾಣದಲ್ಲಿಯೂ, ಕಬ್ಬಿನ ರಸ ತೆಗೆಯುವ ಯಂತ್ರದಲ್ಲಿಯೂ ಹಿಂಸೆಗಳನ್ನು ಅನುಭವಿಸುತ್ತಿರುವವರನ್ನೂ,

**ಕ್ರಕಚೈರ್ಭಿದ್ಯಮಾನಾಂಶ್ಚ ಛಿನ್ನಾಂಗಾನಸಿಪತ್ರಕೈಃ ।**
**ವಜ್ರಕಲ್ಪಜಲೂಕಾಭಿಃ ಗೃಧ್ರೈಃ ಕಂಕೈರ್ಮದೋತ್ಕಟೈಃ ॥ ೩೯ ॥**
**ಶಿಂಶುಮಾರೈಸ್ತಥಾ ಮತ್ಸ್ಯೈಃ ಕೃಮಿಭಿಶ್ಚ ಸುದಾರುಣೈಃ ।**
**ಬಕೈಶ್ಚ ಪಕ್ಷಿಭಿಃ ಘೋರೈಃ ಮಾಂಸಾದ್ಯೈರ್ಜಲವಾಸಿಭಿಃ ॥ ೪೦ ॥**

ಗರಗಸ ಹಾಗೂ ಅಸಿಪತ್ರಗಳಿಂದ ಅಂಗಾಂಗಳನ್ನು ಕತ್ತರಿಸಿಕೊಳ್ಳಲ್ಪಡುತ್ತಿರುವವರನ್ನೂ, ವಜ್ರದಂತೆ ಕಠಿಣವಾದ ಜಿಗಣೆಗಳಿಂದ, ಹದ್ದುಗಳಿಂದ, ಮದೋನ್ಮತ್ತವಾದ ದೊಡ್ಡ ಹದ್ದುಗಳಿಂದ, ನೇಗಿಲುಗಳಿಂದ, ದೊಡ್ಡಮೀನುಗಳಿಂದ, ದಾರುಣವಾದ ಕ್ರಿಮಿಗಳಿಂದ, ಬಕಪಕ್ಷಿಗಳಿಂದ, ಘೋರವಾದ ಮಾಂಸಭಕ್ಷಕ ಜಲಚರ ಪ್ರಾಣಿಗಳಿಂದ, ಹಿಂಸೆಗೆ ಒಳಗಾಗಿರುವ ಜನರನ್ನೂ,

**ವಿಷ್ಠಾಕೂಪೇ ಮಹಾಘೋರೇ ಛಿನ್ನಾಂಗಾನ್ ವ್ರಣಸಂಚಿತಾನ್ ।**
**ಯಮದೂತೈಃ ಮಹಾಘೋರೈಃ ಪಾದಗ್ರಾಹಿಭಿರಂಜಸಾ ॥ ೪೦ ॥**
**ಶಿಲಾತಲೇ ಪ್ರೋಥ್ಯಮಾನಾನ್ ಚೂರ್ಣಿತಾಂಗಾನ್ ಜನಾನಪಿ ।**
**ಪಾಚಿತಾನ್ ಕ್ವಥಿತಾನ್ ಕ್ವಾಪಿ ತಪ್ತಾಯಃಪಿಂಡಭೋಜಿನಃ ॥ ೪೧ ॥**

ಮಹಾಘೋರವಾದ ವಿಷ್ಠಾಕೂಪವೆಂಬ ನರಕದ ಒಂದು ಭಾಗದಲ್ಲಿ ಅಂಗಾಂಗಗಳು ಕತ್ತರಿಸಲ್ಪಟ್ಟು ಗಾಯಗಳಿಂದ ಪೀಡಿತರಾದವರನ್ನೂ, ಘೋರರಾದ ಯಮದೂತರಿಂದ ಕಲ್ಲುಗಳಮೇಲೆ (ಬಂಡೆ) ಎಸೆಯಲ್ಪಟ್ಟು ಅದರಿಂದ ಅವಯವಗಳೂ

ಪುಡಿಪುಡಿಯಾದ ಜನರನ್ನೂ, ಬೇಯಿಸಲ್ಪಡುತ್ತಿರುವ—ಕುದಿಸಲ್ಪಡುತ್ತಿರುವ—ಕಾದ ಉಕ್ಕಿನ ಉಂಡೆಯನ್ನು ತಿನ್ನುತ್ತಿರುವ ಪಾಪಿಗಳನ್ನೂ,

**ತಪ್ತಸೀಸರಸಪ್ರೋತಕರ್ಣಯುಗ್ಮಾನಪಿ ಕ್ವಚಿತ್ ।**
**ಸೂಚೀಪೂರಿತಜಿಹ್ವಾಂಶ್ಚ ಜಿಹ್ವೋತ್ಪಾಟನದುಃಖಿತಾನ್ ॥ ೪೨ ॥**
**ವಹ್ನಿವರ್ಷೈಃ ಶಿಲಾವರ್ಷೈಃ ಶಸ್ತ್ರವರ್ಷೈಶ್ಚ ಪೀಡಿತಾನ್ ।**
**ಕ್ಷುಧಯಾ ಚಾಶ್ನತೋ ಮಾಂಸಾನ್ ಸ್ವಕಾಯಸ್ಥಾನನಲ್ಪಕಾನ್ ॥ ೪೩ ॥**

ಕಾದ ಸೀಸವನ್ನು ಕಿವಿಯಲ್ಲಿ ಹಾಕಿಸಿಕೊಳ್ಳುತ್ತಿರುವವರನ್ನೂ, ನಾಲಿಗೆಗಳನ್ನು ಸೂಜಿಗಳಿಂದ ಚುಚ್ಚಿಸಿಕೊಳ್ಳಲ್ಪಡುವವರನ್ನೂ, ನಾಲಿಗೆಯನ್ನು ಹೊರಗಡೆ ಎಳಿಸಿಕೊಳ್ಳಲ್ಪಡುವವರನ್ನೂ, ಬೆಂಕಿಮಳೆ ಕಲ್ಲುಗಳ ಮಳೆ ಆಯುಧಗಳ ಮಳೆಗಳಿಂದ ಪೀಡಿತರಾದವರನ್ನೂ, ಹಸಿವೆಯಿಂದ ತಮ್ಮ ಮೈಯಲ್ಲಿದ್ದ ಮಾಂಸವನ್ನೇ ತಿನ್ನುತ್ತಿರುವವರನ್ನೂ,

**ವ್ಯಾಧಿಭಿಃ ಪೀಡ್ಯಮಾನಾಂಶ್ಚ ಭಕ್ಷ್ಯಮಾಣಾನ್ ವೃಕಾದಿಭಿಃ ।**
**ಕ್ವಚಿತ್ತಾಡನತಸ್ತ್ರಸ್ತಾನ್ ತರ್ಜನ್ಯೈರ್ಭರ್ಜನ್ಯೈರಪಿ ॥ ೪೪ ॥**
**ಬದ್ಧಪಾದಭುಜಾದಂಡಾನ್ ಪೃಷ್ಠೇ ಜಾನುಹತಾನ್ ಜನಾನ್ ।**
**ಶಸ್ತ್ರಚ್ಛಿನ್ನಾಂಗಸಂಲಿಪ್ತಕ್ಷಾರದ್ರವ್ಯಾನನೇಕಶಃ ॥ ೪೫ ॥**

ಅನೇಕ ರೋಗಗಳಿಂದ ಪೀಡಿತರಾದವರನ್ನೂ, ತೋಳಗಳೇ ಮೊದಲಾದ ಕ್ರೂರ ಪ್ರಾಣಿಗಳಿಂದ ತಿನ್ನಲ್ಪಡುತ್ತಿರುವವರನ್ನೂ, ಹೊಡೆತಗಳಿಗೆ ಹೆದರಿಕೊಂಡು ನಿಂತ ಜನರನ್ನೂ, ಭರ್ಜನ (ಬೈಗಳು)ದಿಂದ ಭಯಪಟ್ಟವರನ್ನೂ, ಭುಜಪಾದಗಳನ್ನು ಬೆನ್ನುಗಳಲ್ಲಿ ಕಟ್ಟಿಸಿಕೊಳ್ಳಲ್ಪಟ್ಟವರನ್ನೂ, ಶಸ್ತ್ರಗಳಿಂದ ಕತ್ತರಿಸಲ್ಪಟ್ಟ ಛಿದ್ರವಾದ ಅಂಗಾಂಗಗಳಲ್ಲಿ ಕ್ಷಾರವಾದ ದ್ರಾವಕಗಳನ್ನು ತುಂಬಿಸಿಕೊಳ್ಳುತ್ತಿರುವವರನ್ನೂ,

**ಅಂಗಾರರಾಶಿಮಧ್ಯೇ ತು ಪತಿತಾನ್ ದಗ್ಧಧಾತುಕಾನ್ ।**
**ಭೂತರಕ್ಷಃ ಪಿಶಾಚಾದ್ಯೈಃ ವ್ಯಾಘ್ರಸಿಂಹೈಃ ಶ್ವಭಿಸ್ತಥಾ ॥ ೪೬ ॥**
**ಭಕ್ಷ್ಯಮಾಣಾನ್ ವಿಶೀರ್ಣಾಂಗಾನ್ ಶಿಲಾಪಾತಾದ್ವಿಚೂರ್ಣಿತಾನ್ ।**
**ಕ್ವಚಿದ್ವಿಷಮಗರ್ತೇ ಚ ತಪ್ತಪಂಕೇ ಸುದಾರುಣೇ ॥ ೪೭ ॥**

ಬೆಂಕಿಯ ರಾಶಿಯಲ್ಲಿ ಬೀಳಿಸಿಕೊಂಡು ಸುಟ್ಟ ಅವಯವಗಳಿಂದ ಯುಕ್ತರಾದವರನ್ನೂ, ಭೂತ-ರಕ್ಷ-ಪಿಶಾಚಿಗಳು-ಹುಲಿ-ಸಿಂಹ-ನಾಯಿ ಇವುಗಳಿಂದ ತಿನ್ನಲ್ಪಟ್ಟ ಅವಯವಗಳನ್ನು ಹೊಂದಿದ ಜನರನ್ನೂ, ಕಲ್ಲುಗಳ ಹೊಡೆತದಿಂದ ಅಂಗಾಂಗಗಳು ಪುಡಿಯಾದವರನ್ನೂ, ಹಳ್ಳಗಳಲ್ಲಿ ಬಿದ್ದವರನ್ನೂ, ಕಾದ ಕೆಸರಿನಲ್ಲಿ ದುಃಖಪಡುತ್ತಿರುವವರನ್ನೂ,

**ಆಕಂಠಮಗ್ನಾನ್ ದುಃಖಾರ್ತಾನ್ ದುರುತ್ತಾರಾನ್ ಭಯಾಕುಲಾನ್ ।**
**ಶೋಚತಃ ಸ್ವಾನಿ ಕರ್ಮಾಣಿ ಸ್ಮೃತ್ವಾ ಸ್ಮೃತ್ವಾ ಪುನಃ ಪುನಃ ॥ ೪೮ ॥**

ಹಲ್ಲುಗಳಿಂದಲೂ ಕಾದ ಕೆಸರಿನಿಂದ ಹೊರಗಡೆಯೂ ಬರಲಾಗದೇ ಆರ್ತನಾದ ಮಾಡುತ್ತಾ ಭಯದಿಂದ ಇದ್ದವರನ್ನೂ, ತಾವು ಮಾಡಿದ ಪಾಪಕರ್ಮಗಳನ್ನು ಪದೇ ಪದೇ ನೆನಿಸಿಕೊಳ್ಳುತ್ತಾ ಇದ್ದ ಪಾಪಿಷ್ಠರನ್ನೂ ನಾರದರು ಕಂಡರು.

[**ವಿಶೇಷಾಂಶ :** ಮೇಲೆ ಹೇಳಿದ ನರಕಗಳ ಹಿಂಸೆಗಳನ್ನು ಕೇಳಿದರೂ ಸಹ ಆಸ್ತಿಕ ಜನರಿಗೆ ಭಯವಾಗುತ್ತದೆ. ಆದರೆ ಇವು ನಿತ್ಯನರಕಗಳಲ್ಲ. ಇಲ್ಲಿ ಹಿಂಸೆಗೆ ಒಳಗಾದವರು ಪುನಃ ಮೇಲಕ್ಕೆ ಬಂದು ಸಂಸಾರಕ್ಕೆ ಹಿಂದಿರುಗುತ್ತಾರೆ. ನಿತ್ಯ ನರಕಗಳಾದ ತಾಮಿಸ್ರ ಮತ್ತು ಅಂಧತಾಮಿಸ್ರಗಳೆಂಬ ಸ್ಥಳಗಳಿಗೆ ಹೋದವರು, ಎಂದಿಗೂ ಮೇಲಕ್ಕೆ ಬರುವುದಿಲ್ಲ. ಅತಿ ದಾರುಣವಾದ ದುಃಖಗಳನ್ನು ಅನುಭವಿಸುತ್ತಲೇ ಇರುತ್ತಾರೆ. ಸುಖಲೇಶವೂ ಇರುವುದಿಲ್ಲ. ಶ್ರೀಹರಿಯನ್ನು, ಜೀವೋತ್ತಮರಾದ ವಾಯುದೇವರನ್ನು, ವೇದಗಳನ್ನು ದ್ವೇಷಿಸುವವರು ಈ ನಿತ್ಯನರಕದಲ್ಲಿ ಅಪಾರವಾದ ದುಃಖವನ್ನು ಅನುಭವಿಸುತ್ತಾರೆ. ಈ ನರಕದಲ್ಲಿ ಪಾಪಿಷ್ಠರು ಅನುಭವಿಸುವ ದುಃಖದ ವರ್ಣನೆಯನ್ನು ಕೇಳುವ ಮಾತ್ರದಿಂದಲೇ ಮೂರ್ಛೆ ಬರುತ್ತದೆಯಾದ್ದರಿಂದ ಆ ಹಿಂಸೆಗಳ ವರ್ಣನೆಯನ್ನು ಮಾಡಿಲ್ಲ.

ಈ ಪ್ರತಿಕ್ರಿಯೆಯ ಹೆಚ್ಚಿನ ವಿವರಗಳು ಬ್ರಹ್ಮಸೂತ್ರಭಾಷ್ಯದ "ಅಪಿ-ಸಪ್ತಾಧಿಕರಣದಲ್ಲಿ"ಯೂ, "ನತೃತೀಯಾಧಿಕರಣ"ದಲ್ಲಿಯೂ ನಿರೂಪಿಸಲ್ಪಟ್ಟಿವೆ.]

**ತಾನ್ ದೃಷ್ಟ್ವಾ ಕೃಪಯಾವಿಷ್ಟೋ ಭಗವಾನ್ನಾರದೋ ಮುನಿಃ ।**
**ಅತಿವಿಸ್ಮಯಮಾಪನ್ನೋ ವಾಕ್ಯಮೇತದುವಾಚ ಹ ॥ ೪೯ ॥**

ಹೀಗೆ ಆ ಜನರನ್ನು ನೋಡಿದ, ಪೂಜ್ಯರಾದ, ಕೃಪಾಳುಗಳಾದ, ನಾರದ ಮಹರ್ಷಿಗಳು ಬಹಳ ಆಶ್ಚರ್ಯದಿಂದ ಈರೀತಿ ನುಡಿದರು :

**ನಾರದ ಉವಾಚ—**

**ನಾರಾಯಣೇತಿಮಂತ್ರೋಽಸ್ತಿ ವಾಗಸ್ತಿ ವಶವರ್ತಿನೀ ।**
**ತಥಾಪಿ ನರಕೇ ಘೋರೇ ಪತಂತೀತ್ಯೇತದದ್ಭುತಮ್ ॥ ೫೦ ॥**
**ಪಾಪಿನಾಂ ಕರ್ಮಹೀನಾನಾಂ ಅಲಸಾನಾಂ ದುರಾತ್ಮನಾಮ್ ।**
**ಜೀವನಂ ಹರಿನಾಮ್ನೈವ ಗತಿರ್ನಾನ್ಯಾ ಹಿ ವಿದ್ಯತೇ ॥ ೫೧ ॥**

ನಾರದರು ನುಡಿದರು :

"ನಾರಾಯಣ" ಎಂಬ ಮಂತ್ರವಿದೆ, ನಾಲಿಗೆ ಸ್ವಾಧೀನದಲ್ಲಿದೆ, ಹೀಗಿದ್ದೂ (ಆ ಮಂತ್ರವನ್ನು ಉಚ್ಚರಿಸದೆ) ಜನರು ಘೋರವಾದ ನರಕದಲ್ಲಿ ಬೀಳುತ್ತಾರಲ್ಲ ! ಏನು ಆಶ್ಚರ್ಯ !

ಪಾಪಾತ್ಮರಿಗೆ, ಸತ್ಕರ್ಮಹೀನರಿಗೆ, ಆಲಸ್ಯದಿಂದ ಇರುವ ಜನರಿಗೆ, ದುಷ್ಟರಿಗೆ, ನರಕ ದುಃಖದಿಂದ ಪಾರಾಗಲು ಶ್ರೀಹರಿಯ ನಾಮೋಚ್ಚಾರಣೆಯಲ್ಲದೆ ಬೇರೆ ಮಾರ್ಗವೇ ಇಲ್ಲ.

**ವಿಚಾರ್ಯೈವಂ ಸುದುಃಖೇನ ಕೃಪಯಾಕುಲಚೇತನಃ ।**
**ಶಿಲಾಮಾರುಹ್ಯ ಮಹತೀಂ ವೀಣಾಮಾದಾಯ ಸುಸ್ವರಾಮ್ ।**
**ಸ ಜಗೌ ಹರಿನಾಮಾನಿ ಭೃಶಮುಚ್ಚೈರ್ಮುದಾನ್ವಿತಃ ॥ ೫೨ ॥**

ಹೀಗೆ ಆಲೋಚಿಸಿದ, ದುಃಖದಿಂದ ಯುಕ್ತರಾದ, ಕೃಪಾಳುಗಳಾದ ನಾರದರು ಒಂದು ಬಂಡೆಯನ್ನು ಹತ್ತಿ ಸುಸ್ವರವನ್ನು ತರುವ ತಮ್ಮ "ಮಹತೀ" ಎಂಬ ವೀಣೆಯನ್ನು ಧ್ವನಿಗೊಳಿಸಿ ಚೆನ್ನಾಗಿ ಕೇಳುವಂತೆ ಗಟ್ಟಿಯಾಗಿ ಶ್ರೀಹರಿಯ ನಾಮಗಳನ್ನು ಉಚ್ಚರಿಸಿದರು.

**ಗೋವಿಂದ ನಾರಾಯಣ ವಾಸುದೇವ**
**ಮುಕುಂದ ಕೃಷ್ಣಾಚ್ಯುತ ಮಾಧವೇತಿ ।**
**ನೃಸಿಂಹ ದೇವೇಶ ಹರೇ ಮುರಾರೇ**
**ರಮೇಶ ಲೋಕೇಶ ಜಗನ್ನಿವಾಸ ॥ ೫೩ ॥**

**ಅನಂತ ವೈಕುಂಠ ದುರಂತಶಕ್ತೇ**
**ಸಮಸ್ತಲೋಕಸ್ಯ ನಿದಾನಮೂರ್ತೇ ।**
**ನಿರಂಜನಾನಂತಗುಣಾಕರೇಶ**
**ಚಿದ್ರೂಪ ನಿರ್ದೋಷ ಜಗದ್ವಿಹಾರ ॥ ೫೪ ॥**

ಗೋವಿಂದ (ವೇದಪ್ರತಿಪಾದ್ಯ), ನಾರಾಯಣ (ಗುಣಾಶ್ರಯ), ವಾಸುದೇವ, (ಸರ್ವತ್ರಪೂಜ್ಯ), ಮುಕುಂದ (ಮೋಕ್ಷಪ್ರದ), ಕೃಷ್ಣ, ಅಚ್ಯುತ (ನಾಶರಹಿತ) ಮಾಧವ (ಲಕ್ಷ್ಮೀಪತಿ), ನೃಸಿಂಹ, ದೇವೇಶ, ಹರೇ (ಪಾಪ ಪರಿಹಾರಕ), ರಮೇಶ, ಲೋಕೇಶ (ಜಗತ್ಪತಿ), ಜಗನ್ನಿವಾಸ, (ಜಗತ್ತಿನಲ್ಲಿ ವ್ಯಾಪ್ತ), ಅನಂತ ವೈಕುಂಠ, ದುರಂತಶಕ್ತೇ (ಅಪರಿಮಿತ ಸಾಮರ್ಥ್ಯಶಾಲಿ), ಸಮಸ್ತಲೋಕಕ್ಕೂ ಕಾರಣಭೂತ, ನಿರ್ದೋಷ, ಅಸಂಖ್ಯಾತಗುಣಗಳಿಗೆ ಆಶ್ರಯ, ಚಿದಾನಂದ ರೂಪ, ಜಗದ್ವಿಹಾರ (ಜಗತ್ತಿನ ಸೃಷ್ಟ್ಯಾದಿಗಳು ಅವನಿಗೆ ಒಂದು ಆಟ).

*

**ನಿರೂಪ ನಿತ್ಯಾವ್ಯಯ ನಿರ್ವಿಕಾರ**
**ನಿರಾಶ್ರಯಾನಂತ ವಿಚಿತ್ರಕರ್ಮನ್ ।**
**ದಾಶಾರ್ಹ ಕೃಷ್ಣ ಖಗವಾಹನ ವಾರಿಜಾಕ್ಷ**
**ನಾರಾಯಣಾಖಿಲಗುರೋ ಜಗತಾಮಧೀಶ ॥ ೫೫ ॥**

ನಿರೂಪ (ಪ್ರಾಕೃತದೇಹರಹಿತ), ನಿತ್ಯನೇ, ಅವ್ಯಯನೇ, (ನಾಶರಹಿತ), ನಿರ್ವಿಕಾರನೇ, ನಿರಾಶ್ರಯ (ಯಾರ ಆಶ್ರಯದಲ್ಲಿಯೂ ಇರದವನು), ಅನಂತ, ಚಿತ್ರವಿಚಿತ್ರ ಕರ್ಮಗಳನ್ನುಳ್ಳ, ಯದುಕುಲೋತ್ಪನ್ನನಾದ ಕೃಷ್ಣ, ಗರುಡ ವಾಹನ, ಕಮಲದಂತೆ ನೇತ್ರವುಳ್ಳವನೇ, ನಾರಾಯಣ, ಸಮಸ್ತರಿಗೂ ಗುರುವೇ, ಜಗದೊಡೆಯನೇ,

**ದಾಮೋದರಾದಿಪುರುಷೋತ್ತಮ ವಾಸುದೇವ**
**ಜನಾರ್ದನೇಶ ಮಧುಸೂದನ ರಾಮ ವಿಷ್ಣೋ ।**
**ವಿಶ್ವೋದಯಸ್ಥಿತಿಲಯೋ ನಿಯತಿಪ್ರದೇತಿ**
**ಗಾಯನ್ ಮುನೋದ ಮುದಮಾಪಿತವಾನ್ ಜನಾನಾಮ್ ॥ ೫೬ ॥**

ದಾಮೋದರ, ಆದಿಪುರುಷಶ್ರೇಷ್ಠ, ವಾಸುದೇವ, ಜನಾರ್ದನ, ಪ್ರಭುವೇ, ಮಧುಸೂದನ (ಮಧು ಎಂಬ ದೈತ್ಯನನ್ನು ಸಂಹರಿಸಿದವನು), ರಾಮಚಂದ್ರ, ವಿಷ್ಣುವೇ, ಜಗತ್ತಿನ ಸೃಷ್ಟ್ಯಾದಿ ಅಷ್ಟ ಕರ್ತೃತ್ವವನ್ನು ನಿರ್ವಹಿಸುವವನೇ— ಈ ರೀತಿ ಪರಮಾತ್ಮನ ನಾಮಗಳನ್ನು ಗಾನಮಾಡಿ ತಾವೂ ಸಂತೋಷಪಟ್ಟು ನರಕವಾಸಿಗಳನ್ನೂ ಆನಂದಪಡಿಸಿದರು.

**ತತ್ ಶ್ರುತ್ವಾ ನಾರಕಸ್ಥಾಸ್ತೇ ಹರೇರ್ನಾಮಾಮೃತಂ ಶುಭಮ್ ।**
**ಉತ್ತಸ್ಥುಃ ಯಾತನಾಸ್ಥಾನಾನ್ಮುಕ್ತಪಾಶಾಶ್ಚ ಸರ್ವತಃ ॥ ೫೭ ॥**

ಶ್ರೀಹರಿಯ ನಾಮಾಮೃತವನ್ನು ಕೇಳಿದ ಆ ನರಕವಾಸಿಗಳು ಯಾತನೆಯನ್ನು ಅನುಭವಿಸುತ್ತಿದ್ದ ಸ್ಥಳಗಳಿಂದ ಎದ್ದರು; ಎಲ್ಲರೂ ಯಮದೂತರ ಪಾಶಗಳಿಂದ ಬಿಡುಗಡೆ ಹೊಂದಿದರು.

**ತತ್‌ಕ್ಷಣಾತ್ ಪುಷ್ಪಕಾರೂಢಾ ದಿವ್ಯರೂಪಾ ಮನೋರಮಾಃ ।**
**ದಿವಂ ಜಗ್ಮುಃ ಪ್ರಾಂಜಲಯಃ ಸ್ತುವಂತೋ ನಾರದಂ ಮುನಿಮ್ ॥ ೫೮ ॥**

ಕೂಡಲೇ ಎಲ್ಲರೂ ಪುಷ್ಪಕವಿಮಾನದಲ್ಲಿ ಕುಳಿತು, ಸುಂದರರೂಪಗಳನ್ನು ಹೊಂದಿ, ನಾರದರಿಗೆ ಕೈಮುಗಿದು, ಸ್ತೋತ್ರಮಾಡಿ ಸ್ವರ್ಗಲೋಕಕ್ಕೆ ತೆರಳಿದರು.

**ತದಾ ಯಮಪುರೀ ಶೂನ್ಯಾ ಜನಾರ್ತಸ್ವರವರ್ಜಿತಾ ।**
**ಅಭವತ್ ತತ್ಕ್ಷಣಾದೇವ ಯಮದೂತಾಃ ಸುವಿಸ್ಮಿತಾಃ ॥ ೫೯ ॥**

**ತೂಷ್ಣೀಂ ಭೂತಾಃ ಕೃತ್ಯಹೀನಾ ಯಮಾಯೈತನ್ನ್ಯವೇದಯನ್ ।**

ಪಾಪಿಷ್ಠಜನರ ಆರ್ತನಾದವು ನಿಂತುಹೋಯಿತು, ನರಕವು ಜನರಹಿತ ವಾಯಿತು. ಇದನ್ನು ಕಂಡ ಯಮದೂತರು ಆಶ್ಚರ್ಯದಿಂದ ಮೂಕರಂತೆ ಆದರು. ಏನೂ ಕೆಲಸವಿಲ್ಲದೆ, ಎಲ್ಲವನ್ನೂ ಯಮದೇವರಿಗೆ ತಿಳಿಸಿದರು.

**ಧರ್ಮರಾಜೋಽಪಿ ತತ್ ಶ್ರುತ್ವಾ ನಾರದಸ್ಯ ವಿಚೇಷ್ಟಿತಮ್ ॥ ೬೦ ॥**
**ಆಗತ್ಯ ನಾರದಾಭ್ಯಾಶಂ ಜಗಾದಾತೀವ ವಿಹ್ವಲಃ ।**

ಯಮಧರ್ಮರಾಜನೂ ನಾರದರ ಈ ವ್ಯಾಪಾರವನ್ನು ಕೇಳಿ ಭ್ರಾಂತನಾಗಿ ನಾರದರ ಬಳಿಗೆ ಬಂದು ಹೇಳಿದನು—

**ನಮಸ್ತೇ ನಾರದಮುನೇ ಲೋಕಾನುಗ್ರಹಕಾರಕ ॥ ೬೧ ॥**

**ಸ್ವಸ್ತಿ ತೇಽಸ್ತು ಪುರೀಂ ಪಾಹಿ ತ್ವಮೇವೇತಃಪರಂ ಮುನೇ ।**
**ಲೋಕನಾಥಾಜ್ಞಯಾ ವಿಪ್ರ ಪಾಲಿತೈಷಾ ಪುರೀ ಮಮ ॥ ೬೨ ॥**

ಜನರಲ್ಲಿ ಅನುಗ್ರಹಮಾಡುವ ನಾರದರೇ, ನಿಮಗೆ ನಮಸ್ಕಾರಗಳು ; ಪರಮಾತ್ಮನ ಆಜ್ಞಾನುಸಾರವಾಗಿ ನಾನು ಈವರೆಗೂ ಈ ಪಟ್ಟಣವನ್ನು ರಕ್ಷಿಸುತ್ತಿದ್ದೆ. ಇನ್ನು ಮುಂದೆ ಇದನ್ನು ನೀವೇ ರಕ್ಷಿಸಿರಿ.

**ಶೂನ್ಯಾ ಜಾತಾ ತ್ವಯೈವೈಷಾ ಶೂನ್ಯಾಗಾರೇ ತು ಕಿಂ ಫಲಮ್ ।**
**ಆಗತಾಃ ಸಂಪದೋ ಲೋಕೇ ನಾಶಂ ಯಾಂತಿ ಬಲೀಯಸಾ ॥ ೬೩ ॥**

ನಿಮ್ಮಿಂದ ಈ ನಗರವು ಜನಹೀನವಾಯಿತು. ಶೂನ್ಯವಾದ ಪಟ್ಟಣದಲ್ಲಿ ನನಗೇನು ಕೆಲಸ ? ಪ್ರಪಂಚದಲ್ಲಿ ಸಂಪಾದಿಸಿದ ಐಶ್ವರ್ಯವು ಬಲಿಷ್ಠರಿಂದ ನಾಶಮಾಡಲ್ಪಡುತ್ತದೆ.

**ಅಥವಾ ತೇನ ಭುಜ್ಯಂತೇ ತಸ್ಮಾತ್ತ್ವಂ ಶಾಧಿ ಮೇ ಪುರೀಮ್ ।**
**ಇತಿ ಕೀನಾಶವಚನಂ ಶ್ರುತ್ವಾಸೌ ನಾರದೋಽಬ್ರವೀತ್ ॥ ೬೪ ॥**

ಅಥವಾ ಆ ಸಂಪತ್ತು ಬಲಿಷ್ಠನಿಂದಲೇ ಅನುಭವಿಸಲ್ಪಡುತ್ತದೆ. ಆದುದರಿಂದ ಈ ನನ್ನ ನಗರವನ್ನು ನೀವೇ ರಕ್ಷಿಸಿರಿ ; ಯಮದೇವರ ಈ ಚುಚ್ಚು ಮಾತನ್ನು ಕೇಳಿದ ನಾರದರು ನುಡಿದರು—

**ಮಾಮಾದೀರ್ಘರ್ಮರಾಜ್ಯೈವಂ ಮಯಾ ಕಿಮಪಿ ನೋ ಕೃತಮ್ ।**
**ಕಸ್ಮಾಜ್ಞಾತಾ ಪುರೀ ಶೂನ್ಯಾ ನ ಜಾನೇsಹಂ ಸುರೋತ್ತಮ ॥ ೬೫ ॥**

ಧರ್ಮರಾಜನೇ, ಹೀಗೆ ಚುಚ್ಚು ಮಾತುಗಳನ್ನಾಡಬೇಡ, ನನ್ನಿಂದ ಏನೂ ನಡೆದಿಲ್ಲ. ಈ ಪಟ್ಟಣವು ಯಾತಕ್ಕೆ ಹೀಗೆ ಶೂನ್ಯವಾಯಿತೆಂಬುದನ್ನು ನಾನು ಅರಿಯೆ.

**ಸ್ವರ್ಲೋಕಂ ದ್ರಷ್ಟುಕಾಮೋsಹಂ ದೈವಾದಿಹ ಸಮಾಗತಃ ।**
**ಆರ್ತಾನಾಂ ದರ್ಶನೇ ಲೋಕೇ ಕೃಪಾ ಸಂಜಾಯತೇ ಧ್ರುವಮ್ ॥ ೬೬ ॥**
**ಮಮಾಪಿ ಕರುಣಾ ಜಾತಾ ಭೃಶಾರ್ತಾನಾಂ ಚ ದರ್ಶನೇ ।**
**ಕೃಪಯಾsತಿಕ್ಲಿನ್ನಮನಾ ಅಪೋಚಂ ವೈ ಸ್ವಭಾವತಃ ॥ ೬೭ ॥**

ಸ್ವರ್ಗಲೋಕವನ್ನು ನೋಡಲು ಬಯಸಿದ್ದ ನಾನು ದೈವಯೋಗದಿಂದ ಇಲ್ಲಿಗೆ ಬಂದೆ. ದುಃಖದಿಂದ ನರಳುವವರ ಧ್ವನಿಯನ್ನು ಕೇಳಿದರೆ ದಯೆಯು ಉತ್ಪನ್ನ ವಾಗುವುದು ಸಹಜ. ನನಗೂ ಸಹ ಇಲ್ಲಿಯ ಜನರ ಆರ್ತಧ್ವನಿಯನ್ನು ಕೇಳಿದ ನಂತರ ದಯೆಯು ಉತ್ಪನ್ನವಾಯಿತು. ಮನನೊಂದ ನಾನು ಸ್ವಾಭಾವಿಕವಾಗಿ ಭಗವಂತನ ನಾಮಗಳನ್ನು ಗಾನಮಾಡಿದೆನು.

**ಮಹಿಮ್ನಾ ತಸ್ಯ ನಿರ್ಗತ್ಯ ತೇ ಗತಾ ಯಾನಸಂಸ್ಥಿತಾಃ ।**
**ಯಯುಃ ಸ್ವರ್ಗಂ ದಿವ್ಯರೂಪಾಃ ಕಿಂ ಮಯಾತ್ರ ಕೃತಂ ವದ ॥ ೬೮ ॥**

ಪರಮಾತ್ಮನ ನಾಮದ ಮಹಿಮೆಯಿಂದ ನರಕದಲ್ಲಿದ್ದವರು ಒಳ್ಳೆಯ ರೂಪವನ್ನು ಪಡೆದು, ವಿಮಾನದಲ್ಲಿ ಸ್ವರ್ಗಕ್ಕೆ ಹೋದರು; ಇದರಲ್ಲಿ ನನ್ನ ತಪ್ಪೇನಿದೆ ? ಹೇಳು.

**ದುಃಖಂ ಕಸ್ಮಾತ್ ಭವೇದ್ಧರ್ಮ ವೃಥಾ ಮಾ ಶಪ್ತುಮರ್ಹಸಿ ।**
**ತೇ ಪುರೀಂ ನಾಗಮಿಷ್ಯಾಮಿ ಕದಾದ್ಯಪ್ರಭೃತೀತಿ ಸಃ ॥ ೬೯ ॥**

ಧರ್ಮರಾಜನೇ, ನೀನು ಯಾತಕ್ಕೆ ದುಃಖಪಡುತ್ತಿರುವಿ ? ವ್ಯರ್ಥವಾಗಿ ನನಗೆ ಶಾಪ ಕೊಡಬೇಡ. ಇವತ್ತಿನಿಂದ ಇನ್ನುಮುಂದೆ ಎಂದಿಗೂ ನಾನು ನಿನ್ನ ಪಟ್ಟಣಕ್ಕೆ ಬರುವುದಿಲ್ಲ.

**ಆಶ್ವಸ್ತೋsಪಿ ಯಮಸ್ತಸ್ಮೈ ದದೌ ಶಾಪಂ ಸುದುಃಖಿತಃ ।**
**ಏತದ್ದಿವಸಪರ್ಯಂತಂ ಸುಖದೋsಸಿ ತನೂಭೃತಾಮ್ ॥ ೭೦ ॥**
**ಅದ್ಯ ಪ್ರಭೃತಿ ವಿಪ್ರ ತ್ವಂ ಭವಾಶು ಕಲಹಪ್ರಿಯಃ ।**
**ಯಮೇನೋಕ್ತಸ್ತು ಕೈಲಾಸಂ ಯಮಸ್ತು ಸ್ವಪುರೀಂ ಯಯೌ ॥ ೭೧ ॥**

ಈರೀತಿ ಸಮಾಧಾನ ಮಾಡಿದರೂ ಸಹ ಯಮದೇವರು ದುಃಖದಿಂದ ನಾರದರಿಗೆ ಶಾಪ ಕೊಟ್ಟರು—"ಈ ದಿನದ ಪರ್ಯಂತ ನೀವು ಜನರಿಗೆ ಸುಖವನ್ನು ಉಂಟುಮಾಡುತ್ತಿದ್ದಿರಿ ; ಇವತ್ತಿನಿಂದ ನೀವು 'ಕಲಹಪ್ರಿಯ'ರಾಗಿರಿ". ಹೀಗೆ ಯಮ ದೇವರು ನುಡಿದು ತಮ್ಮ ಸ್ಥಳಕ್ಕೆ ಹೋದರು ; ನಾರದರು ಕೈಲಾಸಕ್ಕೆ ತೆರಳಿದರು.

**ತಸ್ಮಾತ್ ನಾಮಾಮೃತಂ ನಿತ್ಯಂ ಸೇವ್ಯಂ ನಿರ್ವೃತಿಮಿಚ್ಛತಾ ।**
**ಅನೇನ ಸದೃಶೋ ಮಂತ್ರೋ ಲೋಕೇ ನಾಸ್ತಿ ಯತೋ ಮಹಾನ್ ॥೭೨॥**

ಮೋಕ್ಷವನ್ನು ಬಯಸುವವರು ಪರಮಾತ್ಮನ ನಾಮಾಮೃತವನ್ನು ಸೇವಿಸ ಬೇಕು. ಈ ನಾಮಕ್ಕೆ ಸಮಾನವಾದ ಬೇರೊಂದು �ಂತ್ರವು ಇಲ್ಲ; ಅದೇ ಅತ್ಯಂತ ಶ್ರೇಷ್ಠ.

**ಸ್ಮರಂತಃ ಸ್ಮಾರಯಂತಶ್ಚ ವಿಷ್ಣೋರ್ನಾಮಾನಿ ನಿತ್ಯಶಃ ।**
**ಯೇ ಪಠಂತಿ ಹರೇರ್ವಾರ್ತಾಂ ತೇ ಗಚ್ಛಂತಿ ಹರೇಃ ಪದಮ್ ॥ ೭೩ ॥**

ನಿತ್ಯದಲ್ಲಿಯೂ ಶ್ರೀಹರಿಯ ನಾಮಗಳನ್ನು ತಾವು ಉಚ್ಚರಿಸಿದರೂ, ಇತರರು ಉಚ್ಚರಿಸುವಂತೆ ಮಾಡುವವರೂ, ಶ್ರೀಹರಿಯ ಮಹಿಮೆಗಳನ್ನು ಪಠನ ಮಾಡು ವವರೂ ಶ್ರೀಹರಿಯ ಧಾಮಕ್ಕೆ ಹೋಗುತ್ತಾರೆ.

**ಶೌಚಾಚಾರವಿಹೀನಾಶ್ಚ ಬ್ರಹ್ಮಚರ್ಯವಿವರ್ಜಿತಾಃ ।**
**ತಪೋಹೀನಾ ಜ್ಞಾನಹೀನಾ ನಾಮಮಾತ್ರೈಕಜಲ್ಪಕಾಃ ।**
**ಭಕ್ತಾನಾಂ ಗತಿಮಾಯಾಂತಿ ನಾನ್ಯೇ ಸರ್ವೇಽಪಿ ಧಾರ್ಮಿಕಾಃ ॥ ೭೪ ॥**

ಶೌಚ, ಆಚಾರ, ಬ್ರಹ್ಮಚರ್ಯವ್ರತ, ತಪಸ್ಸು, ಜ್ಞಾನ ಇವುಗಳು ಇಲ್ಲ ದವರೂ ಸಹ ಶ್ರೀಹರಿಯ ನಾಮೋಚ್ಚಾರಣೆಯನ್ನು ಮಾತ್ರ ಮಾಡುವುದರಿಂದ, ಭಕ್ತರು ಹೊಂದುವ ಸದ್ಗತಿಯನ್ನು ಪಡೆಯುತ್ತಾರೆ. ನಾಮೋಚ್ಚಾರಣೆ ಇಲ್ಲದೆ ಧಾರ್ಮಿಕರು ಸದ್ಗತಿಯನ್ನು ಹೊಂದುವುದಿಲ್ಲ.

**ಜಿಹ್ವಾಗ್ರೇ ವರ್ತತೇ ಯಸ್ಯ ವಿಷ್ಣೋರ್ನಾಮಾಮೃತಂ ಶುಭಮ್ ।**
**ಶ್ವಪಚೋಽಪಿ ಗರೀಯಾನ್ ಸ್ಯಾತ್ ನಾತ್ರ ಕಾರ್ಯಾ ವಿಚಾರಣಾ ॥೭೫॥**

ಯಾರ ನಾಲಿಗೆಯ ಮೇಲೆ ಶುಭವಾದ ಶ್ರೀವಿಷ್ಣುವಿನ ನಾಮಗಳು ನಲಿದಾಡುತ್ತವೆಯೋ ಅಂತಹವನು ಎಂತಹ ನೀಚಜಾತಿಯಲ್ಲಿ ಉತ್ಪನ್ನನಾಗಿದ್ದರೂ ಶ್ರೇಷ್ಠನೆಂದೆನಿಸುವನು, ಸಂಶಯವಿಲ್ಲ.

ಇತಿ ಶ್ರೀ ವಾಯುಪುರಾಣೇ ಮಾಘಮಾಸಮಾಹಾತ್ಮ್ಯೇ ದ್ವಾವಿಂಶೋಽಧ್ಯಾಯಃ

ಶ್ರೀ ವಾಯುಪುರಾಣಾಂತರ್ಗತ ಮಾಘಮಾಸಮಾಹಾತ್ಮ್ಯೆಯಲ್ಲಿ
ಇಪ್ಪತ್ತೆರಡನೇ ಅಧ್ಯಾಯವು ಸಮಾಪ್ತಿಯಾಯಿತು.

**ಅಷ್ಟಾವಿಂಶತಿಪುರುಷಾ ಊಚುಃ—**

**ಅತಿಭೂರೀಣಿ ಕರ್ಮಾಣಿ ಕೃತಾನ್ಯಸ್ಮಾಭಿರಂಜಸಾ ।**
**ಅನಾಯಾಸಕೃತೇನಾಸ್ಯ ಸುಯಜ್ಞಸ್ಯೈವ ಕರ್ಮಣಾ ॥ ೧ ॥**
**ಕಥಂ ನಷ್ಟಾನಿ ಬ್ರಹ್ಮರ್ಷೇ ಚೈತದ್ವಿಸ್ತಾರ್ಯ ನೋ ವದ ।**

ಇಪ್ಪತ್ತೆಂಟು ದಿವ್ಯಪುರುಷರು ಕೇಳಿದರು :

ನಾವು ಮಾಡಿದ್ದ ಮಹತ್ತರವಾದ ಅನೇಕ ಪಾಪಗಳು ಸುಯಜ್ಞನಿಂದ ಆಯಾಸವೇ ಇಲ್ಲದೇ ಮಾಡಿದ ಒಂದು ಕರ್ಮದಿಂದ ಹೇಗೆ ನಷ್ಟವಾದವು ಎಂಬುದನ್ನು ವಿಶದವಾಗಿ ತಿಳಿಸಿರಿ.

**ಶಾಂಡಿಲ್ಯ ಉವಾಚ—**

**ಅನಾಯಾಸಮಹಾಯಾಸೌ ನ ಫಲೇ ತು ಪ್ರಯೋಜಕೌ ।**
**ಕಿಂತು ಕರ್ಮಸ್ವರೂಪಂ ಹಿ ಕಾರಣಂ ತದ್ವಿದೋ ವಿದುಃ ॥ ೨ ॥**

ಶಾಂಡಿಲ್ಯರು ಉತ್ತರ ಕೊಟ್ಟರು :

ಕರ್ಮಫಲ ದೊರೆಯುವುದರಲ್ಲಿ ಕರ್ಮವು ಅನಾಯಾಸದಿಂದ ಆಚರಿಸಲ್ಪಟ್ಟದ್ದು ಅಥವ ಕಷ್ಟದಿಂದ ಆಚರಿಸಲ್ಪಟ್ಟದ್ದು ಎಂಬ ಭೇದವಿಲ್ಲ. ಫಲಕ್ಕೆ ಕರ್ಮಸ್ವರೂಪವೇ ಕಾರಣವೆಂದು ಬಲ್ಲವರು ಹೇಳುತ್ತಾರೆ.

**ಗುರುತ್ವಂ ಚ ಲಘುತ್ವಂ ಚ ನ ಫಲೇ ತು ಪ್ರಯೋಜಕೇ ।**
**ಅಪಿ ಚಾಲ್ಪಪ್ರಯಾಸೇನ ಗೋ ದುಗ್ಧಂ ಸಾಧ್ಯಮಿತ್ಯಥ ॥ ೩ ॥**
**ನಹೀನಂ ತಾವತಾ ಲೋಕೇ ಸರ್ವದುಃಖನಿವಾರಣಮ್ ॥ ೪ ॥**

ಫಲವಿಷಯದಲ್ಲಿ ದೊಡ್ಡದಾದ ಕರ್ಮ, ಚಿಕ್ಕ ಕರ್ಮ ಎಂಬ ಭೇದವಿಲ್ಲ. ಲೋಕದಲ್ಲಿ ಅಲ್ಪ ಪ್ರಯಾಸದಿಂದಲೇ ಹಸುವಿನ ಹಾಲನ್ನು ಕರೆಯುವುದು ಕಂಡಿದೆ. ಆದರೆ ಆ ಹಾಲು ಜನರ ಸರ್ವದುಃಖಗಳನ್ನೂ ಕಳೆಯುತ್ತದೆ.

**ದುರಾಪಮಪಿ ಶಾರ್ದೂಲೀದುಗ್ಧಂ ಲೋಕೇ ನ ಶಸ್ಯತೇ ।**
**ಲಘುದೀಪೋ ಗೃಹೇ ತಿಷ್ಠಂಸ್ತಮೋ ನಾಶಯತಿ ಧ್ರುವಮ್ ॥ ೫ ॥**

ಎಷ್ಟು ಕಷ್ಟಪಟ್ಟು ತಂದರೂ ಹುಲಿಯ ಹಾಲು ಯಾರಿಗೂ ಪ್ರಯೋಜನವಿಲ್ಲ. ಒಂದು ಚಿಕ್ಕ ದೀಪವು ಮನೆಯಲ್ಲಿರುವ ಕತ್ತಲೆಯನ್ನು ನಾಶಮಾಡುತ್ತದೆ.

**ಅತಿಧೌತಂ ಕಾಂಸ್ಯಪಾತ್ರಂ ಸ್ಥೂಲಮಣ್ವಪಿ ನೋತ್ತಮಮ್ ।**
**ಮಾಘೇ ಮಾಸಿ ಜಲಸ್ಪರ್ಶಃ ಸ್ವಲ್ಪೋಽಪ್ಯಘವಿದಾರಣಃ ॥ ೬ ॥**

ಕಂಚಿನ ಪಾತ್ರೆಯು ದೊಡ್ಡದಿರಲಿ, ಚಿಕ್ಕದಿರಲಿ ಎಷ್ಟು ತೊಳೆದರೂ ಶುದ್ಧ ವಾಗುವುದಿಲ್ಲ. ಮಾಘಮಾಸದಲ್ಲಿ ಜಲಸ್ಪರ್ಶಮಾತ್ರದಿಂದಲೇ ಪಾಪಗಳು ನಾಶವಾಗುತ್ತವೆ.

**ಪ್ರಭಾತೇ ಮಕರೇ ಭಾನೌ ವಿಚಿತ್ರಾ ಕರ್ಮಣೋ ಗತಿಃ ॥**
**ಪೂರ್ವೋಕ್ತವರ್ತ್ಮನಾ ಯಸ್ತು ಮಾಘಸ್ನಾನಂ ಕರೋತಿ ವೈ ॥ ೭ ॥**
**ತೇನ ಸರ್ವಾಣಿ ಕರ್ಮಾಣಿ ಕೃತಾನ್ಯೇವ ನ ಸಂಶಯಃ ।**
**ಅನುತಾಪವಿಹೀನಸ್ಯ ಸಮಸ್ತಾಃ ನಿಷ್ಫಲಾಃ ಕ್ರಿಯಾಃ ॥ ೮ ॥**

ಮಕರರಾಶಿಯಲ್ಲಿ ಸೂರ್ಯನಿರುವಾಗ ಪ್ರಾತಃಕಾಲದಲ್ಲಿ ಹಿಂದೆ ಹೇಳಿದ ಪ್ರಕಾರ ಮಾಘಸ್ನಾನವನ್ನು ಮಾಡಿದರೆ ಅವನಿಂದ ಸಕಲ ಕರ್ಮಗಳೂ ಮಾಡಲ್ಪಟ್ಟಂತೆಯೇ, ಸಂಶಯವಿಲ್ಲ; ಪಶ್ಚಾತ್ತಾಪವಿಲ್ಲದವನಿಗೆ ಎಲ್ಲ ಕರ್ಮಗಳೂ ನಿಷ್ಫಲವೇ.

**ಜಲಸೇಕವಿಹೀನಸ್ಯ ಗಲೇ ತೃಪ್ತಿಕ್ರಿಯಾ ಯಥಾ ।**
**ಅಪಿ ಗೋಷ್ಪದನೀರೇ ವಾ ಯಃ ಸ್ನಾನಂ ಕರ್ತುಮಿಚ್ಛತಿ ॥ ೯ ॥**
**ತಾವನ್ಮಾತ್ರೇಣ ಮುಕ್ತಃ ಸ್ಯಾನ್ನಾತ್ರ ಕಾರ್ಯಾ ವಿಚಾರಣಾ ।**

ಊಟಮಾಡಿ ನೀರನ್ನು ಕುಡಿಯದೇ ಇದ್ದರೆ ಹೇಗೆ ತೃಪ್ತಿ ಇರುವುದಿಲ್ಲವೋ ಹಾಗೆ ಪಶ್ಚಾತ್ತಾಪವಿಲ್ಲದವನಿಗೆ ಸಕಲ ಕರ್ಮಗಳೂ ನಿಷ್ಫಲವೇ. ಮಾಘಮಾಸ ದಲ್ಲಿ ಗೋವಿನ ಹೆಜ್ಜೆಯಷ್ಟು ನೀರಿನಲ್ಲಿ ಸ್ನಾನಮಾಡಲು ಇಚ್ಛಿಸಿದರೆ, ಆ ಇಚ್ಛಾ ಮಾತ್ರದಿಂದಲೇ ಮುಕ್ತನಾಗುತ್ತಾನೆ, ಇದರಲ್ಲಿ ಸಂಶಯವಿಲ್ಲ.

**ಪುಣ್ಯಾಂ ವಿಷ್ಣುಕಥಾಂ ಶ್ರುತ್ವಾ ಯಃ ಸ್ನಾನಂ ಕರ್ತುಮಿಚ್ಛತಿ ॥ ೧೦ ॥**
**ತಾವನ್ ಮಾತ್ರೇಣ ವಿಪ್ರತ್ವಂ ಕೋಟಿಜನ್ಮಸು ಲಭ್ಯತೇ ।**
**ಯೋ ಮಾಘೇ ಮಕರೇ ಭಾನೌ ಶ್ರುತ್ವಾ ವಿಷ್ಣುಕಥಾಂ ಶುಭಾಮ್ ॥೧೧॥**
**ಪ್ರಾತಃ ಸ್ನಾತ್ವಾ ತಥಾಭ್ಯರ್ಚ್ಯ ಮಾಧವಂ ಪುರುಷೋತ್ತಮಮ್ ।**
**ದಿನಮೇಕಂ ನಯತ್ಯೇವಂ ಕೋಟಿಯಜ್ಞಫಲಂ ಲಭೇತ್ ॥ ೧೨ ॥**

ಪುಣ್ಯಕರವಾದ ವಿಷ್ಣುಕಥೆಯನ್ನು ಶ್ರವಣಮಾಡಿ ಮಾಘಸ್ನಾನ ಮಾಡಲು ಯಾವನು ಇಚ್ಛಿಸುತ್ತಾನೆಯೋ ಅವನು ಅಷ್ಟು ಮಾತ್ರದಿಂದಲೇ ಒಂದು ಕೋಟಿ

ಜನ್ಮಗಳಲ್ಲಿ ಬ್ರಾಹ್ಮಣನಾಗಿ ಹುಟ್ಟುತ್ತಾನೆ. ಸೂರ್ಯನು ಮಕರ ರಾಶಿಯಲ್ಲಿರುವಾಗ ವಿಷ್ಣು ಕಥೆಯನ್ನು ಕೇಳಿ, ನಂತರ ಪ್ರಾತಃಕಾಲದಲ್ಲಿಯೇ ಸ್ನಾನಮಾಡಿ, ಸರ್ವೋತ್ತಮನಾದ ಮಾಧವನನ್ನು ಪೂಜಿಸಿದರೆ, ಒಂದು ದಿನದ ಈ ಕರ್ಮವು ಒಂದು ಕೋಟಿ ಯಜ್ಞವನ್ನು ಮಾಡಿದ ಫಲವನ್ನು ತಂದುಕೊಡುತ್ತದೆ.

**ಯೋ ಮಾಘೇ ಕೇತಕೀಪುಷ್ಪೈಃ ಮಾಧವಂ ಸಕೃದರ್ಚಯೇತ್ ।**
**ಸ ಭುಕ್ತ್ವಾ ಸಕಲಾನ್ ಭೋಗಾನ್ ವಿಷ್ಣುಲೋಕೇ ಮಹೀಯತೇ ॥**
**ಸುವರ್ಣತುಲಸೀಪತ್ರೈಃ ಮಾಧವಂ ಯಸ್ತು ಪೂಜಯೇತ್ ।**
**ಪತ್ರೇಣೈಕೇನ ಕೋಟ್ಯಬ್ದಂ ಪೂಜಿತಸ್ತೇನ ಕೇಶವಃ ॥ ೧೪ ॥**

ಯಾವನು ಮಾಘಮಾಸದಲ್ಲಿ ಶ್ರೀಹರಿಯನ್ನು ಕೇತಕೀಪುಷ್ಪದಿಂದ ಪೂಜಿಸುವನೋ ಅವನು ಈ ಲೋಕದಲ್ಲಿ ಎಲ್ಲ ಭೋಗಗಳನ್ನೂ ಅನುಭವಿಸಿ ನಂತರ ಶ್ರೀವಿಷ್ಣುವಿನ ಲೋಕದಲ್ಲಿ ಆನಂದಪಡುತ್ತಾನೆ. ಭಂಗಾರದ ತುಳಸೀ ದಳಗಳಿಂದ ಕೇಶವನನ್ನು ಪೂಜಿಸಿದರೆ ಒಂದು ದಳವು ಕೋಟಿವರ್ಷಗಳ ಪೂಜೆಯ ಫಲವನ್ನು ದೊರಕಿಸುತ್ತದೆ.

**ಮಾಧವಪ್ರತಿಮಾಂ ಕೃತ್ವಾ ಮಾಘೇ ಮಾಸಿ ದದಾತಿ ಯಃ ।**
**ಸರ್ವಪಾಪವಿನಿರ್ಮುಕ್ತಃ ಸ ಯಾತಿ ಪರಮಾಂ ಗತಿಮ್ ॥ ೧೫ ॥**
**ಯೋ ಮಾಘಸ್ನಾನಧರ್ಮಾಣಾಂ ಸಾಹಾಯ್ಯಂ ಕುರುತೇ ನರಃ ।**
**ಸೋಽಪಿ ತತ್ಫಲಮಾಸಾದ್ಯ ಮಹತ್ಫಲಮವಾಪ್ನುಯಾತ್ ॥ ೧೬ ॥**

ಮಾಘಮಾಸದಲ್ಲಿ ಮಾಧವನ ಪ್ರತಿಮೆಯನ್ನು ದಾನಮಾಡುವವನು ಸಕಲ ಪಾಪಗಳಿಂದ ಮುಕ್ತನಾಗಿ ಸದ್ಗತಿ ಪಡೆಯುತ್ತಾನೆ. ಮಾಘಸ್ನಾನಮಾಡುವ ಜನರಿಗೆ ಸಹಾಯಮಾಡುವವರೂ ಸಹ ಮಾಘಸ್ನಾನದ ಫಲವನ್ನೂ ಮತ್ತು ಇನ್ನೂ ಹೆಚ್ಚಿನ ಫಲವನ್ನೂ ಪಡೆಯುತ್ತಾರೆ.

**ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಮ್ ।**
**ಲಕ್ಷಣಾಯಾಶ್ಚ ಸಂವಾದಂ ಯಾಜಕಸ್ಯ ಮಹಾತ್ಮನಃ ॥ ೧೭ ॥**

ಇದೇ ವಿಷಯದಲ್ಲಿ ಪುರಾತನವಾದ ಒಂದು ಇತಿಹಾಸವಿದೆ. ಲಕ್ಷಣಾ ಎಂಬ ಸ್ತ್ರೀ ಮತ್ತು ಯಾಜಕನೆಂಬ ಜ್ಞಾನಿಗೂ ನಡೆದ ಸಂವಾದವನ್ನು ಹೇಳುತ್ತೇನೆ.

**ಆರ್ಯಾವರ್ತೇ ಪುರಾ ಕಾಚಿದ್ ವೇಶ್ಯಾಽಭೂಲ್ಲಕ್ಷಣಾಹ್ವಯಾ ।**
**ತಸ್ಯಾ ಭುಜಂಗಃ ಶೂದ್ರೋಽಭೂತ್ ದಾಸೋ ನಾಮ ಯುವಾ ಬಲೀ ॥**

ಆರ್ಯಾವರ್ತದಲ್ಲಿ ಹಿಂದೆ ಲಕ್ಷಣಾ ಎಂಬ ವೇಶ್ಯಾ ಸ್ತ್ರೀ ಇದ್ದಳು. ಅವಳ ಮನೆಯಲ್ಲಿ ಯುವಕನೂ, ಬಲಿಷ್ಠನೂ, ಶೂದ್ರನೂ ಆದ ಭುಜಂಗನೆಂಬ ಸೇವಕನಿದ್ದನು.

**ಸಾ ಲಕ್ಷಣಾ ಋತುಸ್ನಾತಾ ಸ್ಥಿತಾ ಗೋದಾವರೀ ತಟೇ ।**
**ಬಾಲವೈಧವ್ಯದುಃಖೇನ ರುದಂತೀಂ ಚ ಕುಮಾರಿಕಾಮ್ ॥ ೧೯ ॥**

**ಮೃತಂ ಪತಿಂ ಪುರಃ ಸ್ಥಾಪ್ಯ ಬಂಧುಭಿಃ ಪರಿವಾರಿತಾಮ್ ।**
**ಆಕ್ರಂದಂತೀಂ ತತೋ ವೀಕ್ಷ್ಯ ಶನೈಸ್ತಾಂ ಪ್ರತ್ಯಪದ್ಯತ ॥ ೨೦ ॥**

ಆ ಲಕ್ಷಣಾ ಸ್ತ್ರೀಯು ಗೋದಾವರೀ ತೀರದಲ್ಲಿ ಋತುಸ್ನಾನಮಾಡಿ ನಿಂತಿದ್ದಳು. ಅಲ್ಲಿಯೆ ಒಬ್ಬ ಸ್ತ್ರೀಯು ತನ್ನ ಮೃತಪತಿಯ ಶರೀರವನ್ನು ಮುಂದಿಟ್ಟು ಕೊಂಡು ಅಳುತ್ತಿದ್ದಳು. ಬಂಧುಗಳು ಸುತ್ತಲೂ ನಿಂತಿದ್ದರು. ಚಿಕ್ಕವಯಸ್ಸಿನಲ್ಲಿಯೇ ವಿಧವೆಯಾದ ಅವಳ ಬಳಿಗೆ ಲಕ್ಷಣಾ ಮೆಲ್ಲಗೆ ಹೋದಳು.

**ಲುಠಂತೀಂ ಭುವಿ ತಾಪೇನ ಮುಹುರ್ಘ್ನಂತೀಮುರೋ ಬಹು ।**
**ಜನಾನಾಮಪಿ ಕಾರುಣ್ಯಂ ಜಾಯತೇ ತಾಂ ಚ ಪಶ್ಯತಾಮ್ ॥ ೨೧ ॥**

ನೆಲದಮೇಲೆ ಹೊರಳಾಡುತ್ತ ಎದೆಯನ್ನು ಬಾರಿಬಾರಿಗೂ ಹೊಡೆದು ಕೊಳ್ಳುತ್ತಾ ದುಃಖಿತಳಾಗಿದ್ದ ಆ ಯುವತಿಯನ್ನು ಕಂಡು ಜನರಿಗೆ ಕರುಣೆಯು ಉತ್ಪನ್ನವಾಗುತ್ತಿತ್ತು.

**ತದಾ ಸಾ ಲಕ್ಷಣಾ ವಾಕ್ಯಂ ಸ್ವಭುಜಂಗಂ ಉವಾಚ ಹ ।**
**ಕುಲಜಾನಾಂ ತು ನಾರೀಣಾಂ ದಶೇಯಂ ಚ ಸುದಾರುಣಾ ॥ ೨೨ ॥**

**ಪಾರವಶ್ಯಂ ಚ ನಾರೀಣಾಂ ದುಃಖಮಾಮರಣಾಂತಿಕಮ್ ।**
**ಮೃತಾಪತ್ಯಂ ಚ ವೈಧವ್ಯಂ ತಥೈವಾಪುತ್ರತಾಸ್ತ್ರಿಯಾಮ್ ॥ ೨೩ ॥**

ಈ ದೃಶ್ಯವನ್ನು ನೋಡಿದ ಲಕ್ಷಣಾ ತನ್ನ ಸೇವಕನಾದ ಭುಜಂಗನಿಗೆ ಹೇಳಿದಳು—ಕುಲಸ್ತ್ರೀಯರು ಎಂತಹ ಕಷ್ಟವಾದ ದೆಶೆಯಲ್ಲಿರುವರು ! ಯಾವಾಗಲೂ ಇನ್ನೊಬ್ಬರ ಅಧೀನ ಮರಣವಾಗುವತನಕ, ಮಕ್ಕಳು ಹುಟ್ಟಿ ಸಾಯುವುದು, ವೈಧವ್ಯ, ಮಕ್ಕಳೇ ಹುಟ್ಟದಿರುವುದು,

**ಅಸಹ್ಯಮೇತತ್ ತ್ರಿತಯಂ ವೈಧವ್ಯಂ ಚೋತ್ತರೋತ್ತರಮ್ ।**
**ಬಾಲೇಯಂ ಶೋಚತೇऽತೀವ ಕಸ್ಯೇದಂ ಕರ್ಮಣಃ ಫಲಮ್ ॥ ೨೪ ॥**

ಈ ಮೂರು ದುಃಖಗಳೂ ಸಹಿಸಲು ಅಸಾಧ್ಯವೇ, ವೈಧವ್ಯ ದುಃಖವು ಕಾಲ ಕಳೆದಂತೆ ಹೆಚ್ಚಾಗುತ್ತದೆ. ಇವಳಿನ್ನೂ ಚಿಕ್ಕವಯಸ್ಸಿನವಳು. ಈ ಪರಿಸ್ಥಿತಿ ಇವಳ ಯಾವ ಕರ್ಮದ ಫಲವೋ ?

**ನಿವರ್ತತೇ ವಾ ಕೇನೇದಂ ಕೋ ವಾ ವೇತ್ತೀತಿ ತಾವಥ ।**
**ಉವಾಚ ದಾಸನಾಮ್ನಾಸೌ ಭುಜಂಗಃ ಸೂನೃತಂ ವಚಃ ॥ ೨೫ ॥**

ಏನು ಮಾಡಿದರೆ ಈ ಕರ್ಮದ ಫಲ ತೀರುವುದು ? ಇದನ್ನು ಯಾರು ಬಲ್ಲರು ? ಹೀಗೆಂಬ ಲಕ್ಷಣೆಯ ಮಾತನ್ನು ಕೇಳಿ ಸೇವಕ ಭುಜಂಗನು ನುಡಿದನು—

**ಶೃಣು ಭದ್ರೇ ಪ್ರವಕ್ಷ್ಯಾಮಿ ಸ್ರಷ್ಟ್ರಾ ಸೃಷ್ಟಾಃ ಪುರಾ ದ್ವಿಜಾಃ ।**
**ದೇವಾನಾಂ ಚೈವ ಲೋಕಾನಾಂ ಹಿತಾರ್ಥಂ ಮಂತ್ರಕೋವಿದಾಃ ॥ ೨೬ ॥**

ಮಂಗಳಾಂಗಿಯೇ, ನಾನು ಹೇಳುತ್ತೇನೆ—ಸೃಷ್ಟಿಕರ್ತನು ಜನರಿಗೂ, ದೇವತೆಗಳಿಗೂ, ಹಿತೋಪದೇಶವನ್ನು ಮಾಡಲು ಶಾಸ್ತ್ರಜ್ಞರಾದ ಬ್ರಾಹ್ಮಣರನ್ನು ಸೃಷ್ಟಿಸಿದ್ದಾನೆ.

**ಶಾಸ್ತ್ರಜ್ಞಾನಾತ್ ಸ್ವಭಾವಾಚ್ಚ ಜೀವಾನಾಂ ಚ ಪುರಾ ಕೃತಮ್ ।**
**ಜಾನಂತಿ ಕರ್ಮಜಫಲಂ ತೇ ಪ್ರಷ್ಟವ್ಯಾ ಧೃತವ್ರತಾಃ ॥ ೨೭ ॥**

ಶಾಸ್ತ್ರಜ್ಞಾನದ ಸಾಮರ್ಥ್ಯದಿಂದಲೂ, ತಮ್ಮ ನೈಸರ್ಗಿಕ ಸಾಮರ್ಥ್ಯದಿಂದಲೂ ಅಂತಹ ಬ್ರಾಹ್ಮಣರು ಜೀವರು ಹಿಂದಿನ ಜನ್ಮಗಳಲ್ಲಿ ಮಾಡಿದ ಕರ್ಮಗಳನ್ನೆಲ್ಲ ತಿಳಿಯುವರು. ಅಂತಹ ವ್ರತನಿಷ್ಠರಾದ ಬ್ರಾಹ್ಮಣರನ್ನು ವಿಚಾರಿಸಬೇಕು.

**ಭುಜಂಗವಚನಂ ಶ್ರುತ್ವಾ ತಥೈವೇತಿ ಸಾ ಪುನಃ ।**
**ತತ್ರಾಗತಂ ಮಹಾವೃದ್ಧಂ ಯಾಜಕಂ ನಾಮ ವೈ ದ್ವಿಜಮ್ ॥ ೨೮ ॥**
**ಪಪ್ರಚ್ಛ ತಂ ದಯಾದೀನಾ ಪ್ರಶ್ನಕಾತರಮಾನಸಾ ।**

ಭುಜಂಗನ ಮಾತನ್ನು ಕೇಳಿದ ಲಕ್ಷಣೆಯು "ಹಾಗೆಯೇ ಆಗಲಿ" ಎಂದು ಹೇಳುತ್ತಾ ಅಲ್ಲಿಗೆ ಬಂದಿದ್ದ ವೃದ್ಧನಾದ ಯಾಜಕನೆಂಬ ಬ್ರಾಹ್ಮಣನನ್ನು ಕುತೂಹಲದಿಂದ, ದಯೆಯಿಂದ ದೀನಳಾಗಿ ಪ್ರಶ್ನೆಮಾಡಿದಳು.

**ಮುನೇ ತ್ವಹಂ ದುರಾಚಾರಾ ಕುಟಿಲಾ ಲಕ್ಷಣಾಹ್ವಯಾ ॥ ೨೯ ॥**

ಮುನಿಗಳೇ ! ದುರಾಚಾರಿ ಮತ್ತು ಕುಟಿಲಬುದ್ಧಿಯುಳ್ಳವಳಾದ ನನ್ನ ಹೆಸರು ಲಕ್ಷಣಾ.

**ತಥಾಪಿ ತೇ ದಯಾಪಾತ್ರಂ ಪೃಚ್ಛಂತೀಂ ಮಾಂ ನಿಬೋಧಯ ।**
**ಸಾಧೂನಾಂ ಸಮಚಿತ್ತಾನಾಂ ಜನಾಃ ಸರ್ವೇ ಸಮಾ ಭುವಿ ॥ ೩೦ ॥**
**ದುರ್ಗಂಧೋ ವಾ ಸುಗಂಧೋ ವಾ ಯಥಾ ವಾಯೋಃ ಸಮೋ ಭವೇತ್।**
**ಮುನೇ ದಶೇಯಂ ನಾರೀಣಾಂ ತೃತೀಯಾತೀವ ದುಃಸಹಾ ॥ ೩೧ ॥**

ಹೀಗಿದ್ದರೂ ಸಹ, ದಯಾಪರರಾದ ನಿಮ್ಮನ್ನು ಪ್ರಶ್ನೆಮಾಡುತ್ತೇನೆ. ಉಪದೇಶ ಮಾಡಿರಿ. ಸಾಧುಗಳಿಗೂ, ಶಾಂತಮನಸ್ಕರಿಗೂ, ಜಗತ್ತಿನಲ್ಲಿರುವ ಸಮಸ್ತರೂ ಸಮರಷ್ಟೆ—ದುರ್ಗಂಧವಾಗಲೀ, ಸುಗಂಧವಾಗಲೀ ಗಾಳಿಗೆ ಎಲ್ಲ ಹೇಗೆ ಒಂದೇ ಸಮವೋ ಹಾಗೆ. ಸ್ತ್ರೀಯರಿಗೆ ಈ ಮೂರನೆಯ ಅವಸ್ಥೆಯಾದ ದುಃಖ ಪೂರಿತವಾದ ವೈಧವ್ಯವು ಯಾವ ಕಾರಣದಿಂದ ಬರುತ್ತದೆ ?

**ಕರ್ಮಣಾ ಜಾಯತೇ ಯೇನ ಕೇನ ವಾಥ ನಿವರ್ತತೇ ।**
**ಏತದ್ವಿಸ್ತಾರ್ಯ ಮೇ ಬ್ರಹ್ಮನ್ ಕೃಪಯಾ ವದ ಸುವ್ರತ ॥ ೩೨ ॥**

ಇದು ಬರಲು ಯಾವ ಕರ್ಮ ಕಾರಣ? ಏನು ಮಾಡಿದರೆ ಅದು ತೀರುತ್ತದೆ ? ವ್ರತನಿಷ್ಠರಾದ ಮುನಿಗಳೇ ! ಇದನ್ನು ನನಗೆ ವಿಶದವಾಗಿ ತಿಳಿಸಿರಿ.

**ಶಾಂಡಿಲ್ಯ ಉವಾಚ—**

**ಇತಿ ತಸ್ಯಾ ವಚಃ ಶ್ರುತ್ವಾ ಯಾಜಕೋ ವಾಕ್ಯಮಬ್ರವೀತ್ ।**
**ದೈವೇ ಕರ್ಮಣಿ ಪಿತ್ರ್ಯೇ ಚ ನಾರ್ಯಃ ಪಾಕೇಷು ಸಂಸ್ಥಿತಾಃ ॥ ೩೩ ॥**
**ಅಕಸ್ಮಾತ್ ರಜಸಾ ದೃಷ್ಟಾಃ ಸ್ಪೃಷ್ಟಭಾಂಡಾದ್ಯುಪಸ್ಕರಾಃ ।**
**ಅಜ್ಞಾನಾದ್ವಾ ಭಯಾದ್ವಾಪಿ ಕಾಮಾಲ್ಲೋಭಾತ್ಕ್ವಚಿತ್ ಸ್ತ್ರಿಯಃ ॥ ೩೪ ॥**
**ದಶಾಮಿಮಾಂ ಪ್ರಾಪ್ನುವಂತಿ ಸರ್ವಾ ಅಪಿ ನ ಸಂಶಯಃ ।**

ಶಾಂಡಿಲ್ಯರು ಹೇಳಿದರು :

ಲಕ್ಷಣೆಯ ಪ್ರಶ್ನೆಯನ್ನು ಕೇಳಿದ ಯಾಜಕನು ಹೇಳಿದನು—ದೇವತಾ ಕಾರ್ಯದಲ್ಲಿ, ಪಿತೃಕಾರ್ಯದಲ್ಲಿ ಸ್ತ್ರೀಯರು ಅಡಿಗೆಯಲ್ಲಿ ನಿರತರಾಗಿರುವಾಗ ಅಕಸ್ಮಾತ್ ರಜೋದರ್ಶನವಾದರೂ, ಪಾತ್ರೆಗಳನ್ನೂ ಇತರ ವಸ್ತುಗಳನ್ನೂ, ಅಜ್ಞಾನದಿಂದಲಾಗಲೀ, ಭಯದಿಂದಲಾಗಲೀ, ಲೋಭದಿಂದಲಾಗಲೀ, ಇಚ್ಛಾ ಪೂರ್ವಕವಾಗಿಯಾಗಲೀ ಮುಟ್ಟಿ ಅಡಿಗೆಯನ್ನು ಮುಂದುವರೆಸಿದರೆ ಅಂತಹ ಸ್ತ್ರೀಯರಿಗೆಲ್ಲ ಇಂತಹ ದುರ್ದಶೆ ಬರುತ್ತದೆ, ಸಂಶಯವಿಲ್ಲ.

**ಅನೇದಯಿತ್ವಾ ಗಚ್ಛಂತಿ ತೇನ ದುಷ್ಯಂತಿ ಸತ್ಕ್ರಿಯಾಃ ॥ ೩೫ ॥**

ಕ್ರಿಯಾಲೋಪಕರಾ ಹ್ಯೇತಾಃ ಪಾಪಾದಸ್ಮಾದ್ದುರತ್ಯಯಾತ್ ।
ಬಾಲ್ಯೇಽಪಿ ಯೌವನೇ ವಾಪಿ ವಾರ್ಧಕೇ ವಾ ಕದಾಚನ ॥ ೩೬ ॥

ತತ್ರ ಯಾ ತು ದುರಾಚಾರಾ ಪರಾನೇವಾಭಿಕಾಂಕ್ಷತೀ ।
ಶ್ವಶ್ರೋಶ್ಚ ಪತಿಬಂಧೂನಾಂ ನಿತ್ಯಂ ಯಾ ಚ ಸುದುಃಖದಾ ॥ ೩೭ ॥

ಏತತ್ ಸಾಹಾಯ್ಯತೋ ನಾರೀ ಯಾ ದೂಷಯತಿ ಸತ್ಕ್ರಿಯಾಃ ।
ಬಾಲ್ಯೇ ವೈಧವ್ಯಮಾಪ್ನೋತಿ ಸಾ ನಾರೀ ನಾತ್ರ ಸಂಶಯಃ ॥ ೩೮ ॥

ಯಾರಿಗೂ ವಿಷಯವನ್ನು ತಿಳಿಸದೇ ಇರುವುದರಿಂದ ಸಕಲ ಸತ್ಕರ್ಮಗಳೂ ಅಪವಿತ್ರವಾಗುತ್ತವೆ. ಇವೆಲ್ಲ ಕ್ರಿಯಾಲೋಪಕ್ಕೆ ಕಾರಣಗಳು, ಬಹುದೊಡ್ಡ ಪಾಪಕಾರ್ಯ. ಬಾಲ್ಯದಲ್ಲಿಯಾಗಲೀ, ಯೌವನದಲ್ಲಿಯಾಗಲೀ, ಮುಪ್ಪಿನಕಾಲದಲ್ಲಿಯಾಗಲೀ, ಯಾವ ಸ್ತ್ರೀ ಪರಪುರುಷನ ಸಂಗವನ್ನು ಅಪೇಕ್ಷಿಸುವಳೋ, ತನ್ನ ಅತ್ತೆ-ಮಾವಂದಿರನ್ನೂ, ಪತಿಯ ಬಂಧುಜನರನ್ನೂ ನಿರ್ಲಕ್ಷಿಸಿ ಅವರಿಗೆ ದುಃಖವನ್ನು ಕೊಡುವಳೋ, ಋತುಕಾಲದಲ್ಲಿರುವ ಸ್ತ್ರೀಯರಿಗೆ ಸತ್ಕರ್ಮಗಳನ್ನು ಕುಲಗೆಡಿಸಲು ಸಹಾಯಮಾಡುವ ಸ್ತ್ರೀಯೂ, ಶಾಸ್ತ್ರೋಕ್ತವಾದ ಸತ್ಕರ್ಮಗಳನ್ನು ನಿಂದಿಸುವ ಸ್ತ್ರೀಯೂ ಬಾಲ್ಯದಲ್ಲಿಯೇ ವೈಧವ್ಯವನ್ನು ಪಡೆಯುತ್ತಾಳೆ, ಇದರಲ್ಲಿ ಸಂಶಯವಿಲ್ಲ.

ಋತುಸ್ನಾತಾ ತು ಯಾ ನಾರೀ ಬಾಲಕಾನವಲೋಕಯೇತ್ ।
ಲಬ್ಧ್ವಾ ಭರ್ತ್ರಾ ತತೋ ಗರ್ಭಂ ಬಾಲಾನಾಮುಪಘಾತಿನೀ ॥ ೩೯ ॥

ಏತತ್ ಕರ್ಮಸಹಾಯೇನ ರಜಸಾ ದೂಷಿತಾ ತು ಯಾ ।
ಮೃತಾಪತ್ಯಾ ತಥಾ ಭೂತ್ವಾ ವೈಧವ್ಯಂ ಯೌವನೇ ವ್ರಜೇತ್ ॥ ೪೦ ॥

ಋತುಸ್ನಾನದ ದಿನ ಯಾವ ಸ್ತ್ರೀಯು ಪರಪುರುಷನನ್ನು ಕೆಟ್ಟಬುದ್ಧಿಯಿಂದ ನೋಡುವಳೋ, ಪತಿಯಿಂದ ಗರ್ಭಧಾರಣೆಮಾಡಿದನಂತರ ಗರ್ಭಸ್ರಾವವನ್ನು ತನ್ನ ಇಚ್ಛೆಯಿಂದಲೇ ಮಾಡಿಸಿಕೊಳ್ಳುವಳೋ ಅಂತಹ ರಜಸ್ಸಿನಿಂದ ದೂಷಿತಳಾದ ಸ್ತ್ರೀಯರು ತಮ್ಮ ಮಕ್ಕಳನ್ನು ಮರಣಕಾರಣದಿಂದ ಕಳೆದುಕೊಳ್ಳುವರು, ಹಾಗೂ ಯೌವನದಲ್ಲಿಯೇ ವೈಧವ್ಯವನ್ನು ಹೊಂದುವರು.

ಯಾ ನಾರೀ ರಜಸಾ ದುಷ್ಟಾ ಸರ್ವಭಾಂಡಾದಿ ಸಂಕರಮ್ ।
ಕುರುತೇ ಯದಿ ಸಾ ನಾರೀ ವೈಧವ್ಯಂ ವಾರ್ಧಕೇ ವ್ರಜೇತ್ ॥ ೪೧ ॥

ಯಾವ ರಜಸ್ವಲಾಸ್ತ್ರೀಯು ಮನೆಯ ಪಾತ್ರೆಗಳನ್ನೆಲ್ಲ ಮುಟ್ಟಿ ಇತರ ಮನೆ ಕೆಲಸಗಳನ್ನು ಮಾಡುವಳೋ ಅವಳು ಮುಪ್ಪಿನಲ್ಲಿ ವೈಧವ್ಯವನ್ನು ಹೊಂದುವಳು.

**ಯಾ ಚಾನುಕೂಲ್ಯಂ ರಹಿತಾ ಪತಿಧರ್ಮೇಷು ಸರ್ವಶಃ ।**
**ಬಾಲ್ಯೇ ವೈಧವ್ಯಮಾಪನ್ನಾ ಗತಿಹೀನಾ ಭವತ್ಯಲಮ್ ॥ ೪೨ ॥**

ಪತಿಯು ಆಚರಿಸುವ ಶಾಸ್ತ್ರೋಕ್ತವಾದ ಸತ್ಕರ್ಮಗಳಲ್ಲಿ ಯಾವ ಸ್ತ್ರೀಯು ಅನುಕೂಲಳಾಗಿ ಇರುವುದಿಲ್ಲವೋ ಅವಳು ಬಾಲ್ಯದಲ್ಲಿಯೇ ವೈಧವ್ಯವನ್ನು ಹೊಂದುವಳು, ಅವಳಿಗೆ ಸದ್ಗತಿಯಾಗುವುದಿಲ್ಲ.

**ಸರ್ವಾಸಾಮಪಿ ವೈಧವ್ಯನಿದಾನಂ ಪುಷ್ಪಸಂಭವಮ್ ।**
**ಶಾಂತಿಂ ತಸ್ಯ ಪ್ರವಕ್ಷ್ಯಾಮಿ ಕರ್ಮಣೋಽಸ್ಯಾಪಿ ಲಕ್ಷಣೇ ॥ ೪೩ ॥**

ಈ ಮೂರೂ ವಿಧವಾದ ವೈಧವ್ಯಕ್ಕೆ ಸ್ತ್ರೀಯರ ರಜೋದರ್ಶನಕಾಲದಲ್ಲಿ ಅವರು ಮಾಡುವ ಅನಾಚಾರವೇ ಕಾರಣ. ಲಕ್ಷಣೆಯೇ, ಇದಕ್ಕೆ ಪ್ರಾಯಶ್ಚಿತ್ತ ರೂಪವಾದ ಶಾಂತಿಯನ್ನು ಹೇಳುತ್ತೇನೆ.

**ಕೃತಾಯಾಮೃಷಿಪಂಚಮ್ಯಾಂ ವ್ರತೇನಾಸ್ಯಾವಶೇಷಿತಮ್ ।**
**ಪಾಪಂ ಗಚ್ಛತಿ ನಾರೀಣಾಮಿತಿ ವೇದವಿದೋ ವಿದುಃ ॥ ೪೪ ॥**
**ಶೂರ್ಪಸ್ಯ ವಾಯನಂ ದತ್ವಾ ಕೃತೇ ಲಕ್ಷ್ಮೀವ್ರತಾದಿಕೇ ।**
**ಮೂಲಾವಶೇಷಂ ವ್ರಜತಿ ರಜೋದೋಷೋ ನ ಸಂಶಯಃ ॥ ೪೫ ॥**

ಸ್ತ್ರೀಯರು ಋಷಿಪಂಚಮೀ ವ್ರತವನ್ನು ಆಚರಿಸುವುದರಿಂದ ಅವರ ರಜಸ್ವಲಾ ದೋಷಕ್ಕೆ ಸಂಬಂಧಪಟ್ಟ ಪಾಪಗಳೆಲ್ಲ ನಿರ್ಮೂಲವಾಗಿ ನಾಶಹೊಂದುತ್ತವೆ— ಇದು ವೇದಜ್ಞಾನವುಳ್ಳವರ ಅಭಿಪ್ರಾಯ. ಶಾಸ್ತ್ರೋಕ್ತವಾದ ಲಕ್ಷ್ಮೀವ್ರತಾದಿ ಗಳನ್ನು ಆಚರಿಸಿ ಮೊರದಬಾಗಿನವನ್ನು ದಾನಮಾಡುವುದರಿಂದಲೂ ಸಹ ರಜೋ ದೋಷವು ಪೂರ್ಣವಾಗಿ ನಾಶಹೊಂದುತ್ತದೆ, ಸಂಶಯವಿಲ್ಲ.

**ನಿರ್ಮೂಲಂ ತು ವ್ರಜತ್ಯಾಶು ಲಕ್ಷವರ್ತಿವ್ರತೇ ಕೃತೇ ।**
**ರಜಸೋತ್ಥಂ ಮಹಾಪಾಪಂ ನಾರೀಣಾಂ ನಾತ್ರ ಸಂಶಯಃ ॥ ೪೬ ॥**

ಸ್ತ್ರೀಯರು ಲಕ್ಷಬತ್ತೀ ವ್ರತವನ್ನಾಚರಿಸುವುದರಿಂದ ಅವರ ರಜೋದರ್ಶನಕ್ಕೆ ಸಂಬಂಧಪಟ್ಟ ಮಹಾಪಾಪಗಳೆಲ್ಲವೂ ಕೂಡಲೇ ನಿರ್ಮೂಲವಾಗಿ ನಾಶವಾಗುತ್ತವೆ, ಸಂಶಯವಿಲ್ಲ.

**ಇತಿ ತದ್ವಚನಂ ಶ್ರುತ್ವಾ ಪುನಃ ಪಪ್ರಚ್ಛ ಲಕ್ಷಣಾ ।**
**ಮನಸಾ ಶಂಕಿತಾ ಭೂತ್ವಾ ಸಾದರಂ ಮುನಿಪುಂಗವಮ್ ॥ ೪೭ ॥**

ಯಾಜಕನ ಈ ಮಾತುಗಳನ್ನು ಕೇಳಿದ ಲಕ್ಷಣೆಯು, ಸಂಶಯಗ್ರಸ್ತಳಾಗಿ, ಆ ಮುನಿಶ್ರೇಷ್ಠನನ್ನು ಆದರದಿಂದ ಪುನಃ ಪ್ರಶ್ನೆಮಾಡಿದಳು.

**ಸಾಧು ಸಾಧು ಮಹಾಭಾಗ ಚಿತ್ತಂ ಮೇ ಭಯವಿಹ್ವಲಮ್ ।**
**ಲಕ್ಷವರ್ತೀವ್ರತಸ್ಯಾಸ್ಯ ವಿಧಾನಂ ಕೀದೃಶಂ ವದ ॥ ೪೮ ॥**
**ಕಸ್ಮಿನ್ ಮಾಸೇ ತು ಕರ್ತವ್ಯಂ ಕಸ್ಯ ವಾ ತು ಸಮರ್ಪಣಮ್ ।**
**ಉದ್ಯಾಪನಂ ಕಥಂ ಕಾರ್ಯಂ ಕಿಂ ಫಲಂ ತಸ್ಯ ವಾ ಮುನೇ ॥ ೪೯ ॥**

ಪೂಜ್ಯರಾದ ಜ್ಞಾನಿಗಳೇ, ನೀವು ಚೆನ್ನಾಗಿ ಹೇಳಿರುತ್ತೀರಿ. ನನ್ನ ಮನಸ್ಸು ಭಯಗೊಂಡಿದೆ. ಲಕ್ಷಬತ್ತೀ ವ್ರತವನ್ನು ಮಾಡುವ ಕ್ರಮವೇನು ? ಯಾವ ತಿಂಗಳಿನಲ್ಲಿ ಮಾಡಬೇಕು, ಯಾರಿಗೆ ಸಮರ್ಪಿಸಬೇಕು, ಅದರ ಉದ್ಯಾಪನೆಯನ್ನು ಯಾವರೀತಿ ಮಾಡಬೇಕು ? ಇದನ್ನೆಲ್ಲ ಮಾಡುವುದರಿಂದ ಏನು ಫಲ ಸಿಗುತ್ತದೆ ?

**ತಯಾ ಪೃಷ್ಟೋ ಯಾಜಕೋಽಪಿ ಲೋಕಾನಾಂ ಹಿತಕಾಮ್ಯಯಾ ।**
**ಫಲಂ ವಿಧಾನಂ ಯತ್ಸರ್ವಂ ತದವೋಚನ್ಮಹಾಮುನಿಃ ॥ ೫೦ ॥**

ಲಕ್ಷಣೆಯ ಪ್ರಶ್ನೆಯನ್ನು ಕೇಳಿದ ಮುನಿಶ್ರೇಷ್ಠನಾದ ಯಾಜಕನು ಜನರ ಹಿತದೃಷ್ಟಿಯಿಂದ ಲಕ್ಷಬತ್ತಿ ವ್ರತದ ವಿವರಗಳನ್ನೆಲ್ಲ ಹೇಳಲಾರಂಭಿಸಿದನು.

**ಕಾಲೋ ಹಿ ಕಾರ್ತಿಕೋ ಮಾಸೋ ಮಾಘೋ ವೈಶಾಖ ಏವ ವಾ ।**
**ಸಹಸ್ರಗುಣಿತಂ ತತ್ತು ವ್ರತಮೇತದ್ಧಿ ಕಾರ್ತಿಕೇ ॥ ೫೧ ॥**
**ತಸ್ಮಾತ್ಕೋಟಿಗುಣಂ ದತ್ತೇ ಮಾಘೇ ಮಾಸಿ ವ್ರತೋತ್ತಮಮ್ ।**
**ತಸ್ಮಾದನಂತಗುಣಿತಂ ಫಲಂ ವೈಶಾಖಮಾಸಿ ವೈ ॥ ೫೨ ॥**

ಈ ವ್ರತವನ್ನು ಮಾಡಲು ಕಾರ್ತಿಕ, ಮಾಘ, ವೈಶಾಖಗಳು ಪ್ರಶಸ್ತ. ಕಾರ್ತಿಕ ಮಾಸದಲ್ಲಿ ಮಾಡುವುದರಿಂದ (ಇತರ ಮಾಸಗಳಲ್ಲಿ ಮಾಡುವುದಕ್ಕಿಂತ) ಸಹಸ್ರದಷ್ಟು ಹೆಚ್ಚು ಫಲ; ಮಾಘದಲ್ಲಿ ಮಾಡುವುದರಿಂದ ಕಾರ್ತಿಕಕ್ಕಿಂತ ಕೋಟಿಯಷ್ಟು ಹೆಚ್ಚು ಫಲ; ವೈಶಾಖದಲ್ಲಿ ಆಚರಿಸುವುದರಿಂದ ಮಾಘಕ್ಕಿಂತ ಅನಂತ ಫಲ.

**ಏತಸ್ಮಿನ್ ಮಾಸತ್ರಿತಯೇ ಯಸ್ಮಿನ್ ಮಾಸಿ ಸಮಾಪ್ಯತೇ ।**
**ತಸ್ಮಾತ್ ಮಾಸದ್ವಯಾತ್ಪೂರ್ವಂ ಪ್ರಾರಭೇತ್ತು ವ್ರತಂ ತ್ವಿದಮ್ ॥ ೫೩ ॥**

ಈ ಮೂರು ಮಾಸಗಳ ಪೈಕಿ ಯಾವ ಮಾಸದಲ್ಲಿ ಸಮಾಪ್ತಿಯಾಗುವುದೋ ಆ ಮಾಸಕ್ಕೆ ಎರಡು ತಿಂಗಳ ಮೊದಲು ವ್ರತವನ್ನು ಆರಂಭಿಸಬೇಕು.

**ಅಂತೇಮಾಸಿ ಪ್ರಕುರ್ವೀತ ಸಮಾಪ್ತಿಂ ಚ ವಿಚಕ್ಷಣಃ ।**
**ಸಹಸ್ರವರ್ತಿಭಿಃ ಕುರ್ಯಾತ್ ಆರ್ತಿಕ್ಯಂ ವಿಷ್ಣವೇsನ್ವಹಮ್ ॥ ೫೪ ॥**

ಕಡೆಯ ತಿಂಗಳಿನಲ್ಲಿ ವ್ರತವನ್ನು ಸಾಧಕನು ಮುಗಿಸಬೇಕು. ಆಗ ನಿತ್ಯವೂ ಶ್ರೀವಿಷ್ಣುವಿಗೆ ಸಹಸ್ರಬತ್ತಿಗಳಿಂದ ಮಂಗಳಾರತಿ ಮಾಡಬೇಕು.

**ಘೃತೇನಾಪ್ಯಥ ತೈಲೇನ ಸಮ್ಯಗುಕ್ತೈರ್ಮನೋರಮೈಃ ।**
**ಯಸ್ಮಿನ್ ಮಾಸೇ ಸಮಾಪ್ತಿಃ ಸ್ಯಾತ್ ಪೌರ್ಣಮ್ಯಾಂ ತತ್ರ ಕಾರಯೇತ್ ॥**
**ಉದ್ಯಾಪನಂ ವಿಧಾನೇನ ವ್ರತಸಂಪೂರ್ತಿಕಾರಣಮ್ ।**
**ಪ್ರಾತಃ ಸ್ನಾತ್ವಾ ಶುಚಿರ್ಭೂತ್ವಾ ಪಂಚಗವ್ಯಂ ತು ಪ್ರಾಶಯೇತ್ ॥ ೫೬ ॥**

ಬತ್ತಿಗಳನ್ನು ಒಳ್ಳೆಯ ತುಪ್ಪ ಅಥವಾ ಎಣ್ಣೆಯಲ್ಲಿ ನೆನೆಸಿರಬೇಕು. ಯಾವ ತಿಂಗಳಿನಲ್ಲಿ ವ್ರತ ಮುಗಿಯುವುದೋ ಆ ತಿಂಗಳಿನ ಹುಣ್ಣಿಮೆಯ ದಿನ ಸಮಾಪ್ತಿ ಮಾಡಬೇಕು. ವ್ರತದ ಪೂರ್ಣಫಲಕ್ಕಾಗಿ ಉದ್ಯಾಪನೆಯನ್ನು ಆಚರಿಸಬೇಕು. ಆ ದಿನ ಪ್ರಾತಃಕಾಲ ಸ್ನಾನಮಾಡಿ, ಶುಚಿಯಾಗಿ, ಪಂಚಗವ್ಯವನ್ನು ಪ್ರಾಶನ ಮಾಡಬೇಕು.

**ಪುಣ್ಯಾಹವಾಚನಂ ಕೃತ್ವಾ ವರೇದಾಚಾರ್ಯಮುತ್ತಮಮ್ ।**
**ಬ್ರಹ್ಮಾಣಮೃತ್ವಿಜಶ್ಚೈವ ಕುರ್ಯಾತ್ ತರ್ಪಣಮಂಜಸಾ ॥ ೫೭ ॥**

ನಂತರ ಪುಣ್ಯಾಹವಾಚನೆಯನ್ನು ಮಾಡಿಕೊಂಡು ಉತ್ತಮರಾದ ಆಚಾರ್ಯರನ್ನೂ ಋತ್ವಿಜರನ್ನೂ ಆಹ್ವಾನಿಸಿ ತರ್ಪಣ ಮಾಡಬೇಕು.

**ಸತಿಲೈಶ್ಚ ಯವೈಃ ಕುರ್ಯಾದಗ್ನೇನಯಋಚಾ ದ್ವಿಜಃ ।**
**ವರ್ತ್ಯಾದಶಾಂಶತಃ ಕುರ್ಯಾತ್ ತರ್ಪಣಂ ತು ವಿಚಕ್ಷಣಃ ॥ ೫೮ ॥**

ಎಳ್ಳು, ಅಕ್ಕಿಗಳಿಂದ "ಅಗ್ನಿಮೀಳೇ" ಎಂಬ ವೇದಮಂತ್ರದಿಂದ ಬತ್ತಿಗಳ ಹತ್ತನೇ ಒಂದು ಭಾಗದಷ್ಟು ಬಾರಿ ತರ್ಪಣ ಮಾಡಬೇಕು.

**ತರ್ಪಣಸ್ಯ ದಶಾಂಶೇನ ಹೋಮಂ ಕುರ್ಯಾತ್ ವಿಧಾನತಃ ।**
**ತರ್ಪಣೋಕ್ತೇನ ಮಂತ್ರೇಣ ಪಾಯಸಂ ಚ ಘೃತಾನ್ವಿತಮ್ ॥ ೫೯ ॥**
**ಪಾಲಾಶಸಮಿಧಶ್ಚೈವ ಮಂತ್ರರಶ್ಚೈಶ್ಚ ವೈಷ್ಣವೈಃ ।**
**ಘೃತಂ ತು ವಿಷ್ಣುಗಾಯತ್ರ್ಯಾ ಹೋಮಸ್ಯಾಯಂ ವಿಧಿಃ ಸ್ಮೃತಃ ॥ ೬೦ ॥**

ತರ್ಪಣದ ಹತ್ತರಲ್ಲಿ ಒಂದು ಭಾಗದಷ್ಟು ಬಾರಿ ಅಗ್ನಿಯಲ್ಲಿ ಹೋಮಿಸಬೇಕು. ತುಪ್ಪವನ್ನು ಸೇರಿಸಿದ ಪಾಯಸದಿಂದ ಹೋಮಮಾಡಬೇಕು. ಹೋಮದಲ್ಲಿ

ಮುತ್ತುಗದ ಸಮಿತ್ತುಗಳನ್ನು, ಶ್ರೇಷ್ಠವಾದ ವಿಷ್ಣುಗಾಯತ್ರಿ ಮಂತ್ರಗಳನ್ನು ಉಚ್ಚರಿಸುತ್ತ, ತುಪ್ಪದಿಂದ ಕೂಡಿಸಿ ಹಾಕಬೇಕು. ಹೋಮದ ವಿಧಿ ಇದು.

**ಕಲಶಂ ತಂ ತಥಾ ಸ್ಥಾಪ್ಯ ಸಪಿಧಾನಂ ಸವಸ್ತ್ರಕಮ್ ।**
**ತತ್ತನ್ಮಾಸಾಧಿದೇವಸ್ಯ ಪ್ರತಿಮಾಂ ಕಾರಯೇತ್ತತಃ ॥ ೬೧ ॥**

ನಂತರ ಕಲಶವನ್ನು ಸ್ಥಾಪಿಸಿ, ಅದನ್ನು ವಸ್ತ್ರಭೂಷಣಗಳಿಂದ ಅಲಂಕರಿಸಬೇಕು. ಆಯಾ ತಿಂಗಳಿನ ಅಭಿಮಾನಿದೇವತೆಯ ಪ್ರತಿಮೆಯನ್ನು ಮಾಡಿಸಿರಬೇಕು.

**ಕಾಲೋ ವಿಷ್ಣುಸ್ತಥಾ ವಹ್ನೀ ರವಿರಾಪೋ ನಿಶಾಕರಃ ।**
**ರುದ್ರಃ ಶೇಷೋ ಜಗದ್ವ್ಯಾಪೀ ತೇಜೋರೂಪೀ ಮಹೇಶ್ವರಃ ॥ ೬೨ ॥**

**ನಿರಂಜನಃ ಫಲಾಧ್ಯಕ್ಷೋ ವಿಶ್ವರೂಪೀ ಜಗತ್ಪ್ರಭುಃ ।**
**ಸ್ವಪ್ರಕಾಶಃ ಸ್ವಯಂಜ್ಯೋತಿಃ ಚತುರ್ವ್ಯೂಹೋ ಜನಾಶ್ರಯಃ ॥ ೬೩ ॥**

**ಪರಬ್ರಹ್ಮೇತಿ ದ್ವಿದಶನಾಮಭಿಃ ಪೂಜಯೇದ್ಧರಿಮ್ ।**
**ಶಿರೋ ಲಲಾಟನೇತ್ರೇ ಚ ಕರ್ಣೌ ನಾಸಾಮುಖಂ ತಥಾ ॥ ೬೪ ॥**

**ಕಂಠಂ ಸ್ಕಂಧೌ ತಥಾ ಬಾಹೂ ಸ್ತನೌ ವಕ್ಷಸ್ತಥೋದರಮ್ ।**
**ನಾಭಿಂ ಕಟಿಂ ಚ ಜಘನೇ ಊರೂ ಜಾನೂ ಚ ಗುಲ್ಫಕೇ ॥ ೬೫ ॥**

**ಪಾದೌ ತದಗ್ರಂ ಕ್ರಮಶೋ ಹ್ಯಂಗಾನ್ಯೇತೈಶ್ಚ ಪೂಜಯೇತ್ ।**
**ಧೂಪದೀಪೌ ತತೋ ದತ್ವಾ ನೈವೇದ್ಯಂ ತು ನಿವೇದಯೇತ್ ॥ ೬೬ ॥**

ಮೇಲೆ ಹೇಳಿದ ಪ್ರತಿಮೆಯಲ್ಲಿ—ಕಾಲ, ವಿಷ್ಣು, ಅಗ್ನಿ, ಸೂರ್ಯ, ವರುಣ, ಚಂದ್ರ, ರುದ್ರ, ಶೇಷ, ಜಗದ್ವ್ಯಾಪಿ, ತೇಜೋರೂಪಿ, ಮಹೇಶ್ವರ, ನಿರಂಜನ, ಫಲಾಧ್ಯಕ್ಷ, ವಿಶ್ವರೂಪೀ, ಜಗತ್ಪ್ರಭು, ಸ್ವಪ್ರಕಾಶ, ಸ್ವಯಂಜ್ಯೋತಿ, ಚತುರ್ವ್ಯೂಹ, ಜನಾಶ್ರಯ, ಪರಬ್ರಹ್ಮ ಹೀಗೆ ಈ ಇಪ್ಪತ್ತು ನಾಮಗಳಿಂದ ಪ್ರತಿಮೆಯ ನಾನಾ ಅವಯುವಗಳಲ್ಲಿ ಪೂಜಿಸಬೇಕು. ಅವಯುವಗಳು—ಶಿರಸ್ಸು, ಹಣೆ, ನೇತ್ರಗಳು, ಕಿವಿಗಳು, ಮೂಗು, ಮುಖ, ಕುತ್ತಿಗೆ, ಹೆಗಲು, ಬಾಹುಗಳು, ಸ್ತನಗಳು, ವಕ್ಷಸ್‌ಸ್ಥಳ, ಉದರ, ನಾಭಿ, ಸೊಂಟ, ಕೆಳದೊಡೆ, ತೊಡೆ, ಕಾಲು, ಮಣಿಕಟ್ಟು, ಕಾಲುಗಳ ಅಗ್ರಭಾಗ—ಹೀಗೆ ಕ್ರಮದಿಂದ ಪೂಜಿಸಬೇಕು. ಧೂಪ, ದೀಪ, ನೈವೇದ್ಯಗಳನ್ನು ನಂತರ ಸಮರ್ಪಿಸಬೇಕು.

**ಆಚಾರ್ಯಂ ಪೂಜಯೇತ್ ಪಶ್ಚಾತ್ ಬ್ರಹ್ಮಾಣಮೃತ್ವಿಜಂ ತಥಾ ।**
**ಗೌರ್ದಾತವ್ಯಾ ಸವತ್ಸಾ ಚ ಸಾಲಂಕಾರಾ ಗುಣೋಚಿತಾ ॥ ೬೭ ॥**

ನಂತರ ಆಚಾರ್ಯರನ್ನೂ, ಆಮೇಲೆ ಬ್ರಾಹ್ಮಣ-ಋತ್ವಿಜರನ್ನೂ ಸತ್ಕರಿಸ ಬೇಕು. ಅಲಂಕಾರಮಾಡಿದ ಕರುವಿನಿಂದ ಸಹಿತವಾದ ಹಸುವನ್ನು ದಾನ ಕೊಡ ಬೇಕು.

**ತ್ರಿಂಶತ್ಪಲಂ ಕಾಂಸ್ಯಪಾತ್ರಂ ಘೃತೇನ ಪರಿಪೂರಿತಮ್ ।**
**ಸುವರ್ಣವರ್ತಿಸಂಯುಕ್ತಂ ಆಚಾರ್ಯಾಯ ನಿವೇದಯೇತ್ ॥ ೬೮ ॥**
**ಯದ್ವಾ ದಶಪಲಂ ಕಾಂಸ್ಯಂ ತಥಾ ಘೃತಸಮನ್ವಿತಮ್ ।**
**ಸುವರ್ಣವರ್ತಿಸಂಯುಕ್ತಂ ಆಚಾರ್ಯಾಯ ನಿವೇದಯೇತ್ ॥ ೬೯ ॥**

ಮೂವತ್ತು ತೊಲ ಕಂಚಿನ ಪಾತ್ರೆಯನ್ನು ತುಪ್ಪದಿಂದ ತುಂಬಿ, ಭಂಗಾರದ ಬತ್ತಿಯಿಂದ ಸಹಿತವಾಗಿ ಆಚಾರ್ಯರಿಗೆ ದಾನಮಾಡಬೇಕು. ಅದು ಆಗದೇ ಇದ್ದಲ್ಲಿ ಹತ್ತು ತೊಲ ತೂಕದ ಕಂಚಿನ ಪಾತ್ರೆಯನ್ನು ತುಪ್ಪದಿಂದ ತುಂಬಿ, ಭಂ ಗಾ ರ ದ ಬತ್ತಿಯಿಂದ ಸಹಿತವಾಗಿ ದಾನ ಕೊಡಬೇಕು.

**ಅಥವಾ ತು ಯಥಾಶಕ್ತ್ಯಾ ದದ್ಯಾದಾವಶ್ಯಕಂ ತ್ವಿತಿ ।**
**ವ್ರತಾಭಾವೇ ಚ ಯೋ ದದ್ಯಾತ್ ಕಾಂಸ್ಯಂ ತು ಘೃತಪೂರಿತಮ್ ॥ ೭೦ ॥**
**ಯಾವಜ್ಜೀವಂ ಜೀವಪತ್ನೀ ಭವತ್ಯೇವ ನ ಸಂಶಯಃ ।**
**ರಜೋದೋಷಾದ್ವಿಮುಕ್ತಾ ಸ್ಯಾತ್ ಪೌರ್ಣಮಾಸ್ಯಾಂ ದದಾತಿ ಯಾ ॥**
**ಬ್ರಾಹ್ಮಣಾನ್ ಭೋಜಯೇತ್ ಪಶ್ಚಾತ್ ವಿತ್ತಶಾಠ್ಯಂ ನ ಕಾರಯೇತ್ ।**
**ಯಾ ಚೈವಂ ಕುರುತೇ ನಾರೀ ತಸ್ಯಾಃ ಪುಣ್ಯಫಲಂ ಶೃಣು ॥ ೭೨ ॥**

ಅದೂ ಆಗದೇ ಇದ್ದಲ್ಲಿ ಶಕ್ತಿಯಿದ್ದಷ್ಟು ದಾನಕೊಡಬೇಕು. ವ್ರತವನ್ನು ಮಾಡದೇ ಇದ್ದರೂ ಯಾರು ತುಪ್ಪದಿಂದ ತುಂಬಿದ ಕಂಚಿನ ಪಾತ್ರೆಯನ್ನು ದಾನ ಕೊಡುವರೋ ಅವರ ಮರಣಪರ್ಯಂತ ಅವರ ಪತ್ನಿಯಿರುವಳು. ಪೌರ್ಣಿಮೆಯಲ್ಲಿ ಯಾವ ಸ್ತ್ರೀಯು ಹೀಗೆ ದಾನಕೊಡುವಳೋ ಅ ವ ಳು ರಜಸ್ವಲಾದೋಷದಿಂದ ಮುಕ್ತಳಾಗುತ್ತಾಳೆ. ನಂತರ ದ್ರವ್ಯಲೋಭ ಮಾಡದೇ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಹೀಗೆ ಮಾಡುವ ಸ್ತ್ರೀಯ ಪುಣ್ಯಫಲವನ್ನು ಕೇಳು—

**ಅವಾಚ್ಯಾನ್ಯಪಿ ಪಾಪಾನಿ ರಹಸ್ಯೇವ ಕೃತಾನಿ ಚ ।**
**ನಶ್ಯಂತಿ ತಾನಿ ಸರ್ವಾಣಿ ವ್ರತಸ್ಯಾಸ್ಯ ಪ್ರಭಾವತಃ ॥ ೭೩ ॥**
**ಚಾಂಡಾಲಗಾಮಿನೀ ವಾಪಿ ತಥಾ ಶೂದ್ರಾಭಿಮರ್ಶಿನೀ ।**
**ಕಾರೂಕರಜಕಾದೀನಾಂ ಕಾಮಿನೀ ದುಷ್ಟಚಾರಿಣೀ ॥ ೭೪ ॥**

**ಬ್ರಹ್ಮಕ್ಷತ್ರಿಯವೈಶ್ಯೇಷು ಪ್ರಾತಿಲೋಮ್ಯೇನ ಗಾಮಿನೀ ।**
**ಮಾತುಲೇಯಪಿತೃವ್ಯಾಪ್ತಭ್ರಾತೃಪುತ್ರಾಭಿಮರ್ಶಿನೀ ॥ ೭೫ ॥**

ರಹಸ್ಯವಾಗಿ ಆಚರಿಸಿದ, ಹೇಳಬಾರದಂತಹ ಪಾಪಕರ್ಮಗಳು ಈ ಲಕ್ಷಬತ್ತಿ ವ್ರತದ ಪ್ರಭಾವದಿಂದ ನಾಶವಾಗುತ್ತವೆ. ಸ್ತ್ರೀಯು ಚಂಡಾಲನ ಸಂಗಡ ಸಂಬಂಧ ಇಟ್ಟುಕೊಂಡಿರುವುದು, ಶೂದ್ರರ ಜತೆ ರಮಿಸುವುದು, ಶಿಲ್ಪಿ, ಅಗಸ ಮುಂತಾದ ಜಾತಿಯ ಪುರುಷರೊಂದಿಗೆ ರಮಿಸುವುದು, ದುಷ್ಟವಾದ ನಡತೆಯುಳ್ಳವರಾಗಿರುವುದು, ಬ್ರಾಹ್ಮಣ–ಕ್ಷತ್ರಿಯ–ವೈಶ್ಯ–ಶೂದ್ರ–ಪ್ರತಿಲೋಮಿ (ಇತರ ಸಂಕರ ಜಾತಿ) ಇವರೊಡನೆ ಸಂಪರ್ಕ ಇಟ್ಟುಕೊಂಡಿರುವುದು, ಸೋದರಮಾವ, ಚಿಕ್ಕಪ್ಪ, ಆಪ್ತರು, ಸಹೋದರರು, ಮಕ್ಕಳು ಮುಂತಾದವರೊಡನೆ ಅನೀತಿಯುತ ಸಂಬಂಧ ಇಟ್ಟುಕೊಂಡಿದ್ದರೂ—ಈ ಪಾಪಗಳೆಲ್ಲ ಈ ವ್ರತದ ಪ್ರಭಾವದಿಂದ ನಾಶಹೊಂದುತ್ತವೆ.

**ಬಾಲಘ್ನೀ ವಾ ಪತಿಘ್ನೀ ವಾ ಮಾತಾಪಿತ್ರೋರ್ವಧೇ ರತಾ ।**
**ಗೋಘ್ನೀ ವಾ ತಸ್ಕರೀ ವಾಪಿ ರಜಃಸಂಕರಕಾರಿಣೀ ॥ ೭೬ ॥**
**ವಹ್ನಿದಾ ಗರದಾ ವಾಪಿ ನಿತ್ಯಮಪ್ರಿಯವಾದಿನೀ ।**
**ಪತ್ಯೌ ಜೀವತಿ ಯಾ ನಾರೀ ಮೃತೇ ವಾ ವ್ಯಭಿಚಾರಿಣೀ ॥ ೭೭ ॥**
**ಏವಮಾದಿಮಹಾಪಾಪೈರಾವೃತಾಪಿ ಕುಲಾಂಗನಾ ।**
**ಕೃತ್ವಾ ಚೈತದ್ವ್ರತಂ ಪುಣ್ಯಂ ಮುಚ್ಯತೇ ನಾತ್ರ ಸಂಶಯಃ ॥ ೭೮ ॥**

ಶಿಶುಹತ್ಯಾ, ಪತಿಹತ್ಯಾ, ತಾಯಿತಂದೆಯರ ಹತ್ಯೆ, ಗೋಹತ್ಯ, ಕಳ್ಳತನ, ರಜಸ್ವಲೆಯಾದಾಗ ಎಲ್ಲರನ್ನೂ ಮುಟ್ಟಿ ಅಪವಿತ್ರಮಾಡುವುದು, ಮನೆಗೆ ಬೆಂಕಿ ಹಾಕುವುದು, ಇತರರಿಗೆ ವಿಷಪಾನಮಾಡಿಸುವುದು, ಸರ್ವದಾ ಅಮಂಗಳಕರ ಮಾತುಗಳನ್ನಾಡುವುದು, ಪತಿಯು ಬದುಕಿದ್ದಾಗಲಾಗಲೀ ಮೃತನಾದಮೇಲೆಯಾಗಲೀ ವ್ಯಭಿಚಾರಿಣಿಯಾಗುವುದು—ಇವೇ ಮುಂತಾದ ಮಹಾಪಾಪಗಳನ್ನು ಮಾಡಿದ್ದರೂ ಈ ಲಕ್ಷಬತ್ತೀವ್ರತಮಾಡುವುದರಿಂದ ಆ ಪಾಪಗಳಿಂದ ಮುಕ್ತಳಾಗುತ್ತಾಳೆ, ಸಂಶಯವಿಲ್ಲ.

**ವ್ರತಾನಾಮುತ್ತಮಂ ಚೈತತ್ ಸ್ತ್ರೀಣಾಮಾವಶ್ಯಕಂ ತ್ರಿದಿವಮ್ ।**
**ಏಕಾರ್ತಿಕಪ್ರದಾನೇನ ವಿಷ್ಣೋರಮಿತತೇಜಸಃ ॥ ೭೯ ॥**
**ಕೋಟಿಯೋ ಬ್ರಹ್ಮಹತ್ಯಾನಾಂ ಅಗಮ್ಯಾಗಮಕೋಟಯಃ ।**
**ತಥೈವಾತ್ಯುಗ್ರಪಾಪಾನಾಂ ಕೋಟಯೋsಥ ಸಹಸ್ರಶಃ ॥ ೮೦ ॥**
**ನಶ್ಯಂತಿ ನಾತ್ರ ಸಂದೇಹೋ ನಾರೀಣಾಂ ವಾ ನರಸ್ಯ ಚ ।**
**ಕಿಂ ಲಕ್ಷವರ್ತಿಭಿಃ ವಿಷ್ಣೋಃ ಕೃತೇ ಚಾರಾರ್ತಿಕಾರ್ಪಣೇ ॥ ೮೧ ॥**

ವ್ರತಗಳಲ್ಲಿ ಅತ್ಯುತ್ತಮವಾದುದು ಇದು ; ಸ್ತ್ರೀಯರಿಗಂತೂ ತುಂಬ ಅವಶ್ಯಕ. ಅಪರಿಮಿತ ತೇಜಸ್ಸಿನಿಂದ ಯುಕ್ತನಾದ ವಿಷ್ಣುವಿಗೆ ಬತ್ತಿಯಿಂದ ಒಂದೇ ಬಾರಿ ಆರತಿ ಮಾಡುವುದರಿಂದ ಕೋಟಿ ಬ್ರಹ್ಮಹತ್ಯವೂ, ಅಸಂಖ್ಯ ಅಗಮ್ಯಗಮನದ ಪಾಪವೂ ಮತ್ತು ಸಹಸ್ರಾರು ಕೋಟಿ ಇತರ ಮಹತ್ತರ ಪಾಪಗಳೂ ನಾಶಹೊಂದುತ್ತವೆ, ಸಂದೇಹವಿಲ್ಲ. ವಿಷ್ಣುವಿಗೆ ಲಕ್ಷಬತ್ತಿ ಮಂಗಳಾರತಿ ಮಾಡುವುದರಿಂದ ಸ್ತ್ರೀಯರಿಗಾಗಲೀ ಪುರುಷರಿಗಾಗಲೀ ಎಷ್ಟು ಫಲ ಬರುತ್ತದೆಯೆಂಬುದನ್ನು ವರ್ಣಿಸಲು ಸಾಧ್ಯವಿಲ್ಲ.

**ಕಿಮತ್ರ ಬಹುನೋಕ್ತೇನ ನಾನೇನ ಸದೃಶಂ ವ್ರತಮ್ ।**
**ಪುರುಷೋಽಪಿ ವ್ರತಂ ಕೃತ್ವಾ ಪೂರ್ವೋಕ್ತೈಃ ಪಾಪಸಂಚಯೈಃ ॥ ೮೨ ॥**
**ಮುಚ್ಯತೇ ನಾತ್ರ ಸಂದೇಹೋ ಮಧುಸೂದನಶಾಸನಾತ್ ।**
**ಏತತ್ಸರ್ವಂ ಮಯಾಖ್ಯಾತಂ ಪೃಚ್ಛಂತ್ಯಾಸ್ತವ ಮಾನದೇ ॥ ೮೩ ॥**

ಹೆಚ್ಚು ಹೇಳಲೇನು! ಇದಕ್ಕೆ ಸದೃಶವಾದ ಬೇರೊಂದು ವ್ರತವಿಲ್ಲ. ಪುರುಷರೂ ಸಹ ಈ ಲಕ್ಷಬತ್ತೀ ವ್ರತ ಆಚರಿಸುವುದರಿಂದ, ಹಿಂದೆ ವಿವರಿಸಿದ ಪಾಪರಾಶಿಗಳಿಂದ ಮುಕ್ತರಾಗುತ್ತಾರೆ, ಸಂಶಯವಿಲ್ಲ. ಹೀಗಾಗಲು ಶ್ರೀಹರಿಯ ಆಜ್ಞೆ ಇದೆ. ನೀನು ಕೇಳಿದ ಪ್ರಶ್ನೆಗಳಿಗೆ ಉತ್ತರವನ್ನು ನೀಡಿದ್ದೇನೆ.

**ವ್ರತಂ ಕುರು ಸುಖಂ ತಿಷ್ಠ ಯಥಾ ತೇ ರೋಚತೇ ಮನಃ ।**
**ಇತಿ ತದ್ವಚನಂ ಶ್ರುತ್ವಾ ಪುನಃ ಪಪ್ರಚ್ಛ ಲಕ್ಷಣಾ ॥ ೮೪ ॥**

ಇದು ನಿನ್ನ ಮನಸ್ಸಿಗೆ ಹಿಡಿದಿದ್ದರೆ ವ್ರತವನ್ನು ಮಾಡಿ ಸುಖವನ್ನು ಹೊಂದು. ಹೀಗೆ ಹೇಳಿದ ಯಾಜಕನ ಮಾತನ್ನು ಕೇಳಿ ಲಕ್ಷಣೆಯು ಪುನಃ ಕೇಳಿದಳು.

**ಅಜ್ಞಾನಾದ್ದುಷ್ಟಭಾವಾದ್ವಾ ನ ವಿಶ್ವಾಸೋ ಮಮೇಹ ಚ ।**
**ಪ್ರತ್ಯಯಾರ್ಥಂ ತತೋ ಬ್ರಹ್ಮನ್ ಪ್ರತ್ಯಕ್ಷಂ ಕುರು ಮೇಽಧುನಾ ॥ ೮೫ ॥**

ನನ್ನ ಅಜ್ಞಾನದಿಂದಲೋ ಅಥವಾ ದುಷ್ಟಸ್ವಭಾವದಿಂದಲೋ ನೀವು ಹೇಳಿದ ಮಾತುಗಳಲ್ಲಿ ನನಗೆ ವಿಶ್ವಾಸ ಬಂದಿಲ್ಲ. ನನಗೆ ನಂಬಿಕೆ ಬರಲು ನೀವು ಹೇಳಿದ್ದನ್ನು ಪ್ರತ್ಯಕ್ಷವಾಗಿ ತೋರಿಸಿರಿ.

**ಇತಿ ತದ್ವಚನಂ ಶ್ರುತ್ವಾ ಯಾಜಕೋ ವಾಕ್ಯಮಬ್ರವೀತ್ ।**
**ಕಥಂ ತೇ ಪ್ರತ್ಯಯೋ ಭೂಯಾತ್ ಇತಿ ತಾಂ ಕರುಣಾನಿಧಿಃ ॥ ೮೬ ॥**

ಲಕ್ಷಣೆಯ ಮಾತನ್ನು ಕೇಳಿದ ಕರುಣಾನಿಧಿಯಾದ ಯಾಜಕನು ಅವಳನ್ನು ಕೇಳಿದನು. “ ನಿನಗೆ ನಂಬಿಕೆ ಹುಟ್ಟಬೇಕಾದರೆ ಏನು ಮಾಡಬೇಕು ? ”

**ಸಾ ಚೋವಾಚ ಪುನರ್ವಿಪ್ರಂ ವಿಸ್ಮಯೋತ್ಫುಲ್ಲಲೋಚನಾ ।**
**ನವವೈಧವ್ಯಮಾಪನ್ನಾ ರುದತ್ಯೇಷಾ ಕುಮಾರಿಕಾ ॥ ೮೭ ॥**
**ಅಸ್ಯಾಃ ಪತಿಃ ಕಥಂ ಜೀವೇದ್ವೈಧವ್ಯಂ ಚೈವ ಗಚ್ಛತಿ ।**
**ತಥಾ ಕುರು ಮುನಿಶ್ರೇಷ್ಠ ದಯಾ ಶಮವತಾಂ ಧನಮ್ ॥ ೮೮ ॥**

ಅರಳಿದ ಕಣ್ಣುಗಳನ್ನುಳ್ಳ ಲಕ್ಷಣೆಯು ಪುನಃ ಯಾಜಕನಿಗೆ ಹೇಳಿದಳು— ಹೊಸದಾಗಿ ಈಗತಾನೇ ವೈಧವ್ಯವನ್ನು ಹೊಂದಿರುವ ಈ ಚಿಕ್ಕ ವಯಸ್ಸಿನ ಸ್ತ್ರೀಯು ಬಹುವಾಗಿ ರೋದಿಸುತ್ತಿದ್ದಾಳೆ. ಇವಳ ಪತಿಯು ಪುನಃ ಬದುಕಿ ಇವಳ ವೈಧವ್ಯವು ನಾಶವಾಗಲು ಏನು ಮಾಡಬೇಕೋ ಅದನ್ನು ಮಾಡಿರಿ. ಶಾಂತಯುತರಾದ ತಮ್ಮಂಥವರಿಗೆ ದಯೆಯೇ ಐಶ್ವರ್ಯವಲ್ಲವೇ !

**ಇತಿ ತದ್ವಚನಂ ಶ್ರುತ್ವಾ ವಿಸ್ಮಿತೋ ವಾಕ್ಯಮಬ್ರವೀತ್ ।**
**ಅದ್ಯೈವ ಮಕರಂ ಪ್ರಾಪ್ತೋ ಭಾಸ್ಕರೋ ಲೋಕಭಾಸ್ಕರಃ ॥ ೮೯ ॥**
**ಮಾಘೋಽಯಂ ಚ ವರೋ ಮಾಸಃ ಸರ್ವಕ್ರತುಫಲಾಧಿಕಃ ।**
**ಅತ್ರಾದ್ಯ ತ್ವಂ ಋತುಸ್ನಾತಾ ಲಬ್ಧಂ ತೇನಾತುಲಂ ಫಲಮ್ ॥ ೯೦ ॥**

ಲಕ್ಷಣೆಯ ಮಾತನ್ನು ಕೇಳಿದ ಯಾಜಕನು ಆಶ್ಚರ್ಯದಿಂದ ಹೇಳಿದನು— ಜಗತ್ತಿಗೇ ಪ್ರಕಾಶವನ್ನು ನೀಡುವ ಸೂರ್ಯನು ಈ ದಿನ ತಾನೇ ಮಕರರಾಶಿಗೆ ಬಂದಿರುತ್ತಾನೆ. ಈಗ ಮಾಘಮಾಸ. ಈ ಕಾಲದಲ್ಲಿ ಮಾಡುವ ಸತ್ಕರ್ಮಗಳು ಸಮಸ್ತಯಜ್ಞಗಳಿಂದ ಬರುವ ಫಲವನ್ನು ನೀಡುತ್ತವೆ. ನೀನೂ ಸಹ ಈ ದಿನ ನದಿಯಲ್ಲಿ ಋತುಸ್ನಾನ ಮಾಡಿ ಅತುಲ ಪುಣ್ಯವನ್ನು ಸಂಪಾದಿಸಿರುತ್ತೀಯೆ.

**ಸ್ನಾನಂ ಕೃಷ್ಣಾರ್ಪಣಂ ಕೃತ್ವಾ ದೇಹಿ ಚಾಸ್ಮೈ ಮೃತಾಯ ಚ ।**
**ತೇನ ಜೀವೇದಯಂ ನೂನಂ ಬ್ರಹ್ಮಘ್ನೋಽಯಂ ಪುರಾಪಿ ಚ ॥ ೯೧ ॥**
**ತಸ್ಮಾದಯಂ ರಾಜಯಕ್ಷ್ಮರೋಗೇಣ ಚ ಮೃತಿಂ ಗತಃ ।**
**ತಥಾಪಿ ಮಾಘಮಾಸಸ್ಯ ಪುಣ್ಯಾದುಜ್ಜೀವಿತಾ ಧ್ರುವಮ್ ॥ ೯೨ ॥**
**ದಾಪಯಿತ್ವಾ ಹರೇರಾರ್ತಿಂ ಕಾಂಸ್ಯಪಾತ್ರಂ ತಥೈವ ಚ ।**
**ಜೀವಪತ್ನೀ ಭವೇದಾಶು ಯಾವದಾಮರಣಾಂತಿಕಮ್ ॥ ೯೩ ॥**

ಆ ಸ್ನಾನದ ಫಲವನ್ನು 'ಕೃಷ್ಣಾರ್ಪಣ' ವೆಂದು ಹೇಳಿ ಈ ಮೃತನಿಗೆ ಕೊಡು. ಅದರಿಂದ ಅವನು ಪುನಃ ಬದುಕುತ್ತಾನೆ. ಈ ಮೃತನು ಹಿಂದೆ ಬ್ರಹ್ಮಹತ್ಯೆ ಮಾಡಿದ್ದನು. ಆದ್ದರಿಂದ ಈ ಜನ್ಮದಲ್ಲಿ ರಾಜಯಕ್ಷ್ಮ ಎಂಬ ರೋಗದಿಂದ ಮೃತನಾದನು. ಹೀಗಿದ್ದರೂ ಮಾಘಸ್ನಾನದ ಪುಣ್ಯಫಲವಾಗಿ ಪುನಃ ಬದುಕುತ್ತಾನೆ.

ಇದು ನಿಶ್ಚಯ. ಶ್ರೀಹರಿಗೆ ಆರತಿಯನ್ನು ಮಾಡಿ ಕಂಚಿನ ಪಾತ್ರೆಯನ್ನು ದಾನ ಕೊಡು. ಈ ಯುವತಿಯು ತಾನು ಬದುಕಿರುವಷ್ಟು ಕಾಲವೂ ಸುಮಂಗಲಿ ಯಾಗಿರುತ್ತಾಳೆ.

**ಲಕ್ಷಣಾ ವಚನಂ ಶ್ರುತ್ವಾ ಜಲಂ ಸ್ಪೃಷ್ಟ್ವಾ ಚ ವಾಗ್ಯತಾ ।**
**ಸ್ನಾನಂ ವಿಷ್ಣ್ವರ್ಪಣಂ ಕೃತ್ವಾ ದದೌ ತಸ್ಮೈ ಫಲಂ ಮುದಾ ॥ ೯೪ ॥**
**ಅಸ್ಯಾಃ ಪುಣ್ಯಪ್ರಭಾವೇಣ ತತ್ಕ್ಷಣಾದೇವ ಸೋತ್ಥಿತಃ ।**
**ಭುಜಂಗಂ ಸ್ವಂ ಪ್ರೇಷಯಿತ್ವಾ ನೀತ್ವಾ ಕಾಂಸ್ಯಂ ಚ ಪಾತ್ರಕಮ್ ॥ ೯೫ ॥**
**ಕುಮಾರ್ಯಾ ದಾಪಯಾಮಾಸ ವೈಧವ್ಯಸ್ಯಾಪನುತ್ತಯೇ ।**
**ಏತತ್ಪುಣ್ಯಪ್ರಭಾವೇನ ಕುಮಾರೀ ಸಾಪಿ ಶೋಭನಾ ॥ ೯೬ ॥**

ಯಾಜಕನು ಹೇಳಿದಂತೆ ಲಕ್ಷಣೆಯು ಕೈಯಲ್ಲಿ ನೀರನ್ನು ತೆಗೆದುಕೊಂಡು ಸ್ನಾನದ ಫಲವನ್ನು ಮೊದಲು ಶ್ರೀಹರಿಗೆ ಅರ್ಪಿಸಿ ನಂತರ ಸಂತೋಷದಿಂದ ಆ ಮೃತಪುರುಷನಿಗೆ ಕೊಟ್ಟಳು. ಈ ಪುಣ್ಯಪ್ರಭಾವದಿಂದ ಆ ಮೃತಪುರುಷನು ಕೂಡಲೇ ಎದ್ದು ಕುಳಿತನು. ಸೇವಕನಾದ ಭುಜಂಗನನ್ನು ತನ್ನ ಮನೆಗೆ ಕಳಿಸಿ ಕಂಚಿನ ಪಾತ್ರೆಯನ್ನು ತರಿಸಿ ವೈಧವ್ಯ ಪರಿಹಾರಕ್ಕಾಗಿ ಆ ಕುಮಾರಿಯಿಂದ ದಾನ ಕೊಡಿಸಿದಳು. ಅದರ ಪುಣ್ಯಪ್ರಭಾವದಿಂದ ಆ ಕುಮಾರಿಯೂ ಸುಮಂಗಲಿಯಾದಳು.

**ಯಾವಜ್ಜೀವಂ ಜೀವಪತ್ನೀ ಬಭೂವ ಬಹುಪುತ್ರಿಕಾ ।**
**ಕುಮಾರೀ ಶೋಭನಾ ನಾಮ ತತ್ಪತಿಃ ಕಣಭಾಜನಃ ॥ ೯೭ ॥**
**ತದ್ಬಾಂಧವಾಸ್ತಥಾ ಸರ್ವೇ ತುಷ್ಟುವುಸ್ತಾಂ ಚ ಲಕ್ಷಣಾಮ್ ।**
**ಯಾಜಕಂ ಚೈವ ಸಂಪ್ರೀತ್ಯಾ ಜಗ್ಮುಸ್ತೇ ಚ ನಿಕೇತನಮ್ ॥ ೯೮ ॥**
**ಲಕ್ಷಣಾ ಸೈವ ತೇನಾಪಿ ಭುಜಂಗೇನ ಚ ಸಂಯುತಾ ।**
**ಮಾಘಸ್ನಾನಂ ತಥಾ ಕೃತ್ವಾ ವ್ರತಮೇತಚ್ಚಕಾರ ಸಾ ॥ ೯೯ ॥**

ತಾನು ಬದುಕಿರುವತನಕ ಶೋಭನಾ ಎಂಬ ಆ ಯುವತಿಯು ಕಣಭಾಜನ ನೆಂಬ ತನ್ನ ಪತಿಯೊಡನೆ ಸುಖವಾಗಿದ್ದು ಅನೇಕ ಮಕ್ಕಳನ್ನು ಪಡೆದಳು. ಶೋಭನೆಯ ಬಂಧುಗಳೆಲ್ಲರೂ ಸಂತೋಷದಿಂದ ಲಕ್ಷಣೆಯನ್ನೂ ಯಾಜಕನನ್ನೂ ಆನಂದದಿಂದ ಹೊಗಳಿ ತಮ್ಮ ಮನೆಗಳಿಗೆ ಹೋದರು. ಲಕ್ಷಣೆಯೂ ಸಹ ಭುಜಂಗ ನಿಂದ ಸಹಿತಳಾಗಿ ಮನೆಗೆ ತೆರಳಿದಳು. ನಿತ್ಯವೂ ಮಾಘಸ್ನಾನ ವ್ರತವನ್ನು ಮಾಡಿ ಲಕ್ಷ್ಮೀವ್ರತವನ್ನು ಆಚರಿಸಿದಳು.

(ಇಲ್ಲಿ ಮೃತನಾಗಿದ್ದ ಕಣಭಾಜನು ಅಪಮೃತ್ಯುವಿಗೆ ತುತ್ತಾಗಿದ್ದನೆಂದು ತಿಳಿಯಬೇಕು. ಕಾಲಮೃತ್ಯು ಹೊಂದಿದವರು ಸತ್ತವರು ಪುನಃ ಬದುಕುವುದಿಲ್ಲ.)

ತತಸ್ತು ಮರಣಂ ಪ್ರಾಪ್ತೋ ದಾಸಸ್ತಸ್ಯಾಃ ಸಹಾಯಕೃತ್ ।
ಗಯೋ ನಾಮ ಮಹಾರಾಜಶ್ಚಕ್ರವರ್ತೀ ಬಭೂವ ಸಃ ॥ ೧೦೦ ॥

ಸಾ ಲಕ್ಷಣಾ ಚ ತತ್ಪತ್ನೀ ಸರ್ವಲಕ್ಷಣಸಂಯುತಾ ।
ಬಭೂವ ಲೋಕವಿಖ್ಯಾತಾ ಜೀವಪತ್ನೀ ಸುಪುತ್ರಿಕಾ ॥ ೧೦೧ ॥

ನಂತರ ಲಕ್ಷಣೆಗೆ ಸೇವಕನಾಗಿದ್ದ ಭುಜಂಗನು ಅವಳಿಗೆ ಸಹಾಯಮಾಡಿದ ಪುಣ್ಯದಿಂದ ಜನ್ಮಾಂತರದಲ್ಲಿ 'ಗಯ' ಎಂಬ ಹೆಸರಿನ ಚಕ್ರವರ್ತಿಯಾದನು. ಲಕ್ಷಣೆಯು ಸರ್ವಲಕ್ಷಣಯುಕ್ತಳಾಗಿ ಗಯನಿಗೆ ಪತ್ನಿಯಾದಳು. ಅನೇಕ ಮಕ್ಕಳನ್ನು ಪಡೆದು ಆಜೀವಪರ್ಯಂತ ಸುಮಂಗಲಿಯಾಗಿದ್ದು ಲೋಕವಿಖ್ಯಾತಳಾದಳು.

ತಸ್ಮಾದ್ಯೋ ಮಾಘಮಾಸಸ್ಯ ಸಹಾಯಂ ಕಾರಯಿಷ್ಯತಿ ।
ಧರ್ಮಸ್ಯ ತತ್ಫಲಂ ಪ್ರಾಪ್ಯ ಮುಚ್ಯತೇ ನಾತ್ರ ಸಂಶಯಃ ॥ ೧೦೨ ॥

ಮಾಘಸ್ನಾನ ಮತ್ತು ಇತರ ಸತ್ಕರ್ಮಗಳಲ್ಲಿ ಸಹಾಯಮಾಡುವವರೂ ಸಹ ಮಾಘಮಾಸದ ಕರ್ಮಫಲಗಳನ್ನು ಹೊಂದಿ ಪಾಪಗಳಿಂದ ಮುಕ್ತರಾಗುವರು, ಇದರಲ್ಲಿ ಸಂಶಯವಿಲ್ಲ.

ನಿತ್ಯಸ್ನಾನೇ ತ್ವಶಕ್ತಸ್ತು ಕುರ್ಯಾತ್ತೇನ ದಿನತ್ರಯಮ್ ।
ದ್ವಾದಶ್ಯಾಂ ರಥಸಪ್ತಮ್ಯಾಂ ಪೌರ್ಣಮಾಸ್ಯಾಂ ತಥೈವ ಚ ॥ ೧೦೩ ॥

ಸೋಽಪಿ ಪೂರ್ಣಫಲಂ ಪ್ರಾಪ್ಯ ವಿಷ್ಣುಲೋಕೇ ಮಹೀಯತೇ ।
ಅಥವಾ ಪೌರ್ಣಮಾಸ್ಯಾಂ ವಾ ಮಾಘಸ್ನಾನಂ ಚರೇದ್ಬುಧಃ ॥ ೧೦೪ ॥
ತಾವನ್ಮಾತ್ರೇಣ ಮುಕ್ತಃ ಸ್ಯಾನ್ನಾತ್ರ ಕಾರ್ಯಾ ವಿಚಾರಣಾ ।
ಸಂಧ್ಯಾವನ್ನಿತ್ಯಕರ್ಮೇದಂ ಮಹಾಪಾತಕನಾಶನಮ್ ॥ ೧೦೫ ॥

ನಿತ್ಯದಲ್ಲಿಯೂ ಸ್ನಾನಮಾಡಲು ಅಶಕ್ತನಾದವನು, ದ್ವಾದಶೀ, ರಥ-ಸಪ್ತಮೀ, ಪೌರ್ಣಿಮಾ—ಈ ಮೂರು ದಿನಗಳಲ್ಲಿಯಾದರೂ ಸ್ನಾನಮಾಡಿದರೆ ಪೂರ್ಣಫಲವು ದೊರಕಿ ವಿಷ್ಣುಲೋಕದಲ್ಲಿ ಆನಂದದಿಂದ ಇರುತ್ತಾನೆ. ಅದೂ ಸಾಧ್ಯವಾಗದಿದ್ದಲ್ಲಿ ಪೌರ್ಣಿಮೆಯಲ್ಲಿಯಾದರೂ ಮಾಘಸ್ನಾನ ಮಾಡುವುದರಿಂದ ಪಾಪಗಳಿಂದ ಮುಕ್ತನಾಗುವನು, ಸಂಶಯವಿಲ್ಲ. ಸ್ನಾನವು ಸಂಧ್ಯಾವಂದನೆಯಂತಹ ನಿತ್ಯಕರ್ಮದಂತೆ ಪಾಪಪರಿಹಾರಕ.

**ಯೋ ನ ಸ್ನಾಯಾದ್ದೃಢೋ ಮಾಘೇ ಮಕರಸ್ಥೇ ದಿವಾಕರೇ ।**
**ಬ್ರಹ್ಮಹಾ ಸ ತು ವಿಜ್ಞೇಯಃ ಸರ್ವಕರ್ಮಸು ಗರ್ಹಿತಃ ॥ ೧೦೬ ॥**
**ನಾರೀ ವಾ ಪುರುಷೋ ವಾಪಿ ನ ಸ್ನಾಯಾದರುಣೋದಯೇ ।**
**ಶಾಶ್ವತಂ ನರಕಂ ಪ್ರಾಪ್ಯ ತಿಷ್ಠತ್ಯಾಭೂತಸಂಪ್ಲವಮ್ ॥ ೧೦೭ ॥**
**ರೋಗಾದ್ಯುಪಹತೋ ಯಸ್ತು ಪಾದೌ ಪ್ರಕ್ಷಾಲ್ಯ ವಾಗ್ಯತಃ ।**
**ಧೌತವಸ್ತ್ರಂ ಪರೀಧಾಯ ತ್ರಿರಾಚಮ್ಯ ಚ ವಾರಿಣಾ ॥ ೧೦೮ ॥**
**ಗಾಯತ್ರ್ಯಾ ಮಂತ್ರಿತಂ ಚಾಂಭಃ ಪ್ರೋಕ್ಷಯೇತ್ ಮೂರ್ಧ್ನಿ ಚ ದ್ವಿಜಃ ।**
**ಸೋಽಪಿ ಸ್ನಾನಫಲಂ ಪ್ರಾಪ್ಯ ಮೋದತೇ ವಿಷ್ಣುಮಂದಿರೇ ॥ ೧೦೯ ॥**

ದೃಢಕಾಯನಾಗಿದ್ದರೂ ಮಕರದಲ್ಲಿ ಸೂರ್ಯನು ಇದ್ದು ಮಾಘಮಾಸ ಬಂದಾಗ ಪ್ರಾತಃಕಾಲದಲ್ಲಿ ಸ್ನಾನ ಮಾಡುವುದಿಲ್ಲವೋ ಅವನು ಬ್ರಹ್ಮಹತ್ಯೆಯನ್ನು ಮಾಡಿದವನಂತೆ ಆಗುವನು ; ಸಕಲ ಸತ್ಕರ್ಮಗಳಿದಲೂ ಬಹಿಷ್ಕೃತನಾಗುತ್ತಾನೆ. ಸ್ತ್ರೀಯಾಗಲೀ ಪುರುಷನಾಗಲೀ, ಅರುಣೋದಯದಲ್ಲಿ ಸ್ನಾನಮಾಡದಿದ್ದರೆ ಶಾಶ್ವತ ನರಕದಲ್ಲಿ ಬಿದ್ದು ಜಗತ್ತು ಲಯಹೊಂದುವತನಕ ಅಲ್ಲಿಯೇ ಇರುವರು. ರೋಗಗ್ರಸ್ತನು ಕೈಕಾಲುಗಳನ್ನು ತೊಳೆದುಕೊಂಡು, ಶುದ್ಧನಾಗಿ, ಶುಭ್ರವಾದ ವಸ್ತ್ರಗಳನ್ನು ಧರಿಸಿ, ಮೂರು ಸಲ ಆಚಮನಮಾಡಿ, ಗಾಯತ್ರಿಯಿಂದ ಅಭಿಮಂತ್ರಿತವಾದ ಜಲವನ್ನು ತಲೆಯಮೇಲೆ ಪ್ರೋಕ್ಷಣೆ ಮಾಡಿಕೊಳ್ಳುವುದರಿಂದ ಸ್ನಾನದ ಫಲವನ್ನು ಹೊಂದಿ ವಿಷ್ಣುಲೋಕದಲ್ಲಿ ಆನಂದಪಡುವನು.

ಇತಿ ಶ್ರೀ ವಾಯುಪುರಾಣೇ ಮಾಘಮಾಸಮಾಹಾತ್ಮ್ಯೇ
ತ್ರಯೋವಿಂಶೋಽಧ್ಯಾಯಃ

ಶ್ರೀವಾಯುಪುರಾಣಾಂತರ್ಗತ ಮಾಘಮಾಸಮಾಹಾತ್ಮ್ಯೆಯಲ್ಲಿ
ಇಪ್ಪತ್ತಮೂರನೇ ಅಧ್ಯಾಯವು ಸಮಾಪ್ತಿಯಾಯಿತು.

**ಶಾಂಡಿಲ್ಯ ಉವಾಚ—**

**ಮಾಘಮಾಸೇ ತು ಸಂಪ್ರಾಪ್ತೇ ಮಕರಸ್ಥೇ ದಿವಾಕರೇ ।**
**ಪೂರ್ವೋಕ್ತವಿಧಿನಾ ಸ್ನಾತ್ವಾ ಕೋಮಲೈಸ್ತುಲಸೀದಲೈಃ ॥ ೧ ॥**
**ಮಾಧವಂ ಚ ಸಮಭ್ಯರ್ಚ್ಯ ಸ್ತುತ್ವಾ ತು ಸ್ತವರಾಜತಃ ।**
**ಮಾಧವಪ್ರತಿಮಾಂ ದತ್ವಾ ಭೋಜಯಿತ್ವಾ ದ್ವಿಜೋತ್ತಮಮ್ ॥ ೨ ॥**

ಶ್ಯಾಂಡಿಲ್ಯರು ನುಡಿದರು :

ಮಾಘಮಾಸದಲ್ಲಿ ಸೂರ್ಯನು ಮಕರರಾಶಿಯಲ್ಲಿರುವಾಗ ಹಿಂದೆ ಹೇಳಿದ ಪ್ರಕಾರ ಪ್ರಾತಃಕಾಲದಲ್ಲಿ ಸ್ನಾನಮಾಡಿ ಎಳೆಯ ತುಳಸೀದಳಗಳಿಂದ ಶ್ರೀಹರಿಯನ್ನು ಪೂಜಿಸಿ, ಮಾಧವಸ್ತವರಾಜವೆಂಬ ಸ್ತೋತ್ರದಿಂದ ಪರಮಾತ್ಮನನ್ನು ಸ್ತುತಿಸಿ, ಮಾಧವ ಪ್ರತಿಮೆಯನ್ನು ದಾನಮಾಡಿ, ಉತ್ತಮನಾದ ಬ್ರಾಹ್ಮಣನಿಗೆ ಭೋಜನ ಮಾಡಿಸಬೇಕು.

**ಏವಂ ಕೃತ್ವಾ ಮಾಸಮೇಕಂ ವ್ರತಮೇತತ್ ಸಮಾಪಯೇತ್ ।**
**ಕೋಟಿಜನ್ಮಾರ್ಜಿತಂ ಪಾಪಂ ನಿರ್ಧೂಯಾಖಿಲಸಂಪದಃ ॥ ೩ ॥**
**ಭುಕ್ತ್ವೇಹ ಸರ್ವಾನ್ಕಾಮಾಂಶ್ಚ ಪುತ್ರಪೌತ್ರಾದಿಭಿರ್ವೃತಃ ।**
**ಸ ಕೋಟಿಕುಲಮುದ್ಧೃತ್ಯ ವಿಷ್ಣೋಃ ಸಾಯುಜ್ಯಮಾಪ್ನುಯಾತ್ ॥ ೪ ॥**

ಈ ರೀತಿ ಒಂದು ತಿಂಗಳು ವ್ರತವನ್ನಾಚರಿಸಿ ಶ್ರೀಹರಿಯಲ್ಲಿ ಸಮರ್ಪಿಸಬೇಕು. ಹೀಗೆ ಮಾಡುವುದರಿಂದ ಹಿಂದಿನ ಕೋಟಿ ಜನ್ಮಗಳಲ್ಲಿ ಮಾಡಿದ್ದ ಪಾಪಗಳು ನಾಶಹೊಂದುತ್ತವೆ. ಅನೇಕ ವಿಧವಾದ ಐಶ್ವರ್ಯಗಳನ್ನು ಅನುಭವಿಸಿ, ಎಲ್ಲ ಮನೋರಥಗಳನ್ನೂ ಪೂರೈಸಿಕೊಂಡು, ಪುತ್ರಪೌತ್ರಾದಿಗಳನ್ನೂ ಪಡೆದು ಒಂದು ಕೋಟಿ ಕುಲಗಳನ್ನು ಉದ್ಧರಿಸಿ ಕೊನೆಯಲ್ಲಿ ಶ್ರೀಹರಿಯ ಸಾಯುಜ್ಯ ಮೋಕ್ಷವನ್ನು ಪಡೆಯುವನು.

**ಕಲೌ ಕಲುಷಚಿತ್ತಾನಾಂ ನರಾಣಾಂ ಪಾಪಕರ್ಮಣಾಮ್ ।**
**ಮಾಘಸ್ನಾನಂ ಗತಿಸ್ತೇಷಾಂ ಸರ್ವಾಘೌಘವಿನಾಶನಮ್ ॥ ೫ ॥**
**ಸರ್ವದುಃಖೋಪಶಮನಂ ನಿದಾನಂ ಸರ್ವಸಂಪದಾಮ್ ।**
**ಪ್ರಾತರ್ಮಾಘೇ ತು ಯಃ ಸ್ನಾತ್ವಾ ಸಕೃತ್ ಮಾಧವಮರ್ಚಯೇತ್ ॥೬॥**

ಕಲಿಯುಗದಲ್ಲಿ ಅಂತಃಕರಣವು ಕಷ್ಮಲದಿಂದ ಯುಕ್ತವಾಗಿ ಪಾಪಕರ್ಮಾಚರಣೆಯಲ್ಲಿ ಆಸಕ್ತರಾದವರಿಗೆ ಸಮಸ್ತಪಾಪಗಳ ನಾಶಕ್ಕೆ ಮಾಘಸ್ನಾನವೇ ಗತಿ.

ಸಮಸ್ತ ಐಶ್ವರ್ಯಕ್ಕೂ ಅದೇ ಕಾರಣ. ಮಾಘದಲ್ಲಿ ಪ್ರಾತಃಕಾಲದಲ್ಲಿ ಸ್ನಾನಮಾಡಿ ಶ್ರೀಹರಿಯನ್ನು ಭಕ್ತಿಯಿಂದ ಪೂಜಿಸಬೇಕು.

**ತಾವತೈವ ವಿಶುದ್ಧಾತ್ಮಾ ಯಾತಿ ಬ್ರಹ್ಮ ಸನಾತನಮ್ ।**
**ಶೀಕಾರ್ತಾನಾಂ ಚ ಸಾಧೂನಾಂ ಸ್ನಾತಾನಾಮರುಣೋದಯೇ ॥ ೭ ॥**

**ಯೋ ದದಾತೀಂಧನಂ ವಹ್ನಿಂ ವಹ್ನಿಲೋಕಂ ಸ ಗಚ್ಛತಿ ।**
**ಮಾಘೇ ಮಕರಗೇ ಭಾನೌ ಪ್ರಾತಃಸ್ನಾನಪರೋ ನರಃ ॥ ೮ ॥**

**ತೈಲಾಭ್ಯಂಗಪರಿತ್ಯಾಗೀ ತಥಾ ವೈ ಪತ್ರಭೋಜನಃ ।**
**ಕಾಂಸ್ಯಪಾತ್ರಪರಿತ್ಯಾಗೀ ವಿಷ್ಣುಲೋಕೇ ಮಹೀಯತೇ ॥ ೯ ॥**

ಇಷ್ಟರಿಂದಲೇ ಅವನ ಅಂತಃಕರಣವು ನಿರ್ಮಲವಾಗಿ ಅವನು ಮೋಕ್ಷಕ್ಕೆ ಹೋಗುತ್ತಾನೆ. ಪ್ರಾತಃಸ್ನಾನಮಾಡಿ ಚಳಿಯಿಂದ ಪೀಡಿತರಾದ ಸಜ್ಜನರಿಗೆ ಬೆಂಕಿಯನ್ನು ತಯಾರಿಸಿಕೊಟ್ಟರೆ ವಹ್ನಿಲೋಕಕ್ಕೆ ಹೋಗುವರು. ಸೂರ್ಯನು ಮಕರದಲ್ಲಿದ್ದಾಗ ಮಾಘಸ್ನಾನಪರನಾದವನು ತೈಲಾಭ್ಯಂಗವನ್ನು ಪರಿತ್ಯಜಿಸಿ, ಎಲೆಯಲ್ಲಿ ಭೋಜನಮಾಡಿ, ಕಂಚಿನ ಪಾತ್ರೆಯನ್ನು ಪರಿತ್ಯಜಿಸಿದರೆ ವಿಷ್ಣುಲೋಕದಲ್ಲಿ ಆನಂದದಿಂದ ಇರುತ್ತಾನೆ.

**ಯೋಽರ್ಚಯೇನ್ಮಾಘಮಾಸೇ ತು ವಿಷ್ಣವೇ ಪರಮಾತ್ಮನೇ ।**
**ಸಗುಡಂ ತಿಲಪಿಷ್ಟಂ ಚ ಸೋಽಪಿ ಮೃತ್ಯೋರ್ವಿಮುಚ್ಯತೇ ॥ ೧೦ ॥**

**ಮಾಘೇ ಮಾಧವರೂಪಂ ತು ಸೌವರ್ಣಂ ಯೋ ದದಾತಿ ಚ ।**
**ಸ ತು ಮೋಕ್ಷಮವಾಪ್ನೋತಿ ಕುಲಮುದ್ಧರತೇ ಶತಮ್ ॥ ೧೧ ॥**

ಮಾಘಮಾಸದಲ್ಲಿ ಸರ್ವೋತ್ತಮನಾದ ವಿಷ್ಣುವನ್ನು ಪೂಜಿಸಿ, ಎಳ್ಳನ್ನು ಹಿಟ್ಟನಂತೆ ಮಾಡಿ ಅದಕ್ಕೆ ಬೆಲ್ಲ ಸೇರಿಸಿ, ಸಮರ್ಪಿಸಿದರೆ ಅಪಮೃತ್ಯುವಿನಿಂದ ಪಾರಾಗುತ್ತಾನೆ. ಮಾಘದಲ್ಲಿ ಭಂಗಾರದಿಂದ ಮಾಡಿದ ಮಾಧವನ ಪ್ರತಿಮೆಯನ್ನು ದಾನ ಮಾಡುವುದರಿಂದ ನೂರು ಕುಲಗಳನ್ನು ಉದ್ಧರಿಸಿ ಮೋಕ್ಷಕ್ಕೆ ಹೋಗುತ್ತಾನೆ.

**ಯೋ ಮಾಘೇ ಶಿಂಶುಮಾರಸ್ಯ ಪ್ರತಿಮಾಂ ಚ ದ್ವಿಜಾತಯೇ ।**
**ಮೃತಾಪತ್ಯಾಖ್ಯದೋಷೇಣ ಮುಚ್ಯತೇ ನಾತ್ರ ಸಂಶಯಃ ॥ ೧೨ ॥**

ಮಾಘದಲ್ಲಿ ಭಂಗಾರದ ಶಿಂಶುಮಾರ ಪ್ರತಿಮೆಯನ್ನು ಬ್ರಾಹ್ಮಣನಿಗೆ ದಾನ ಮಾಡುವುದರಿಂದ ಮಕ್ಕಳು ಹುಟ್ಟಿ ಸಾಯುವ ದೋಷದಿಂದ ಮುಕ್ತರಾಗುತ್ತಾರೆ, ಸಂಶಯವಿಲ್ಲ.

**ಸುವರ್ಣಂ ಕೋಟಿಭಾರಂ ತು ಯೋ ದದ್ಯಾತ್ ಕುರುಜಾಂಗಲೇ ।**
**ತತ್ಪುಣ್ಯಂ ಲಭತೇ ಮಾಘೇ ಗೋಪೀಚಂದನದಾನತಃ ॥ ೧೩ ॥**

ಕುರುಜಾಂಗಲದಲ್ಲಿ (ಗಿಡಮರಗಳೂ, ನೀರೂ ಇದ್ದು ಪವಿತ್ರವಾದ ಸ್ಥಳ) ಕೋಟಿಭಾರ ಭಂಗಾರವನ್ನು ದಾನಮಾಡಿದರೆ ಎಷ್ಟು ಪುಣ್ಯ ಬರುವುದೋ ಅಷ್ಟು ಪುಣ್ಯವು ಮಾಘಮಾಸದಲ್ಲಿ ಗೋಪೀಚಂದನ ದಾನದಿಂದ ಬರುತ್ತದೆ.

**ಯೋ ಮಾಘೇ ವೈಶ್ವದೇವಾಯ ತಂಡುಲಂ ತು ದದಾತಿ ವೈ ।**
**ಪೂರ್ಣಾಯುಷ್ಯಮವಾಪ್ನೋತಿ ನರಕಂ ನೈವ ಗಚ್ಛತಿ ॥ ೧೪ ॥**

ಮಾಘಮಾಸದಲ್ಲಿ ವೈಶ್ವದೇವ ಹೋಮಕ್ಕಾಗಿ ಅಕ್ಕಿಯನ್ನು ದಾನ ಮಾಡಿದರೆ ಅವನು ಪೂರ್ಣಾಯುಷ್ಯವನ್ನು ಪಡೆಯುತ್ತಾನೆ, ನರಕಕ್ಕೆ ಹೋಗುವುದೇ ಇಲ್ಲ.

**ಘೃತಪ್ರಸ್ಥಂ ತು ಯೋ ದದ್ಯಾತ್ ಮಾಘೇ ಮಾಧವವಲ್ಲಭೇ ।**
**ಅಲಕ್ಷ್ಮೀಂ ಅಪಮೃತ್ಯುಂ ಚ ಜಯತ್ಯದ್ಧಾ ನ ಸಂಶಯಃ ॥ ೧೫ ॥**

ಮಾಧವನಿಗೆ ಪ್ರಿಯವಾದ ಮಾಘದಲ್ಲಿ ತುಪ್ಪವನ್ನು ದಾನ ಮಾಡಿದರೆ ದಾರಿದ್ರ್ಯವನ್ನೂ, ಅಪಮೃತ್ಯುವನ್ನೂ ಜಯಿಸುತ್ತಾನೆ, ಸಂಶಯವಿಲ್ಲ.

**ತೈಲದೀಪಂ ತು ಯೋ ದದ್ಯಾತ್ ಪೌರ್ಣಮ್ಯಾಂ ವಿಷ್ಣುಮಂದಿರೇ ।**
**ಅಕಾಲಮೃತ್ಯುಂ ಜಯತ್ಯಾಶು ಮಧುಶಾಸನಶಾಸನಾತ್ ॥ ೧೬ ॥**

ವಿಷ್ಣುವಿನ ದೇವಾಲಯದಲ್ಲಿ ಹುಣ್ಣಿಮೆಯಲ್ಲಿ ತೈಲದೀಪವನ್ನು ದಾನ ಮಾಡಲು ಪರಮಾತ್ಮನ ಆಜ್ಞೆಯಂತೆ ಅಪಮೃತ್ಯುವನ್ನು ಜಯಿಸುವನು.

**ಯೋ ದದ್ಯಾತ್ ವಸ್ತ್ರದಾನಂ ತು ಶೀತಾರ್ತಾಯ ದ್ವಿಜಾತಯೇ ।**
**ಪೂರ್ಣಾಯುಷ್ಯಮವಾಪ್ನೋತಿ ವಿಷ್ಣುಲೋಕಂ ಸ ಗಚ್ಛತಿ ॥ ೧೭ ॥**

ಶೀತದಿಂದ ಪೀಡಿತನಾದ ಬ್ರಾಹ್ಮಣನಿಗೆ ವಸ್ತ್ರದಾನ ಮಾಡಿದವನು ಪೂರ್ಣ ಆಯುಷ್ಮಂತನಾಗಿ ವಿಷ್ಣುಲೋಕಕ್ಕೆ ಹೋಗುತ್ತಾನೆ.

**ತಾಂಬೂಲಂ ಪ್ರತ್ಯಹಂ ದದ್ಯಾತ್ ಮಾಘೇ ಮಾಸಿ ದ್ವಿಜಾತಯೇ ।**
**ಪೂರ್ಣಾಯುಷ್ಯಮವಾಪ್ನೋತಿ ವಿಷ್ಣುಲೋಕಂ ಚ ಗಚ್ಛತಿ ॥ ೧೮ ॥**
**ದಾರಿದ್ರ್ಯದೋಷನಿರ್ಮುಕ್ತೋ ಮಹದೈಶ್ವರ್ಯಮಾಪ್ನುಯಾತ್ ।**
**ಯೋ ದದ್ಯಾತ್ ತಿಲಪಾತ್ರಂ ತು ಮಾಘಸ್ನಾನಪರೋ ನರಃ ॥ ೧೯ ॥**

ಮಾಘಮಾಸದಲ್ಲಿ ನಿತ್ಯವೂ ತಾಂಬೂಲವನ್ನು ಬ್ರಾಹ್ಮಣನಿಗೆ ದಾನಮಾಡುವುದರಿಂದ ಪೂರ್ಣವಾದ ಆಯುಸ್ಸನ್ನು ಪಡೆದು ವಿಷ್ಣುಲೋಕಕ್ಕೆ ತೆರಳುವನು. ಮಾಘಸ್ನಾನದಲ್ಲಿ ನಿರತನಾದವನು ಎಳ್ಳನ್ನು ತುಂಬಿ ಪಾತ್ರೆಯನ್ನು ದಾನ ಮಾಡುವುದರಿಂದ ಅವನ ದಾರಿದ್ರ್ಯವೆಲ್ಲ ನಾಶವಾಗಿ ಮಹದೈಶ್ವರ್ಯ ಲಭಿಸುತ್ತದೆ.

**ನಿರ್ಧೂಯ ಸರ್ವಪಾಪಾನಿ ಗ್ರಹಪೀಡಾಂ ವ್ಯಪೋಹತಿ ।**
**ಯೋ ಮಾಘೇ ತು ಬಹಿಃ ಸ್ನಾತ್ವಾ ಮಾಧವಸ್ಯ ಮಹಾತ್ಮನಃ ।**
**ಪ್ರಕುರ್ಯಾತ್ ಮಹತೀಂ ಪೂಜಾಂ ನ ಪುನರ್ಜಾಯತೇ ಭುವಿ ॥ ೨೦ ॥**

ಮಾಘಮಾಸದಲ್ಲಿ ಪ್ರಾತಃಕಾಲದಲ್ಲಿ ನದೀ, ಸರೋವರ ಮುಂತಾದ ಬಹಿರ್ಜಲಗಳಲ್ಲಿ ಸ್ನಾನಮಾಡಿ, ಶ್ರೀಹರಿಯನ್ನು ವಿಶೇಷಭಕ್ತಿಯಿಂದ ಪೂಜಿಸಿದರೆ ಸಕಲ ಪಾಪಗಳೂ ನಾಶಹೊಂದುತ್ತವೆ. ಗ್ರಹಪೀಡಾದಿಗಳು ಸಂಭವಿಸುವುದೇ ಇಲ್ಲ. ಅವನಿಗೆ ಪುನರ್ಜನ್ಮವಿರುವುದಿಲ್ಲ.

**ರಂಭಾಫಲೈಃ ಇಕ್ಷುದಂಡೈಃ ಧೂಪದೀಪೈರ್ಮನೋಹರೈಃ ।**
**ಸಕೃದ್ವಾ ಪೂಜಿತೋ ವಿಷ್ಣುಃ ಪೂಜಿತಃ ಕೋಟಿವತ್ಸರಮ್ ॥ ೨೧ ॥**

ಬಾಳೆಹಣ್ಣು, ಕಬ್ಬು, ಧೂಪ, ದೀಪ ಇವುಗಳಿಂದ ಶ್ರೀವಿಷ್ಣುವನ್ನು ಒಂದೇ ಬಾರಿ ಪೂಜಿಸಿದರೂ, ಕೋಟಿವರ್ಷಗಳು ಪೂಜಿಸಿದಷ್ಟು ಫಲ ಬರುತ್ತದೆ.

**ಏಕಸ್ಮಿನ್ ವಾ ದಿನೇ ಯಸ್ತು ಪ್ರಾತರ್ಮಾಘೇ ಜಲಾಪ್ಲುತಃ ।**
**ಕ್ಷಣಂ ಶ್ರುತ್ವಾ ಹರೇರ್ದಿವ್ಯಾಂ ಕಥಾಂ ಶ್ರೋತ್ರಮನೋಹರಾಮ್ ॥೨೨॥**
**ಸರ್ವಾಘೌಘೈರ್ವಿನಿರ್ಮುಕ್ತೋ ವಿಷ್ಣುಸಾಯುಜ್ಯಮಾಪ್ನುಯಾತ್ ।**
**ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ ॥ ೨೩ ॥**

ಮಾಘಮಾಸದಲ್ಲಿ ಕೇವಲ ಒಂದು ದಿವಸ ಪ್ರಾತಃಕಾಲದಲ್ಲಿ ಸ್ನಾನಮಾಡಿ, ಶ್ರೋತ್ರೇಂದ್ರಿಯಗಳಿಗೆ ಮನೋಹರವಾಗಿರುವ ಶ್ರೀಹರಿಯ ಕಥೆಯನ್ನು ಒಂದು ಕ್ಷಣಮಾತ್ರ ಕೇಳಿದರೂ, ಸಕಲ ಪಾಪಗಳಿಂದಲೂ ಮುಕ್ತನಾಗಿ ವಿಷ್ಣುಸಾಯುಜ್ಯವನ್ನು ಪಡೆಯುತ್ತಾನೆ. ಈ ಸಂದರ್ಭದಲ್ಲಿ ಪುರಾತನವಾದ ಒಂದು ಕಥೆ ಇದೆ.

**ಶ್ರುತ್ವಾ ವಿಮುಚ್ಯತೇ ಪಾಪಾತ್ ಪೂರ್ವಜನ್ಮಶತಾರ್ಜಿತಾನ್ ।**
**ಪುರಾ ತು ದಾರುಣೋ ನಾಮ ಲುಬ್ಧಕೋ ಲೋಕಕಂಟಕಃ ॥ ೨೪ ॥**

**ಶರಯೂವನವಾಸೀ ಚ ಕಾಲಮೃತ್ಯುರಿವಾಪರಃ ।**
**ಪಕ್ಷಿಣಃ ಸ ಮೃಗಾಂಶ್ಚೈವ ಮತ್ಸ್ಯಾನ್ ಕೂರ್ಮಾಂಶ್ಚ ಮರ್ಕಟಾನ್ ॥**

**ಪತಂಗಾನ್ ಮೂಷಕಾಂಶ್ಚೈವ ಗೋಧಾಕರ್ಪರದೇಹಿನಃ ।**
**ಜಾಲೈಃ ಶಸ್ತ್ರೈಶ್ಚ ಶೂಲೈಶ್ಚ ಧನುರ್ಮುಕ್ತೈಃ ಶಿಲಾಕಣೈಃ ॥ ೨೬ ॥**
**ಖಾತೈರ್ಬಂಧನಲೇಪೈಶ್ಚ ತಥಾ ಫೂತ್ಕಾರಲೋಷ್ಟಕೈಃ ।**
**ಸಾರಮೇಯೈಃ ಸಹಚರೈಃ ಹತ್ವಾ ಜೀವನಮಾಪ ಸಃ ॥ ೨೭ ॥**

ಆ ಕಥೆಯನ್ನು ಕೇಳುವುದರಿಂದ ಹಿಂದಿನ ನೂರು ಜನ್ಮಗಳಲ್ಲಿ ಮಾಡಿದ ಪಾಪಗಳು ನಾಶವಾಗುತ್ತವೆ. ಹಿಂದೆ "ಶರಯೂವನ" ಎಂಬ ಕಾಡಿನಲ್ಲಿ ದಾರುಣ ನೆಂಬ ಬೇಟೆಗಾರನಿದ್ದ. ಲೋಕಕಂಟಕನಾಗಿಯೂ, ಕಾಲಮೃತ್ಯುವಿನಂತೆಯೂ ಇದ್ದ. ಪಕ್ಷಿಗಳನ್ನೂ, ಮೃಗಗಳನ್ನೂ, ಮೀನುಗಳನ್ನೂ, ಆಮೆಗಳನ್ನೂ, ಕಪಿಗಳನ್ನೂ, ಮಿಂಚುಹುಳುಗಳನ್ನೂ, ಇಲಿಗಳನ್ನೂ, ದೊಡ್ಡ ತಲೆಯಿರುವ ಪ್ರಾಣಿಗಳನ್ನೂ ಬಲೆಗಳಿಂದ, ಆಯುಧಗಳಿಂದ, ಶೂಲಗಳಿಂದ, ಬಿಲ್ಲುಬಾಣಗಳಿಂದ, ಕಲ್ಲುಗಳಿಂದ, ಲೇಪನದ್ರವ್ಯಗಳಿಂದಲೂ, ಬಂಧನಗಳಿಂದಲೂ, ಘಟ್ಟಿಯಾಗಿ ಕೂಗುವುದರಿಂದಲೂ, ನಾಯಿಗಳನ್ನು ಬಿಡುವುದರಿಂದಲೂ ಬೇಟೆಯಾಡಿ ಸಂಹರಿಸಿ ತನ್ನ ಜೀವನವನ್ನು ಸಾಗಿಸುತ್ತಿದ್ದನು.

**ಪಥಿಕಾನ್ ಬಾಧತೇ ನಿತ್ಯಂ ಚೋರವೃತ್ತ್ಯಾ ಧನುರ್ಧರಃ ।**
**ಗ್ರಾಮ್ಯಾನ್ ಪಶೂನ್ ಬಹಿರ್ನೀತ್ವಾ ಗವಾದೀಂಸ್ತಾನ್ ಮಹಾನಿಶಿ ॥೨೮॥**
**ಹತ್ವಾ ಚ ವೃತ್ತಿಮಕರೋತ್ ಪಾಪಾತ್ಮಾ ಲುಬ್ಧಕೋ ಹ್ಯಯಮ್ ।**
**ವೃತ್ತಿಹೀನಸ್ತಥಾಪ್ಯಾಸೀನ್ಮಹತಾ ಕರ್ಮಣಾಧಮಃ ॥ ೨೯ ॥**

ರಸ್ತೆಯಲ್ಲಿ ಪ್ರಯಾಣಮಾಡುತ್ತಿದ್ದವರನ್ನು ನಿತ್ಯವೂ ಧನುರ್ಬಾಣಗಳಿಂದ ಪೀಡಿಸಿ ಕಳ್ಳತನ ಮಾಡುತ್ತಿದ್ದನು. ಹಳ್ಳಿಗಳಲ್ಲಿದ್ದ ಹಸು-ಎಮ್ಮೆಗಳನ್ನು ಊರಿನಿಂದ ಹೊರಗೆ ತಂದು ಪಾಪಿಷ್ಠನಾದ ಈ ಬೇಟೆಗಾರನು ಅವುಗಳನ್ನು ಸಂಹರಿಸುತ್ತಿದ್ದನು. ಇಂತಹ ನೀಚವೃತ್ತಿಗೆ ಇಳಿದು ಜೀವಿಸುತ್ತಿದ್ದನು.

**ಕದಾಚಿತ್ ಮಾಘಮಾಸೇ ತು ಪ್ರಾತರ್ಮತ್ಸ್ಯಾಭಿಕಾಂಕ್ಷಯಾ ।**
**ಶರಯೂಪವನೇ ರಮ್ಯೇ ಪುಣ್ಯಕ್ಷೇತ್ರೇ ಕುಟೇರಕೇ ॥ ೩೦ ॥**
**ಉಪವಿಶ್ಯ ಜಲೇಽಗಾಧೇ ಗಲಂಗ್ರಹಿ ವಿಸೃಜ್ಯ ಚ ।**
**ಪ್ರಾಪ್ತಂ ಪ್ರಾಪ್ತಂ ಗೃಹೀತ್ವಾ ತು ಪುನರಾದಾತುಮಿಚ್ಛತಿ ॥ ೩೧ ॥**

ಒಂದು ದಿವಸ ಮಾಘಮಾಸದಲ್ಲಿ ಪ್ರಾತಃಕಾಲದಲ್ಲಿ ಮೀನುಗಳನ್ನು ಹಿಡಿಯ ಬೇಕೆಂಬ ಆಸೆಯಿಂದ ಈ ಬೇಡನು ಶರಯೂವನದ ಒಂದು ಭಾಗವಾದ ಕುಟೇರಿಕಾ ಎಂಬ ಪುಣ್ಯಕ್ಷೇತ್ರಕ್ಕೆ ಬಂದು, ದಡದಲ್ಲಿ ಕುಳಿತು, ಗಾಳವನ್ನು ನೀರಿನಲ್ಲಿ ಬಿಟ್ಟು, ಸಿಕ್ಕಿದ ಮೀನುಗಳನ್ನು ತುಂಬಿಕೊಂಡು ಮತ್ತೆ ಮತ್ತೆ ಗಾಳವನ್ನು ಬಿಡುತ್ತಿದ್ದನು.

**ಪ್ರಾತಃ ಸ್ನಾತುಂ ತದಾ ಜಗ್ಮುಃ ಬ್ರಾಹ್ಮಣಾ ಬ್ರಹ್ಮವಾದಿನಃ ।**
**ಶರಯೂಂ ತಾಂ ಮಹಾಪುಣ್ಯಾಂ ಮಾಘೇ ಮಕರಗೇ ರವೌ ॥ ೩೨ ॥**

**ತಸ್ಯಾಂ ಸ್ನಾತ್ವಾ ಮಹಾಪುಣ್ಯಾಃ ಕಾಲ್ಯಂ ಕರ್ಮ ನಿವರ್ತ್ಯ ಚ ।**
**ತತ್ತೀರೇsಶ್ವತ್ಥಮೂಲೇ ತು ಸಮ್ಯಗಭ್ಯರ್ಚ್ಯ ಮಾಧವಮ್ ॥ ೩೩ ॥**
**ಗಾಲವಾಖ್ಯಮುನೇಸ್ತೇsಪಿ ಶುಶ್ರುವುಶ್ಚ ಹರೇಃ ಕಥಾಮ್ ।**

ಅದೇ ಸಮಯದಲ್ಲಿ ಕೆಲವು ಬ್ರಾಹ್ಮಣರು ಪುಣ್ಯಕರವಾದ ಶರಯೂನದಿಗೆ ಬಂದು, ಮಕರರಾಶಿಯಲ್ಲಿ ಸೂರ್ಯನಿರುವ ಮಾಘದಲ್ಲಿ, ಅದರಲ್ಲಿ ಸ್ನಾನಮಾಡಿ, ಪ್ರಾತಃಕಾಲದ ನಿತ್ಯವಿಧಿಗಳನ್ನು ಪೂರೈಸಿ, ಆ ತೀರದಲ್ಲಿದ್ದ ಅಶ್ವತ್ಥಮರದ ಕೆಳಗೆ ಶ್ರೀಹರಿಯನ್ನು ಭಕ್ತಿಯಿಂದ ಅರ್ಚಿಸಿ, ಗಾಲವರೆಂಬ ಋಷಿಗಳ ಮುಖದಿಂದ ಶ್ರೀಹರಿಯ ಕಥಾಗಳನ್ನು ಶ್ರವಣಮಾಡಿದರು.

**ತದಾ ಚ ಮರ್ಕಟಃ ಕಶ್ಚಿತ್ ಸಾರಸಶ್ಚ ವಿಹಂಗಮಃ ॥ ೩೪ ॥**
**ಶಾಖೇ ಉಭೇ ಸಮಾಶ್ರಿತ್ಯ ತದಾಗತ್ಯೈವ ತಿಷ್ಠತಃ ।**
**ಶ್ರುತ್ವಾ ತಾಭ್ಯಾಂ ಕಥಾ ದಿವ್ಯಾಃ ಕ್ಷಣಂ ಕರ್ಮಾನುರೋಧತಃ ॥ ೩೫ ॥**
**ಕ್ಷಣಾತ್ ಜ್ಞಾನಂ ತಯೋರಾಸೀತ್ ತಿರ್ಯಗ್ಯೋನಿಜಯೋರಪಿ ।**
**ಪಶ್ಚಾತ್ ಸ್ವಭಾವಚಾಂಚಲ್ಯಾತ್ ಪುಪ್ಲುವೇ ಮರ್ಕಟಸ್ತದಾ ॥ ೩೬ ॥**

ಅದೇ ಕಾಲದಲ್ಲಿ ಒಂದು ಕಪಿಯೂ, ಒಂದು ಸಾರಸಪಕ್ಷಿಯೂ ಒಂದೇ ಕೊಂಬೆಯಮೇಲೆ ಕುಳಿತು ಹರಿಕಥೆಯನ್ನು ಕೇಳಿದುವು. ಆ ಕಥಾಶ್ರವಣಪ್ರಭಾವ ದಿಂದ ಪ್ರಾಣಿಗಳ ಜನ್ಮದಲ್ಲಿದ್ದರೂ ಅವುಗಳಿಗೆ ಕರ್ಮಾನುಸಾರವಾಗಿ ಜ್ಞಾನ ಬಂದಿತು. ಸ್ವಭಾವದಿಂದ ಚಂಚಲವಾದ ಕಪಿಯು ನೆಗೆಯಿತು.

**ಶಾಖಾಂ ಚ ಸಾರಸಾಕ್ರಾಂತಾಂ ಸಾರಸಗ್ರಹಣೇಚ್ಛಯಾ।**
**ಗೃಹೀತೇ ಮರ್ಕಟೇನಾಪಿ ಪಕ್ಷೀ ಪಕ್ಷೌ ವಿಧೂಯ ಚ ॥ ೩೭ ॥**

ಸಾರಸಪಕ್ಷಿಯನ್ನು ಹಿಡಿಯಬೇಕೆಂಬ ಇಚ್ಛೆಯಿಂದ ಕಪಿಯು ಆ ಪಕ್ಷಿಯು ಕುಳಿತಿದ್ದ ಕೊಂಬೆಗೆ ಹೋಗಿ ಪಕ್ಷಿಯನ್ನು ಹಿಡಿಯಿತು.

**ಸಾಕಂ ಪಪಾತ ಹರಿಣಾ ಪ್ರಾತರ್ನದ್ಯಾ ಜಲೇ ತದಾ ।**
**ಜಲೇ ನಿಮಗ್ನೌ ಚ ಮೃತೌ ತದಾ ಸಾರಸಮರ್ಕಟೌ ॥ ೩೮ ॥**

ಪಕ್ಷಿಯು ರೆಕ್ಕೆಗಳನ್ನು ಅಲ್ಲಾಡಿಸುತ್ತಾ ಕಪಿಯ ಜತೆಯಲ್ಲಿಯೇ ಸರಯೂ ನದಿಯಲ್ಲಿ ಬಿದ್ದು, ಮುಳುಗಿ, ಎರಡೂ ಸತ್ತುಹೋದುವು. ಆಗ ಪ್ರಾತಃಕಾಲ.

**ವಿಮಾನಂ ಪತಗಜ್ಯೋತಿರಾರೂಢೌ ದಿವ್ಯರೂಪಿಣೌ ।**
**ಪ್ರಕಾಶ್ಯ ತೌ ದಿಶಃ ಸರ್ವಾ ಜಗ್ಮತುರ್ವಿಷ್ಣುಮಂದಿರಮ್ ॥ ೩೯ ॥**

ಸೂರ್ಯನಂತೆ ಪ್ರಕಾಶಮಾನವಾದ ವಿಮಾನದಲ್ಲಿ ಒಳ್ಳೆಯ ರೂಪಗಳನ್ನು ಪಡೆದು ದಿಕ್ಕುಗಳಲ್ಲೆಲ್ಲಾ ಬೆಳಕನ್ನು ಚೆಲ್ಲಿ ವಿಷ್ಣುಮಂದಿರಕ್ಕೆ ಹೊರಟುಹೋದವು.

**ಪತಿತೌ ತು ಮೃತೌ ಪಶ್ಚಾತ್ ವಿಮಾನೇ ದಿವ್ಯರೂಪಿಣೌ ।**
**ಗೀಯಮಾನೌ ಚಾಪ್ಸರೋಭಿಃ ಲುಬ್ಧದೃಷ್ಟಿಪಥಂ ಗತೌ ॥**
**ತೌ ದೃಷ್ಟ್ವಾ ಲುಬ್ಧಕಃ ಪಾಪೀ ವಿಸ್ಮಯೋತ್ಫುಲ್ಲಲೋಚನಃ ೪೦ ॥**

ಬಿದ್ದ ಕಪಿ-ಪಕ್ಷಿಗಳು ದಿವ್ಯರೂಪ ಧರಿಸಿ ವಿಮಾನದಲ್ಲಿ ಪ್ರಯಾಣ ಮಾಡಿದುದನ್ನೂ ಅಪ್ಸರೆಯರು ಅವರನ್ನು ಹೊಗಳುವುದನ್ನೂ ಆ ಬೇಟೆಗಾರನು ನೋಡಿದನು. ಪಾಪಿಯಾದ ಅವನಿಗೆ ಆಶ್ಚರ್ಯವಾಯಿತು, ಕಣ್ಣುಗಳು ಅರಳಿದುವು.

**ನಿವೃತ್ತೋ ದುಷ್ಟಭಾವೇನ ಗಾಲವಂ ಪರ್ಯಪೃಚ್ಛತ ।**
**ಮುನೇ ದೃಷ್ಟಂ ಮಯಾಶ್ಚರ್ಯಂ ಮತ್ಸ್ಯಾನಾದಾತುಮಿಚ್ಛನಾ ॥೪೧॥**
**ಶಾಖಾಮೃಗಃ ಖಗಶ್ಚಾಯಂ ದೈವಾಚ್ಛಾಖೇ ಉಭೌ ಗತೌ ।**
**ಕ್ಷಣೌ ಸ್ಥಿತೌ ತಯೋರನ್ಯೋ ಮರ್ಕಟಃ ಪುಪ್ಲುವೇ ತದಾ ॥ ೪೨ ॥**

ನೀಚಸ್ವಭಾವವನ್ನು ಬಿಟ್ಟ ಬೇಟೆಗಾರನು ಗಾಲವರನ್ನು ಪ್ರಶ್ನಿಸಿದನು— "ಮುನಿಗಳೇ ! ಮೀನುಹಿಡಿಯಲು ಬಂದ ನಾನು ಒಂದು ಆಶ್ಚರ್ಯವನ್ನು ಕಂಡೆ. ಕಪಿಯೂ ಪಕ್ಷಿಯೂ ದೈವಯೋಗದಿಂದ ಒಂದೇ ಕೊಂಬೆಯಲ್ಲಿ ಸ್ವಲ್ಪಕಾಲ ಇದ್ದವು. ಕಪಿಯು ನಂತರ ಹಾರಿತು.

**ಜಗ್ರಾಹ ಸಾರಸಂ ಚಾಪಿ ತೇನ ಸಾರ್ಧಂ ಪಪಾತ ಚ ।**
**ಯುಗಪತ್ತೌ ಮೃತೌ ಮಗ್ನೌ ಯಾನಾರೂಢೌ ದಿವಂ ಗತೌ ॥ ೪೩ ॥**

ಪಕ್ಷಿಯನ್ನು ಕಪಿಯು ಹಿಡಿಯಿತು. ಆದರೆ ಅದರೊಂದಿಗೇ ನದಿಯಲ್ಲಿ ಬಿದ್ದು, ಮರಣಹೊಂದಿ, ಎರಡೂ ಸಹ ಒಳ್ಳೆ ವಿಮಾನದಲ್ಲಿ ಕುಳಿತು ಸ್ವರ್ಗಕ್ಕೆ ತೆರಳಿದವು.

**ತಾಂ ದೃಷ್ಟ್ವಾ ವಿಸ್ಮಿತೋ ಭೂತ್ವಾ ದುಷ್ಟಭಾವಂ ವಿಸೃಜ್ಯ ಚ ।**
**ತ್ವಾಂ ಪ್ರಷ್ಟುಕಾಮೋ ವಿಪ್ರೇಂದ್ರ ತವಾಂತಿಕಮುಪಾಗತಃ ॥ ೪೪ ॥**

ಆ ದೃಶ್ಯವನ್ನು ನೋಡಿ, ಆಶ್ಚರ್ಯಗೊಂಡು, ನನ್ನ ದುಷ್ಟಸ್ವಭಾವವನ್ನು ಬಿಟ್ಟು ಇದರ ವಿಚಾರವನ್ನು ನಿಮ್ಮನ್ನು ಕೇಳಬೇಕೆಂದು ಬಂದಿರುತ್ತೇನೆ.

**ತೌ ಕೌ ಪುರಾ ಖಗಹರೀ ಕೇನ ವಾ ಕರ್ಮಣಾ ಭುವಿ ।**
**ತಿರ್ಯಗ್ಯೋನಿಂ ಸಮಾಪನ್ನೌ ಮುಕ್ತೌ ಕೇನ ಚ ಕರ್ಮಣಾ ॥ ೪೫ ॥**

**ತಚ್ಛುಶ್ರೂಷೋಃ ಶ್ರದ್ಧಧಾಲೋಃ ಪೃಚ್ಛತೋ ವದ ವಿಸ್ತರಾತ್ ।**
**ಲುಬ್ಧಕಸ್ಯ ವಚಃ ಶ್ರುತ್ವಾ ಗಾಲವೋ ಮುನಿಸತ್ತಮಃ ॥ ೪೬ ॥**

**ತಮುವಾಚ ಮಹಾತ್ಮಾನಂ ಪಶ್ಚಾತ್ತಾಪಸಮುಪೇಯುಷಮ್ ।**
**ಪಶ್ಯತಾಮೇವ ಸರ್ವೇಷಾಂ ಸ್ನಾನಾರ್ಥಂ ಸಮುಪೇಯುಷಾಮ್ ॥**

**ಗಾಲವ ಉವಾಚ—**

**ಶೃಣು ಲುಬ್ಧಕ ವಕ್ಷ್ಯಾಮಿ ತಯೋರ್ವೃತ್ತಾಂತಮಂಜಸಾ ॥ ೪೭ ॥**

ಪಕ್ಷಿ ಮತ್ತು ಕಪಿಗಳು ಹಿಂದಿನ ಜನ್ಮದಲ್ಲಿ ಯಾರಾಗಿದ್ದರು, ಯಾವ ಕರ್ಮದಿಂದ ತಿರ್ಯಗ್ಯೋನಿಯಲ್ಲಿ ಹುಟ್ಟಿದುವು, ಯಾವ ಪ್ರಭಾವದಿಂದ ಸದ್ಗತಿಯನ್ನು ಪಡೆದವು—ಈ ವೃತ್ತಾಂತವನ್ನೆಲ್ಲ ವಿಸ್ತಾರವಾಗಿ ತಿಳಿಸಿರಿ; ನಾನು ಭಕ್ತಿಯಿಂದಲೂ, ಶ್ರದ್ಧೆಯಿಂದಲೂ ಕೇಳುತ್ತಿದ್ದೇನೆ.” ಬೇಟೆಗಾರನ ಮಾತನ್ನು ಕೇಳಿದ ಗಾಲವರು ಪಶ್ಚಾತ್ತಾಪದಿಂದ ಯುಕ್ತನಾದ, ಮಹಾತ್ಮನಾದ, ಸಮೀಪಕ್ಕೆ ಬಂದಿದ್ದ ಬೇಟೆಗಾರನಿಗೆ, ಸ್ನಾನಕ್ಕಾಗಿ ನದಿಗೆ ಬಂದಿದ್ದ ಎಲ್ಲರ ಮುಂದೆ ಹೇಳಿದರು. —ಬೇಟೆಗಾರನೇ, ಅವರಿಬ್ಬರ ವೃತ್ತಾಂತವನ್ನು ಹೇಳುತ್ತೇನೆ, ಕೇಳು.

**ಸ್ವಯಂ ಪಂಡಿತಮಾನ್ಯಜ್ಞೋ ಮರ್ಕಟಸ್ತು ಪುರಾ ದ್ವಿಜಃ ।**
**ಪೈಠೀನಸಿಕುಲೀನೋಽಯಂ ಮರ್ಕಟಃ ಕನಕಾಹ್ವಯಃ ॥ ೪೮ ॥**

ಕಪಿಯು ಹಿಂದೆ ಪೈಠೀನಸಿ ಎಂಬ ಬ್ರಾಹ್ಮಣ ಕುಲದಲ್ಲಿ ಹುಟ್ಟಿದ್ದನು ; ಆಗ ಅವನ ಹೆಸರು “ಕನಕ”. ಜ್ಞಾನರಹಿತನಾದರೂ ತಾನೇ ಪಂಡಿತನೆಂದು ತಿಳಿದುಕೊಂಡಿದ್ದನು.

**ಸಂತ್ಯಜ್ಯಾಪರಕರ್ಮಾಣಿ ಶೃಣ್ವತಾಂ ಚ ಹರೇಃ ಕಥಾಮ್ ।**
**ನಿಂದಾಂ ಚಕ್ರೇ ದ್ವಿಜೇಂದ್ರಾಣಾಂ ಹಾಸಪೂರ್ವಂ ದುರಾಗ್ರಹಃ ॥ ೪೯ ॥**

ಸತ್ಕರ್ಮಗಳನ್ನು ಪರಿತ್ಯಜಿಸಿ ಹರಿಕಥಾಶ್ರವಣ ಮಾಡುತ್ತಿದ್ದ ಬ್ರಾಹ್ಮಣೋತ್ತಮರನ್ನು ಹಾಸ್ಯಮಾಡುತ್ತಾ ನಿಂದಿಸುತ್ತಿದ್ದನು.

**ಪರಿತ್ಯಕ್ತಾನಿ ಕರ್ಮಾಣಿ ಯೈರ್ನಿತ್ಯಾನ್ಯಪಿ ಪಾಪಿಭಿಃ ।**
**ಕಥಾಕಥೇತ್ಯಹರಹರಿತಿ ಪಂಡಿತಮಾನಿಭಿಃ ॥ ೫೦ ॥**

ತಾವೇ ಪಂಡಿತರೆಂಬ ಅಹಂಕಾರದಿಂದಕೂಡಿದ, ಸತ್ಕರ್ಮಗಳನ್ನು ತ್ಯಾಗ ಮಾಡಿದ, ಇತರರ ನಿಂದೆಯನ್ನು ಕಥಾರೂಪದಿಂದ ಹೇಳುತ್ತಿದ್ದ ಪಾಪಿಗಳ ಸಹವಾಸ ಮಾಡಿದ್ದನು.

**ಮೂಢಾನೇತಾನ್ಮಹಾಶ್ಚರ್ಯಂ ವದಂತಿ ಬ್ರಹ್ಮವಾದಿನಃ ।**
**ಹಾಸಂ ಕರೋತ್ಯನುದಿನಂ ತೇಷಾಂ ದೋಷಮುದೀರಯನ್ ॥ ೫೧ ॥**

ಬ್ರಾಹ್ಮಣರು ಇದನ್ನು ನೋಡಿ "ಇದೇನಾಶ್ಚರ್ಯ"ವೆಂದರೆ ಕನಕನು ಅವರ ದೋಷಗಳನ್ನು ಎತ್ತಿ ಆಡುತ್ತಾ ಹಾಸ್ಯಮಾಡುತ್ತಿದ್ದನು.

**ಉತ್ಕ್ರೋಶನ್ನೇವ ವದತಿ ಸಭಾಮಧ್ಯೇ ದುರಾಗ್ರಹೀ ।**
**ನ ತೇಷಾಂ ಸಂಗತಿಃ ಕ್ವಾಪಿ ಪಾಪಘ್ನೀತ್ಯನುಕಾಂಕ್ಷತಿ ॥ ೫೨ ॥**

ಸಭೆಗಳಲ್ಲಿ ಆವೇಶದಿಂದ ಬ್ರಾಹ್ಮಣರನ್ನು ನಿಂದಿಸುತ್ತಿದ್ದನು. ಪಾಪಗಳನ್ನು ನಾಶಮಾಡತಕ್ಕ ಸಾಮರ್ಥ್ಯವುಳ್ಳ ಸಜ್ಜನರ ಸಹವಾಸವನ್ನು ಇಚ್ಛಿಸುತ್ತಿದ್ದಿಲ್ಲ.

**ತೇನ ದೋಷೇಣ ಪಾಪೀಯಾನ್ ಬ್ರಹ್ಮಕಲ್ಪತ್ರಯೇಽಪಿ ಚ ।**
**ನಾರಕೀಂ ಯಾತನಾಂ ಭುಕ್ತ್ವಾ ತಿರ್ಯಗ್ಯೋನಿಶತೇಷು ಚ ॥ ೫೩ ॥**

ಪಾಪಿಯಾದ ಈ ಕನಕನು ಈ ಬ್ರಾಹ್ಮಣ ನಿಂದೆಯೆಂಬ ದೋಷಕ್ಕಾಗಿ ಮೂರು ಬ್ರಹ್ಮಕಲ್ಪಗಳವರೆಗೆ ನರಕದಲ್ಲಿ ದುಃಖ ಅನುಭವಿಸಿ ನಂತರ ನೂರು ಯೋನಿಗಳಲ್ಲಿ ತಿರ್ಯಗ್‌ಪ್ರಾಣಿಯಾಗಿ ಹುಟ್ಟಿ ಅಲ್ಲಿಯೂ ದುಃಖವನ್ನು ಅನುಭವಿಸಿದನು.

**ಭೂತ್ವಾ ಪುನಶ್ಚ ಪಾಪೀಯಾನ್ ಮಾರ್ಕಟೀಂ ಯೋನಿಮಾಶ್ರಿತಃ ।**
**ಮಾಘೇ ತು ದೀಪದಾನೇನ ತಸ್ಮಿನ್ನೇವ ತು ಜನ್ಮನಿ ॥ ೫೪ ॥**
**ಜನ್ಮನ್ಯಸ್ಮಿನ್ ಕ್ಷಣಂ ಪ್ರಾಪ್ತಃ ಪೂರ್ವಜನ್ಮಸ್ಮೃತಿಂ ಹರೇಃ ।**
**ಶಾಖಾಶ್ರಯೇ ವಸನ್ ಪಾಪೀ ಶ್ರುತ್ವಾ ಚೇಮಾಂ ಕಥಾಂ ಶುಭಾಮ್ ॥ ೫೫ ॥**

ಪುನಃ ಕಪಿಯಾಗಿ ಹುಟ್ಟಿದನು. ಹಿಂದಿನ ಜನ್ಮದಲ್ಲಿ ಮಾಘಮಾಸದಲ್ಲಿ ಒಂದು ಸಲ ದೀಪದಾನಮಾಡಿದ್ದರಿಂದ ಈ ಕಪಿಯು ಜನ್ಮದಲ್ಲಿ ಒಂದು ಕ್ಷಣಕಾಲ ಪೂರ್ವಜನ್ಮದ ಸ್ಮರಣೆ ಬಂದಿತು. ಈ ಕೊಂಬೆಯ ಮೇಲೆ ಕುಳಿತು ಶ್ರೀಹರಿಯ ಕಥೆಯನ್ನು ಕೇಳಿತು.

**ಯೇ ಕುರ್ವಂತಿ ಕಥಾಕ್ಷೇಪಂ ವೃಥಾ ಪಂಡಿತಮಾನಿನಃ ।**
**ತಿರ್ಯಗ್ಯೋನಿಸಹಸ್ರೇಷು ಜಾಯಂತೇ ತೇ ನರಾ ಭುವಿ ॥ ೫೬ ॥**
**ಪ್ರಸಂಗಾನುಪ್ರಸಂಗೇನ ಪ್ರಸಂಗೋಽಯಂ ಸಮಾಗತಃ ।**
**ತದಿದಾನೀಂ ಹರಿಃ ಶ್ರುತ್ವಾ ಪಶ್ಚಾತ್ತಾಪಂ ಕ್ಷಣಂ ಯಯೌ ॥ ೫೭ ॥**

ಯಾರು ತಾವೇ ಪಂಡಿತರೆಂದು ತಿಳಿದುಕೊಂಡು ಭಗವಂತನ ಕಥಾಶ್ರವಣ ವನ್ನು ನಿಂದಿಸುವರೋ, ಅವರು ಒಂದು ಸಹಸ್ರ ಜನ್ಮಗಳಲ್ಲಿ ತಿರ್ಯಗ್ಯೋನಿಯಲ್ಲಿ ಹುಟ್ಟುತ್ತಾರೆ. ದೈವಯೋಗದಿಂದ ಆ ಕಪಿಗೆ ಈಗ ಕಥಾಶ್ರವಣಮಾಡುವ ಸುಯೋಗವು ಲಭಿಸಿತು ; ಕೇಳಿ ಹಿಂದಿನ ಜನ್ಮದ ಕರ್ಮಗಳ ಬಗ್ಯೆ ಒಂದು ಕ್ಷಣ ಹೊತ್ತು ಪಶ್ಚಾತ್ತಾಪ ಬಂದಿತು.

**ಪುನಶ್ಚ ಯೋನಿಜಾದ್ದೋಷಾಚ್ಚಾಂಚಲ್ಯೇನ ವಿದೂಷಿತಃ ।**
**ಪುಪ್ಲುವೇ ವಿಹಗಗ್ರಾಹೀ ತೇನ ಸಾಕಂ ಪಪಾತ ಚ ॥ ೫೮ ॥**
**ಪ್ರಾತರ್ಮಾಘೇ ಜಲೇ ದೈವಾನ್ನಿಮಜ್ಯ ಚ ಮೃತಿಂ ಗತಃ ।**
**ಜಾತಿಸ್ಮೃತ್ಯಾ ಕ್ಷಣಂ ಶ್ರುತ್ವಾ ವಾಚ್ಯಮಾನಾಂ ಹರೇಃ ಕಥಾಮ್ ॥ ೫೯ ॥**
**ಪ್ರಾತರ್ಮಾಘೇ ಜಲಸ್ಪರ್ಶಾತ್ ಮುಕ್ತೋಽಯಂ ದಿವಮಾಗತಃ ।**

ಪುನಃ ತನ್ನ ಕಪಿಜಾತಿಯ ಬುದ್ಧಿಚಾಂಚಲ್ಯದಿಂದ ಸಾರಸಪಕ್ಷಿಯುನ್ನು ಹಿಡಿಯಲು ಹಾರಿ ಅದರೊಡನೆ ಸರಯೂ ನದಿಯಲ್ಲಿ ಬಿದ್ದಿತು. ಮಾಘಮಾಸದ ಪ್ರಾತಃ ಕಾಲದಲ್ಲಿ ದೈವಯೋಗದಿಂದ ಹೀಗೆ ಮರಣಹೊಂದಿದ ಕಾರಣ, ಒಂದು ಕ್ಷಣ ಹಿಂದಿನ ಜನ್ಮದ ಸ್ಮರಣೆ ಬಂದು ಈಗ ಕಥಾಶ್ರವಣ ಮಾಡಿದ ಕಾರಣ, ಮಾಘದ ಪ್ರಾತಃಕಾಲದಲ್ಲಿ ಜಲಸ್ಪರ್ಶವಾದ ಕಾರಣ ಕಪಿಯು ಸ್ವರ್ಗಕ್ಕೆ ತೆರಳಿತು.

**ಕ್ಷತ್ರಬಂಧುಃ ಸಾರಸೋಽಯಂ ಸದಾ ಭೋಗೇಷು ಲೋಲುಪಃ ॥ ೬೦ ॥**
**ವೈಶಾಖೀ ಕಾರ್ತಿಕೀ ಮಾಘೀ ನ ಸ್ನಾತಾಽನೇನ ಲುಬ್ಧಕ ।**
**ಅಸ್ನಾತಾ ಅಪ್ಯದತ್ತಾಶ್ಚ ತಾ ಏತಾಸ್ತಿಥಯೋಽಮುನಾ ॥ ೬೧ ॥**

ಈ ಸಾರಸಪಕ್ಷಿಯು ಹಿಂದೆ ಕ್ಷತ್ರಿಯ, ಸದಾ ವಿಷಯಭೋಗಗಳಲ್ಲಿಯೇ ಆಸಕ್ತ. ವೈಶಾಖ, ಕಾರ್ತಿಕ, ಮಾಘಮಾಸಗಳಲ್ಲಿ ಸ್ನಾನ ಮಾಡುತ್ತಿರಲಿಲ್ಲ. ದಾನಧರ್ಮಾದಿಗಳನ್ನು ಮಾಡಲಿಲ್ಲ, ಉತ್ತಮ ತಿಥಿಗಳಲ್ಲಿಯಾದರೂ ಸ್ನಾನ ಮಾಡಲಿಲ್ಲ, ತರ್ಪಣಕೊಡಲಿಲ್ಲ.

**ಕಿಮುತಾನ್ಯಾಶ್ಚ ತಿಥಯೋ ನೀತಾ ಇತಿ ಚ ಕಿಂ ಬ್ರುವೇ ।**
**ಕದಾಚಿದಧ್ವನಿ ಶ್ರಾಂತಂ ಮಾಧವೇಮಾಸಿ ವೈ ದ್ವಿಜಮ್ ॥ ೬೨ ॥**
**ಬ್ರಹ್ಮಿಷ್ಠಂ ಭೋಜಯಾಮಾಸ ಪುಣ್ಯಸ್ಯಾಸ್ಯ ಪ್ರಭಾವತಃ ।**
**ಜಾತಿಸ್ಮರತ್ವಂ ದೇಹೇಽಸ್ಮಿಂಸ್ತಸ್ಮಾದ್ದೋಷಾತ್ ಕುಯೋನಿತಾ ॥ ೬೩ ॥**
**ಅಯಂ ಶುಶ್ರಾವ ಶಾಖಾಗ್ರೇ ಮಾಘಮಾಹಾತ್ಮ್ಯಮುತ್ತಮಮ್ ।**
**ನಿರ್ವೇದಂ ಕ್ಷಣಮಾಪೇದೇ ಪೂರ್ವಜನ್ಮಕೃತಂ ಸ್ಮರನ್ ॥ ೬೪ ॥**

*

ಇತರ ತಿಥಿಗಳಲ್ಲಿಯೂ ಏನೂ ಮಾಡಲಿಲ್ಲವೆಂದು ಬೇರೆ ಹೇಳಬೇಕೆ ? ಆದರೆ ಇವನು ವೈಶಾಖಮಾಸದಲ್ಲಿ ಒಂದು ದಿನ ಒಬ್ಬ ಶ್ರೇಷ್ಠನಾದ ಬ್ರಾಹ್ಮಣನಿಗೆ ಭೋಜನ ಮಾಡಿಸಿದನು. ಆ ಪುಣ್ಯಪ್ರಭಾವದಿಂದ ಈಗ ಕ್ಷಣಕಾಲ ಹಿಂದಿನ ಜನ್ಮದ ಸ್ಮರಣೆ ಬಂದಿತು ; ಹಿಂದಿನ ಜನ್ಮದ ದೋಷದ ಪ್ರಯುಕ್ತ ನೀಚಯೋನಿಯಲ್ಲಿ ಉತ್ಪನ್ನವಾಯಿತು. ಕೊಂಬೆಯಮೇಲೆ ಕುಳಿತು ಮಾಘಮಾಸ ಮಾಹಾತ್ಮ್ಯೆಯನ್ನು ಶ್ರವಣಮಾಡಿ ಒಂದು ಕ್ಷಣಕಾಲ ಹಿಂದಿನ ಜನ್ಮದ ತನ್ನ ಕರ್ಮಗಳಿಗೆ ಪಶ್ಚಾತ್ತಾಪ ಹೊಂದಿತು.

**ವಿಧಿನಾ ಮರ್ಕಟಗ್ರಸ್ತಃ ಪ್ರಾತರ್ಮಾಘೇ ಜಲೇ ಮೃತಃ ।**
**ಪಾಪಾನ್ಮುಕ್ತೋ ವಿಹಂಗೋಥ ಯಾನಾರೂಢೋ ದಿವಂ ಯಯೌ ॥೬೫॥**
**ಏತತ್ಸರ್ವಂ ಸಮಾಖ್ಯಾತಂ ಲುಬ್ಧ ಗಚ್ಛ ಯಥಾಸುಖಮ್ ।**
**ಶ್ರುತ್ವಾ ತದೀರಿತಂ ವ್ಯಾಧಃ ಪುನರ್ಗಾಲವಮಬ್ರವೀತ್ ॥ ೬೬ ॥**

ದೈವಯೋಗದಿಂದ ಕಪಿಯಿಂದ ಹಿಡಿಯಲ್ಪಟ್ಟು ನದಿಯಲ್ಲಿ ಬಿದ್ದ ಪಕ್ಷಿಯು, ಸರ್ವಪಾಪಗಳಿಂದ ಮುಕ್ತಿಯನ್ನು ಪಡೆದು, ಕಪಿಯ ಜೊತೆಯಲ್ಲಿ ವಿಮಾನದಲ್ಲಿ ಕುಳಿತು ಸ್ವರ್ಗಕ್ಕೆ ಹೋಯಿತು. ಮಾಘಮಾಸದಲ್ಲಿ ಪ್ರಾತಃಕಾಲದಲ್ಲಿ ನೀರಿನಲ್ಲಿ ಬಿದ್ದುದರ ಫಲವೇ ಇದು. ಬೇಡನೇ, ನೀನು ಕೇಳಿದ್ದಕ್ಕೆಲ್ಲ ಉತ್ತರ ನೀಡಿದ್ದೇನೆ. ಸುಖವಾಗಿ ಹೋಗು. ಇದನ್ನು ಕೇಳಿದ ಬೇಡನು ಪುನಃ ಗಾಲವರನ್ನು ಹೀಗೆ ಪ್ರಶ್ನಿಸಿದನು—

**ಲುಬ್ಧಕ ಉವಾಚ—**

**ಜನ್ಮಪ್ರಭೃತಿ ಪಾಪೀಯಾನ್ ಸದಾ ಹಿಂಸಾಪರಾಯಣಃ ।**
**ನ ಕಿಂಚಿದಪಿ ಜಾನೇऽಹಂ ಸುಕೃತಂ ನೈವ ದುಷ್ಕೃತಮ್ ॥ ೬೭ ॥**
**ಪಾಪಾಚಾರಸ್ಯ ಮೇ ಮುಕ್ತಿಃ ಕಥಂ ವಾ ಸ್ಯಾನ್ಮುನೀಶ್ವರ ।**
**ಕಿಯದ್ವಾ ವರ್ತತೇ ಚಾಯುಃ ಏತನ್ಮೇ ವದ ಸುವ್ರತ ॥ ೬೮ ॥**

ಲುಬ್ಧಕನು ಹೇಳಿದನು—

ಮುನಿಶ್ರೇಷ್ಠರೇ ! ಹುಟ್ಟಿದಾರಂಭದಿಂದ ನಾನು ಪಾಪಿ, ಸದಾ ಇತರರಿಗೆ ಹಿಂಸೆ ಕೊಡುತ್ತಿದ್ದೇನೆ, ಪುಣ್ಯ ಯಾವುದು, ಪಾಪ ಯಾವುದು ಎಂಬುದು ನನಗೆ ಗೊತ್ತಿಲ್ಲ ; ಇಂತಹ ಪಾಪಿಷ್ಠನಾದ ನನಗೆ ಪಾಪಗಳಿಂದ ಮುಕ್ತಿಯು ಹೇಗೆ? ನನಗೆ ಆಯುಸ್ಸು ಇನ್ನೂ ಎಷ್ಟು ? ದಯಮಾಡಿ ತಿಳಿಸಿರಿ.

**ಇತಿ ಲುಬ್ಧವಚಃ ಶ್ರುತ್ವಾ ಗಾಲವೋ ವಾಕ್ಯಮಬ್ರವೀತ್ ।**
**ಇದಾನೀಂ ಸರ್ಪದಷ್ಟೋऽಸಿ ನ ಜಾನಾಸ್ಯನ್ಯಚಿಂತಯಾ ॥ ೬೯ ॥**
**ತೇ ಮುಹೂರ್ತದ್ವಯಾದೂರ್ಧ್ವಂ ಮರಣಂ ಚ ಭವಿಷ್ಯತಿ ।**

ಬೇಡನ ಪ್ರಶ್ನೆಗೆ ಗಾಲವರು ಉತ್ತರ ಕೊಟ್ಟರು—ಈಗ ನಿನಗೆ ಹಾವು ಕಚ್ಚಿದೆ, ಬೇರೆ ಚಿಂತೆಯಿಂದ ಯುಕ್ತನಾದ ನಿನಗೆ ಏನೂ ತಿಳಿಯದು. ನಿನಗೆ ಇನ್ನು ಎರಡು ಮುಹೂರ್ತಗಳ ನಂತರ ಮರಣವಾಗುತ್ತದೆ.

**ಇದಾನೀಂ ಮಾಘಮಾಸಸ್ಯ ಪುಣ್ಯಾ ಶುಕ್ಲತ್ರಯೋದಶೀ ॥ ೭೦ ॥**
**ಕಾಲಶ್ಚ ಪ್ರಾತರೇವಾಯಂ ತಸ್ಮಾತ್ ಶೀಘ್ರಂ ನದೀಂ ವ್ರಜ ।**
**ಸಂಸ್ಮೃತ್ಯ ಮಾಧವಂ ದೇವಂ ಕುರು ಸ್ನಾನಂ ಯಥಾವಿಧಿ ॥ ೭೧ ॥**

ಈಗ ಮಾಘಮಾಸ, ಈ ದಿನ ಶುಕ್ಲ ತ್ರಯೋದಶೀ, ಪ್ರಾತಃಕಾಲವಾಗಿದೆ, ಶೀಘ್ರವಾಗಿ ಸರಯೂ ನದಿಗೆ ಹೋಗಿ ಪರಮಾತ್ಮನನ್ನು ಸ್ಮರಿಸಿ, ವಿಧಿಪೂರ್ವಕ ಸ್ನಾನಮಾಡು.

**ಪಶ್ಚಾತ್ ಮದೀರಿತಾಂ ಶ್ರುತ್ವಾ ಕಥಾಂ ವಿಷ್ಣೋರ್ಮಹಾತ್ಮನಃ ।**
**ಪುತ್ರಮಿತ್ರಕಲತ್ರಾದೌ ಮಮತಾಂ ತ್ಯಜ ಚೇತಸಾ ॥ ೭೨ ॥**
**ಹರೌ ಚಿತ್ತಂ ಸಮಾಧಾಯ ಭಕ್ತ್ಯಾ ತ್ಯಜ ಕಲೇವರಮ್ ।**
**ಮುಕ್ತಿಸ್ತೇ ಭವಿತಾ ನೂನಂ ಮಾಧವಶ್ಚ ಪ್ರಸೀದತಿ ॥ ೭೩ ॥**

ನಂತರ ನಾನು ಹೇಳುವ ಉತ್ತಮವಾದ ಶ್ರೀಹರಿಯ ಮಾಹಾತ್ಮ್ಯೆಯ ಕಥೆಯನ್ನು ಶ್ರವಣಮಾಡು; ಹೆಂಡತಿ-ಮಕ್ಕಳು-ಮಿತ್ರರಲ್ಲಿ ಮಮತಾ ಬುದ್ಧಿಯನ್ನು ಬಿಡು, ಮನಸ್ಸನ್ನು ಶ್ರೀಹರಿಯಲ್ಲಿಟ್ಟು, ಭಕ್ತಿಯಿಂದ ಅವನನ್ನು ಸ್ಮರಿಸಿ, ದೇಹವನ್ನು ಬಿಡು. ನಿನಗೆ ನಿಶ್ಚಯವಾಗಿಯೂ ಮುಕ್ತಿ ಸಿಗುತ್ತದೆ, ಶ್ರೀಹರಿಯ ಅನುಗ್ರಹವೂ ಲಭಿಸುತ್ತದೆ.

**ಇತಿ ತದ್ವಚನಂ ಶ್ರುತ್ವಾ ಗಾಲವಸ್ಯ ಮಹಾತ್ಮನಃ ।**
**ತತೋ ಹೃಷ್ಟಮನಾ ಭೂತ್ವಾ ಸ್ನಾತ್ವಾ ನದ್ಯಾಂ ಯಥಾವಿಧಿ ॥ ೭೪ ॥**
**ಮಾಧವೇ ಮನ ಆವೇಶ್ಯ ಗಾಲವೇ ಚ ಗುರೌ ತಥಾ ।**
**ಕಥಾಂ ತದೀರಿತಾಂ ಶ್ರುತ್ವಾ ನಾಕರೋತ್ ಬಾಹ್ಯಚಿಂತನಮ್ ॥ ೭೫ ॥**

ಮಹಾತ್ಮರಾದ ಗಾಲವರ ಮಾತನ್ನು ಕೇಳಿದ ಬೇಡನು ಸಂತೋಷದಿಂದ ಸರಯೂ ನದಿಯಲ್ಲಿ ಸ್ನಾನ ಮಾಡಿ, ಶ್ರೀಹರಿಯಲ್ಲಿಯೂ ಗುರುಗಳಾದ ಗಾಲವರಲ್ಲಿಯೂ ಮನಸ್ಸಿಟ್ಟು, ಗಾಲವರು ಹೇಳಿದ ಶ್ರೀಹರಿಯ ಕಥೆಯನ್ನು ಕೇಳುತ್ತಾ, ಬೇರೆ ಯಾವ ಚಿಂತೆಯನ್ನೂ ಮಾಡಲಿಲ್ಲ.

**ಜಹೌ ಕಲೇವರಂ ತೀರೇ ಕ್ರಮಾತ್ ಕಾಲ ಉಪಸ್ಥಿತೇ ।**
**ವಿಮಾನಂ ದಿವ್ಯಮಾರುಹ್ಯ ಜಗಾಮ ಹರಿಮಂದಿರಮ್ ॥ ೭೬ ॥**

ಮರಣಕಾಲವು ಬಂದಾಗ, ನದೀ ತೀರದಲ್ಲಿ ಶರೀರತ್ಯಾಗಮಾಡಿ, ವಿಮಾನದಲ್ಲಿ ಕುಳಿತು ಪರಮಾತ್ಮನ ಮಂದಿರಕ್ಕೆ ಹೊರಟುಹೋದನು.

**ಖಗೋ ಹರಿರ್ಲುಬ್ಧಕಶ್ಚ ದುರ್ಮೃತಾ ಅಪಿ ತೇ ತ್ರಯಃ ।**
**ಮಾಘಸ್ನಾನಸ್ಯ ಮಾಹಾತ್ಮ್ಯಾತ್ ಕಥಾಯಾಶ್ಚ ಮಧುದ್ವಿಷಃ ॥ ೭೭ ॥**
**ಪಶ್ಯತಾಮೇವ ಸರ್ವೇಷಾಂ ಯೋಗಿನಾಮಪಿ ದುರ್ಲಭಾಮ್ ॥**
**ಗತಿಮಾಪುರ್ಮಹಾತ್ಮಾನಃ ಕ್ಷಣೇನೈಕದಿನೇನ ಚ ॥ ೭೮ ॥**

ಪಕ್ಷಿ, ಕಪಿ ಮತ್ತು ಬೇಡರವನು ದುರ್ಮೃತ್ಯುವನ್ನು ಹೊಂದಿದರೂ ಸಹ ಮಾಘಸ್ನಾನದ ಮಾಹಾತ್ಮ್ಯೆಯಿಂದಲೂ, ಶ್ರೀಹರಿಯ ಕಥಾಶ್ರವಣಮಾಡಿದ ಕಾರಣದಿಂದಲೂ, ಎಲ್ಲ ಜನರೂ ನೋಡುತ್ತಿರುವಂತೆ, ಯೋಗಿಗಳಿಗೂ ದುರ್ಲಭವಾದ ಮುಕ್ತಿಯನ್ನು ಪಡೆದರು. ಒಂದೇ ದಿನ, ಒಂದೇ ಕ್ಷಣದಲ್ಲಿ ಅವನಿಗೆ ಸದ್ಗತಿ ದೊರಕಿತು.

**ಕುಟೀರಸ್ಥ ಜನಾಃ ಸರ್ವೇ ಗಾಲವಂ ಮುನಿಪುಂಗವಮ್ ।**
**ತುಷ್ಟುವುಃ ವಿವಿಧೈಃ ಸ್ತೋತ್ರೈಃ ವಿಸ್ಮಯೋತ್ಫುಲ್ಲಲೋಚನಾಃ ॥ ೭೯ ॥**
**ತಂ ಪ್ರತ್ಯೂಚುಃ ಮಹಾತ್ಮಾನಂ ಸಂತೋಷಾಕುಲಚೇತಸಃ ।**
**ಮಾಘಸ್ನಾನಪ್ರಭಾವಶ್ಚ ಕಥಾಯಾ ಅಪಿ ವೈ ಹರೇಃ ॥ ೮೦ ॥**
**ಪ್ರತ್ಯಕ್ಷೇಣೈವ ದೃಷ್ಟೋಽಭೂಚ್ಚಿತ್ರಂ ಚಿತ್ರಮಹೋ ಯತಃ ।**
**ಅಯಮರ್ಥಃ ಪುರಾಸ್ಮಾಕಂ ಶಾಸ್ತ್ರಗಮ್ಯೋಽಭವನ್ಮನೇ ॥ ೮೧ ॥**
**ಪ್ರತ್ಯಕ್ಷಮಭವನ್ನೂನಂ ಅಧುನಾ ಕೃಪಯಾ ತವ ।**
**ಸಮಾಗಮೋ ಹಿ ಮಹತಾಂ ಸದ್ಯಃ ಕ್ಷೇಮಾಯ ಕಲ್ಪತೇ ॥ ೮೨ ॥**

ಇದನ್ನೆಲ್ಲ ನೋಡುತ್ತಿದ್ದ ಕುಟೀರದಲ್ಲಿದ್ದ ಜನರು ಮಹಾತ್ಮರಾದ ಗಾಲವರನ್ನು ನಾನಾವಿಧವಾಗಿ ಸ್ತೋತ್ರಮಾಡಿದರು. ಆಶ್ಚರ್ಯಭರಿತವಾದ ಕಣ್ಣುಗಳುಳ್ಳ ಆ ಜನರು ಸಂತೋಷದಿಂದ ಗಾಲವರಿಗೆ ಹೇಳಿದರು—ಮಾಘಸ್ನಾನದ ಮಹಿಮೆಯನ್ನೂ, ಶ್ರೀಹರಿಯ ಕಥಾಶ್ರವಣದ ಮಹಿಮೆಯನ್ನೂ ಈ ದಿನ ಪ್ರತ್ಯಕ್ಷವಾಗಿಯೇ ನೋಡಿದೆವು. ಪರಮಾಶ್ಚರ್ಯವಾಗಿದೆ. ನಾವು ಹಿಂದೆ ಶಾಸ್ತ್ರಗಳಲ್ಲಿ ಓದಿ ತಿಳಿದುಕೊಂಡಿದ್ದು ಈಗ ಪ್ರತ್ಯಕ್ಷವಾಗಿ ನಿಜವಾಗಿ ಪರಿಣಮಿಸಿತು. ಇದಕ್ಕೆ ತಮ್ಮ ಕೃಪೆಯೇ ಕಾರಣ. ಸಜ್ಜನರ ಸಹವಾಸವು ಕೂಡಲೇ ಶುಭಫಲ ನೀಡುತ್ತದೆ.

**ಸರ್ವೇ ಧರ್ಮಾ ಮಹದ್ಭಿಶ್ಚ ಜ್ಞೇಯಾಃ ಸೂಕ್ಷ್ಮಾಃ ಸಹಸ್ರಶಃ ।**
**ತೇಽಪಿ ಶಾಸ್ತ್ರಕಥಾಲಾಪೈಃ ವ್ಯಕ್ತೀಕುರ್ವಂತಿ ಸಜ್ಜನಾಃ ॥ ೮೩ ॥**

ಸಮಸ್ತ ಧರ್ಮಗಳನ್ನೂ, ಅವುಗಳಲ್ಲಿರುವ ಸಹಸ್ರಾರು ಸೂಕ್ಷ್ಮಾಂಶಗಳನ್ನೂ ಮಹಾತ್ಮರಿಂದ ತಿಳಿದುಕೊಳ್ಳಬೇಕು. ಅವರಾದರೂ ಶಾಸ್ತ್ರದಲ್ಲಿರುವ ವಿಚಾರಗಳನ್ನು ಕಥೆಗಳ ರೂಪದಲ್ಲಿ ವಿವರಿಸುತ್ತಾರೆ.

**ಸೂಪದಿಷ್ಟಾಶ್ಚ ತೇ ಧರ್ಮಾ ಜನಾನ್ವೈ ಶುದ್ಧಚೇತಸಃ ।**
**ಪುನಂತಿ ನಾತ್ರ ಸಂದೇಹೋ ನ ಪುನಂತಿ ದುರಾಗ್ರಹಾನ್ ॥ ೭೪ ॥**

**ಅಪಿ ತು ಶ್ರೋತುಮಿಚ್ಛಾಮೋ ಮಾಘಮಾಹಾತ್ಮ್ಯಮುತ್ತಮಮ್ ।**
**ಯದ್ಯದಸ್ತಿ ವಿಶೇಷೋಽತ್ರ ತದ್ವದಸ್ವ ದಯಾನಿಧೇ ॥ ೭೫ ॥**

ನಿಮ್ಮಿಂದ ಉಪದೇಶ ಮಾಡಲ್ಪಟ್ಟ ಧರ್ಮಗಳು ಶುದ್ಧಾಂತಃಕರಣರನ್ನು ಪಾವನಗೊಳಿಸುತ್ತವೆ, ದುಷ್ಟಬುದ್ಧಿಯುಳ್ಳವರನ್ನು ಪಾವನಗೊಳಿಸುವುದಿಲ್ಲ ವೆಂಬುದರಲ್ಲಿ ಸಂದೇಹವಿಲ್ಲ. ದಯಾಪರರಾದ ಗಾಲವರೇ, ಈ ಮಾಘಮಾಸದ ಮಾಹಾತ್ಮ್ಯೆಯ ಇನ್ನೂ ವಿಶೇಷಾಂಶಗಳನ್ನು ತಿಳಿಯಲು ಇಚ್ಛಿಸುತ್ತೇವೆ, ದಯಮಾಡಿ ಹೇಳಿ—

**ನಾನೇನ ಸದೃಶೋ ಧರ್ಮೋ ನಾನೇನ ಸದೃಶಂ ತಪಃ ।**
**ನಾನೇನ ಸದೃಶೋ ಯಜ್ಞ ಇತಿ ಮೇ ಭಾತಿ ಸತ್ತಮ ॥ ೭೬ ॥**

ಇದಕ್ಕೆ ಸದೃಶವಾದ ಬೇರೊಂದು ಧರ್ಮವಿಲ್ಲ, ತಪಸ್ಸಿಲ್ಲ, ಯಜ್ಞವಿಲ್ಲ— ಹೀಗೆಂಬುದು ನಮ್ಮ ಅಭಿಪ್ರಾಯ.

**ಬಹುಶಃ ಶೃಣ್ವತಾಂ ಚಾಪಿ ತೃಪ್ತಿರ್ನಾದ್ಯಾಪಿ ವಿದ್ಯತೇ ।**
**ಕೋ ನು ತೃಪ್ಯೇತ ಭಗವನ್ ಕಥಾಲಾಪಾಮೃತಂ ಪಿಬನ್ ॥ ೭೭ ॥**

ಎಷ್ಟೋ ಬಾರಿ ಕೇಳಿದ್ದರೂ ನಮಗೆ ತೃಪ್ತಿಯಾಗಿಲ್ಲ. ಭಗವಂತನ ಕಥೆಗಳನ್ನು ಶ್ರವಣಮಾಡಿ, ತೃಪ್ತಿಪಡೆದಿರುವವರು ಯಾರಿದ್ದಾರೆ ?

**ಮನಾಂಸಿ ಚ ಪ್ರಸನ್ನಾನಿ ಪಾಪಾನ್ಯಪಿ ಗತಾನಿ ಚ ।**
**ಗಾಲವಸ್ಯ ಮುನೇಃ ಸಂಗಾತ್ ಸಂಶಯಾನಪಿ ಛೇದಿತಾ ॥ ೭೮ ॥**

**ಶುಶ್ರೂಷೂಣಾಂ ಚ ಶಿಷ್ಯಾನಾಂ ವದ ವಿಷ್ಣೋಃ ಕಥಾಂ ಶುಭಾಮ್ ॥ ೭೯ ॥**

ನಮ್ಮ ಮನಸ್ಸೆಲ್ಲ ಹರ್ಷಗೊಂಡಿವೆ, ನಮ್ಮ ಪಾಪಗಳೆಲ್ಲ ನಾಶವಾಗಿವೆ, ಮಹಾತ್ಮರಾದ ಗಾಲವರ ಸಂಗದಿಂದ ನಮ್ಮ ಸಂದೇಹಗಳೆಲ್ಲ ನಿವಾರಣೆಯಾಗಿವೆ. ತಮ್ಮ ಸೇವೆಯಲ್ಲಿ ನಿರತರಾಗಿರುವ, ನಿಮ್ಮ ಶಿಷ್ಯರಾದ ನಮಗೆ, ಶ್ರೀಹರಿಯ ಶುಭಕರವಾದ ಕಥೆಯನ್ನು ಹೇಳಿರಿ.

**ಇತಿ ಶ್ರೀ ವಾಯುಪುರಾಣೇ ಮಾಘಮಾಸಮಾಹಾತ್ಮ್ಯೇ ಚತುರ್ವಿಂಶೋಽಧ್ಯಾಯಃ**

ಶ್ರೀ ವಾಯುಪುರಾಣಾಂತರ್ಗತ ಮಾಘಮಾಸ ಮಾಹಾತ್ಮ್ಯೆಯಲ್ಲಿ
ಇಪ್ಪತ್ತನಾಲ್ಕನೇ ಅಧ್ಯಾಯವು ಸಮಾಪ್ತಿಯಾಯಿತು.

**ಗಾಲವ ಉವಾಚ—**

**ಯಃ ಸ್ನಾತಿ ಮಾಘಪ್ರೀತ್ಯೈ ಪ್ರಾತರ್ಮಾಘೇ ಬಹಿರ್ಜಲಂ ।**
**ಸಂಪೂಜ್ಯ ಮಾಲತೀಪುಷ್ಪೈಃ ವಿಷ್ಣುಲೋಕಮವಾಪ್ನುಯಾತ್ ॥ ೧ ॥**
**ಗೀತಾಪಾಠಂ ತು ಯಃ ಕುರ್ಯಾತ್ ಬಹಿರ್ಮಾಘೇ ಜಲಾಪ್ಲುತಃ ।**
**ತಸ್ಯ ಪುಣ್ಯಫಲಂ ವಕ್ತುಂ ವಿಷ್ಣುನಾಪಿ ನ ಶಕ್ಯತೇ ॥ ೨ ॥**

ಗಾಲವರು ನುಡಿದರು :

ಮಾಘಮಾಸದಲ್ಲಿ ಪ್ರಾತಃಕಾಲದಲ್ಲಿ ಸರೋವರ, ನದಿ, ಕೆರೆ ಮುಂತಾದ ಬಹಿರ್ಜಲದಲ್ಲಿ ಸ್ನಾನಮಾಡಿ, ಶ್ರೀಹರಿಯ ಪ್ರೀತ್ಯರ್ಥವಾಗಿ ಮಾಲತೀಪುಷ್ಪಗಳಿಂದ ಪೂಜಿಸಿದರೆ ಅಂತಹವನು ವಿಷ್ಣುಲೋಕಕ್ಕೆ ಹೋಗುವನು. ಹೀಗೆ ಸ್ನಾನಮಾಡಿ ಯಾರು ಗೀತಾಪಾರಾಯಣ ಮಾಡುವರೋ ಅಂತಹವರ ಪುಣ್ಯವನ್ನು ವರ್ಣಿಸಲು ಸ್ವಯಂ ವಿಷ್ಣುವಿಗೂ ಸಾಧ್ಯವಿಲ್ಲ.

**ವಿಭೂತಿಂ ವಿಶ್ವರೂಪಂ ಚ ಯಶ್ಚಾಧ್ಯಾಯದ್ವಯಂ ಪಠೇತ್ ।**
**ತಸ್ಯ ಪುಣ್ಯಸ್ಯ ವಿಸ್ತಾರಂ ವದತೋ ಮೇ ನಿಶಾಮಯ ॥ ೩ ॥**

ಗೀತೆಯಲ್ಲಿ ವಿಭೂತಿರೂಪಾಧ್ಯಾಯ, ಹಾಗೂ ವಿಶ್ವರೂಪದ ಅಧ್ಯಾಯಗಳನ್ನು (ಹತ್ತು ಮತ್ತು ಹನ್ನೊಂದನೆಯ ಅಧ್ಯಾಯಗಳು) ಪಾರಾಯಣ ಮಾಡಿದರೆ ಬರುವ ಪುಣ್ಯದ ಪರಿಮಿತಿಯನ್ನು ಹೇಳುತ್ತೇನೆ, ಕೇಳು.

**ವಿಭೂತಿವಿಶ್ವರೂಪೋತ್ಥಂ ಯಃ ಪಾದಂ ಪಠತೇ ನರಃ ।**
**ಮಾಘೇ ಪಾಪವಿನಿರ್ಮುಕ್ತೋ ದಿವಿ ದೇವೈಶ್ಚ ಗೀಯತೇ ॥ ೪ ॥**

ಮಾಘಮಾಸದಲ್ಲಿ ಈ ಅಧ್ಯಾಯಗಳಲ್ಲಿನ ಒಂದು ಶ್ಲೋಕದ ಒಂದು ಪಾದ (ಕಾಲುಭಾಗ)ವನ್ನು ಪಾರಾಯಣಮಾಡಿದರೂ ಸಹ ಅವನ ಪಾಪಗಳೆಲ್ಲ ನಾಶ ವಾಗುತ್ತವೆ; ಮತ್ತು ಅವನು ಸ್ವರ್ಗದಲ್ಲಿ ದೇವತೆಗಳಿಂದ ಹೊಗಳಿಸಿಕೊಳ್ಳ ಲ್ಪಡುತ್ತಾನೆ.

**ಶ್ಲೋಕಾರ್ಧಂ ಪಠತೇ ಯಸ್ತು ಮಾಘೇ ಮಾಸಿ ಜಲಾಪ್ಲುತಃ ।**
**ಸ ಸರ್ವಕುಲಮುದ್ಧೃತ್ಯ ಸ್ವರ್ಗಲೋಕೇ ಮಹೀಯತೇ ॥ ೫ ॥**

ಮಾಘಮಾಸದಲ್ಲಿ ಸ್ನಾನಮಾಡಿ ಈ ಅಧ್ಯಾಯಗಳಲ್ಲಿರುವ ಶ್ಲೋಕಗಳಲ್ಲಿ ಒಂದು ಶ್ಲೋಕದ ಅರ್ಧವನ್ನು ಪಾರಾಯಣ ಮಾಡಿದರೆ ಅವನು ಸಮಸ್ತಕುಲ ಗಳನ್ನೂ ಪಾವನಗೊಳಿಸಿ ತಾನು ಸ್ವರ್ಗಲೋಕದಲ್ಲಿ ಸಂತೋಷದಿಂದ ಇರುತ್ತಾನೆ.

**ಪ್ರಾತಃ ಸ್ನಾತ್ವಾ ಶುಚಿರ್ಭೂತ್ವಾ ಯಃ ಶ್ಲೋಕಂ ಪಠತೇ ನರಃ ।**
**ಸ ಚೈಕವಿಂಶತಿಕುಲೈಃ ಸತ್ಯಲೋಕಮವಾಪ್ನುಯಾತ್ ॥ ೬ ॥**

ಪ್ರಾತಃಕಾಲದಲ್ಲಿ ಸ್ನಾನಮಾಡಿ, ಶುಚಿಯಾಗಿ, ಒಂದು ಶ್ಲೋಕವನ್ನು ಪಠಿಸುವುದರಿಂದ ಇಪ್ಪತ್ತೊಂದು ಕುಲಗಳೊಡನೆ ಸತ್ಯಲೋಕದಲ್ಲಿ ಸುಖವಾಗಿರುವನು.

**ಮಾಘೇ ಸ್ನಾತ್ವಾ ತು ಯಃ ಕುರ್ಯಾತ್ ಪಾಠಂ ಶ್ಲೋಕದ್ವಯಸ್ಯ ತು ।**
**ಏಕೇನ ಪಾಪನಾಶಃ ಸ್ಯಾತ್ ದ್ವಿತೀಯಾನ್ಮೋಕ್ಷಮಾಪ್ನುಯಾತ್ ॥ ೭ ॥**

ಮಾಘಮಾಸದಲ್ಲಿ ಸ್ನಾನಮಾಡಿ ಎರಡು ಶ್ಲೋಕಗಳನ್ನು ಪಾರಾಯಣ ಮಾಡಿದರೆ, ಒಂದರಿಂದ ಪಾಪಗಳೆಲ್ಲ ನಾಶವಾಗಿ ಎರಡನೆಯದರಿಂದ ಮೋಕ್ಷ ಲಭಿಸುತ್ತದೆ.

**ಮಾಘೇ ಸ್ನಾತ್ವಾ ಹರಿಂ ಪೂಜ್ಯ ಯಸ್ತು ಶ್ಲೋಕತ್ರಯಂ ಪಠೇತ್ ।**
**ಏಕಸ್ಮಾತ್ ಸಂಸೃತೇರ್ನಾಶಃ ಸಾಯುಜ್ಯಂ ಚ ದ್ವಿತೀಯತಃ ॥ ೮ ॥**
**ಮುಕ್ತಿಂ ದದಾತಿ ವೈ ವಿಷ್ಣುಃ ಖುಣೀ ಶೇಷೇಣ ಮಾಧವಃ ।**

ಮಾಘಮಾಸದಲ್ಲಿ ಸ್ನಾನಮಾಡಿ ಹರಿಯನ್ನು ಪೂಜಿಸಿ, ಗೀತೆಯಲ್ಲಿ ಮೂರು ಶ್ಲೋಕಗಳನ್ನು ಪಠಿಸಿದರೆ ಒಂದರಿಂದ ಸಂಸಾರನಾಶವಾಗುತ್ತದೆ, ಎರಡನೆಯದರಿಂದ ಸಾಯುಜ್ಯ ಪ್ರಾಪ್ತಿ, ಮೂರನೆಯದರಿಂದ ಶ್ರೀಹರಿಯು ಋಣಿಯಾಗಿ ಮುಕ್ತಿಯನ್ನು ಕೊಡುತ್ತಾನೆ.

**ಮಾಘೇ ಚಾಧ್ಯಾಯಪಠನೇ ಕೃತೇ ಸ್ನಾತೇನ ಚೋಷಸಿ ॥ ೯ ॥**
**ತಸ್ಯ ಪುಣ್ಯಫಲಂ ವಕ್ತುಂ ನಾಲಂ ವರ್ಷಶತೈರಪಿ ।**
**ಯಶ್ಚಾಧ್ಯಾಯದ್ವಯಂ ನಿತ್ಯಂ ಪ್ರಾತಃ ಸ್ನಾತ್ವಾ ತು ಯಃ ಪಠೇತ್ ॥೧೦॥**
**ಬ್ರಹ್ಮಾದ್ಯೈರಪಿ ದೇವೈಶ್ಚ ವಿಷ್ಣುನಾ ಶಂಭುನಾ ತಥಾ ।**
**ನ ಶಕ್ಯತೇ ಫಲಂ ವಕ್ತುಮರ್ಹಂ ಕಲ್ಪಶತೈರಪಿ ॥ ೧೧ ॥**

ಮಾಘಸ್ನಾನ ಮಾಡಿ ಒಂದು ಅಧ್ಯಾಯ ಪಾರಾಯಣಮಾಡಿದರೆ ಬರುವ ಪುಣ್ಯಫಲವನ್ನು ಹೇಳಲು ನೂರು ವರ್ಷಗಳಾದರೂ ಸಾಧ್ಯವಿಲ್ಲ. ಎರಡು ಅಧ್ಯಾಯಗಳನ್ನು ಪಠಿಸಿದರೆ ಬರುವ ಫಲವನ್ನು ವರ್ಣಿಸಲು ಬ್ರಹ್ಮಾದಿದೇವತೆಗಳೂ, ರುದ್ರದೇವರೂ, ಸಾಕ್ಷಾತ್ ವಿಷ್ಣುವೂ ಸಹ ನೂರು ಕಲ್ಪಗಳಲ್ಲಿಯೂ ಶಕ್ತರಲ್ಲ.

**ಮಾಘಸ್ನಾನಂ ಹರೇಃ ಪೂಜಾ ಗೀತಾಪಾಠಸ್ತ್ರಯಂ ಯದಿ ।**
**ಏಕಸ್ಮಿನ್ ದಿವಸೇ ಯಸ್ಯ ಮುಕ್ತಿಸ್ತಸ್ಯ ಕರೇ ಸ್ಥಿತಾ ॥ ೧೨ ॥**

ಮಾಘಸ್ನಾನ, ಶ್ರೀಹರಿಯ ಪೂಜೆ, ಗೀತಾಪಾರಾಯಣ—ಈ ಮೂರನ್ನೂ ಒಂದು ದಿನದಲ್ಲಿ ಮಾಡಿದರೆ ಅವನಿಗೆ ಮೋಕ್ಷವೆಂಬುದು ಕರಗತವಾಗುತ್ತದೆ.

**ಸ್ನಾತ್ವಾ ತು ಮೃದಮಾಲಿಪ್ಯ ಪ್ರಾತರ್ಮಾಘೇ ಬಹಿರ್ಜಲೇ ।**
**ಸಹಸ್ರನಾಮಭಿಃ ಪೂಜ್ಯ ಕೃತಕೃತ್ಯೋ ಭವೇನ್ನರಃ ॥ ೧೩ ॥**
**ಸಹಸ್ರನಾಮಪಠನಂ ಪೂಜಾಕಾಲೇ ತು ಯಃ ಪಠೇತ್ ।**
**ತದ್ವಂಶ್ಯಾನಾಂ ಭವೇನ್ಮುಕ್ತಿಃ ಕಿಮು ತಸ್ಯ ಮಹಾತ್ಮನಃ ॥ ೧೪ ॥**

ಮಾಘಮಾಸದಲ್ಲಿ ಪ್ರಾತಃಕಾಲದಲ್ಲಿ ಮೃತ್ತಿಕೆಯನ್ನು ಮೈಗೆ ಹಚ್ಚಿಕೊಂಡು, ಬಹಿರ್ಜಲದಲ್ಲಿ ಸ್ನಾನಮಾಡಿ, ಸಹಸ್ರನಾಮಗಳಿಂದ ಪೂಜಿಸಲು ಅವನು ಕೃತಕೃತ್ಯನಾಗುವನು. ಪೂಜೆಯ ಸಮಯದಲ್ಲಿ ಸಹಸ್ರನಾಮಗಳನ್ನು ಉಚ್ಚರಿಸುವುದರಿಂದ ಅವನ ವಂಶದವರಿಗೆಲ್ಲ ಮುಕ್ತಿ ದೊರೆಯುತ್ತದೆ ಎಂದಮೇಲೆ ಅವನಿಗೆ ಮುಕ್ತಿ ದೊರೆಯುವುದೆಂದು ಪ್ರತ್ಯೇಕ ಹೇಳಬೇಕಾಗಿಲ್ಲ.

**ನಾಮ್ನಾ ಚೈಕೇನ ವಾ ಯಸ್ತು ಪೂಜಯೇತ್ ಮಧುಸೂದನಮ್ ।**
**ಕೋಟಿಸಂವತ್ಸರಂ ವಿಷ್ಣುಃ ಪೂಜಿತಸ್ತೇನ ನಿಶ್ಚಯಃ ॥ ೧೫ ॥**

ಮಧುಸೂದನನನ್ನು ಕೇವಲ ಒಂದೇ ನಾಮದಿಂದ ಪೂಜಿಸಿದರೂ ಒಂದು ಕೋಟಿ ಸಂವತ್ಸರಗಳ ಕಾಲ ಪೂಜಿಸಿದಂತೆ ಎಂಬುದು ನಿಶ್ಚಯ.

**ಯೋ ವಾ ನಾಮ್ನಾಂ ಸಹಸ್ರೇಣ ಸ್ತೋತುಮಿಚ್ಛತಿ ಮಾಧವಮ್ ।**
**ತಾವತಾ ತೇನ ವೈ ಪುಂಸಾಂ ಸ್ತುತ ಏವ ನ ಸಂಶಯಃ ॥ ೧೬ ॥**

ಯಾರು ಆ ಲಕ್ಷ್ಮೀವಲ್ಲಭನನ್ನು ಸಹಸ್ರನಾಮಗಳಿಂದ ಪೂಜಿಸುವ ಇಚ್ಛೆಯನ್ನು ಹೊಂದಿರುತ್ತಾನೆಯೋ, ಆ ಇಚ್ಛಾಮಾತ್ರದಿಂದಲೇ ಸ್ತೋತ್ರಮಾಡಿದಂತೆಯೇ ಆಗುತ್ತದೆ, ಸಂಶಯವಿಲ್ಲ.

**ಏಕಂ ಶ್ಲೋಕಂ ಪಠೇದ್ಯಸ್ತು ನಿತ್ಯಂ ಭಾಗವತೋದ್ಭವಮ್ ।**
**ತಸ್ಯ ಪುಣ್ಯಫಲಂ ವಕ್ತುಂ ಕಃ ಶಕ್ತೋ ದಿವಿ ವಾ ಭುವಿ ॥ ೧೭ ॥**

ಯಾರು ನಿತ್ಯದಲ್ಲಿಯೂ ಭಾಗವತದ ಒಂದು ಶ್ಲೋಕವನ್ನು ಉಚ್ಚರಿಸಿದರೆ ಅವನ ಪುಣ್ಯಫಲವನ್ನು ವರ್ಣಿಸಲು ದೇವಲೋಕದಲ್ಲಿಯಾಗಲೀ, ಭೂಲೋಕದಲ್ಲಿಯಾಗಲೀ ಯಾರಿದ್ದಾರೆ ?

**ಪೂಜಯೇನ್ಮಾಧವಂ ದೇವಂ ಪ್ರಾತರ್ಮಾಘೇ ಜಲಾಪ್ಲುತಃ ।**
**ಪಠೇನ್ ಭಾಗವತಂ ಶಾಸ್ತ್ರಂ ಮುಕ್ತಿಮೇತಿ ನ ಸಂಶಯಃ ॥ ೧೮ ॥**

ಮಾಘಮಾಸದಲ್ಲಿ ಪ್ರಾತಃಕಾಲ ಸ್ನಾನಮಾಡಿ, ಶ್ರೀ ಮಾಧವನನ್ನು ಪೂಜಿಸಿ, ಭಾಗವತ ಶಾಸ್ತ್ರವನ್ನು ಪಾರಾಯಣ ಮಾಡಿದರೆ ಮುಕ್ತಿ ದೊರಕುವುದರಲ್ಲಿ ಸಂದೇಹವಿಲ್ಲ.

**ಗಜೇಂದ್ರಸ್ತೋತ್ರಪಠನಂ ಕುರ್ಯಾನ್ಮಾಘೇ ಜಲಾಪ್ಲುತಃ ।**
**ತಸ್ಯ ವಿಷ್ಣುಃ ಸ್ವಯಂ ಪ್ರೀಣನ್ ದದಾತೀಷ್ಟಾನ್ಮನೋರಥಾನ್ ॥ ೧೯ ॥**

ಮಾಘಮಾಸದಲ್ಲಿ ಸ್ನಾನಮಾಡಿ "ಗಜೇಂದ್ರಮೋಕ್ಷಸ್ತೋತ್ರ"ವನ್ನು ಪಠಿಸಿದರೆ ಶ್ರೀಹರಿಯು ಪ್ರೀತನಾಗಿ ಇಷ್ಟಾರ್ಥಗಳನ್ನೆಲ್ಲ ನೀಡುತ್ತಾನೆ.

**ಶ್ಲೋಕಾರ್ಧಂ ಶ್ಲೋಕಪಾದಂ ವಾ ನಿತ್ಯಂ ಭಾಗವತೋದ್ಭವಮ್ ।**
**ಯಃ ಪಠೇತ್ ಪ್ರಾತರುತ್ಥಾಯ ಸ ಜೀವನ್ನೇವ ಮುಕ್ತಿಗಃ ॥ ೨೦ ॥**

ಪ್ರಾತಃಕಾಲದಲ್ಲಿ ಸ್ನಾನಮಾಡಿ ನಿತ್ಯವೂ ಭಾಗವತದ ಅರ್ಧಶ್ಲೋಕವನ್ನಾಗಲೀ ಅಥವಾ ಒಂದು ಪಾದವನ್ನಾಗಲೀ (ಕಾಲುಭಾಗ) ಪಠಿಸಿದರೆ ಅಂತಹವನು ಬದುಕಿದ್ದರೂ ಮುಕ್ತಿಗೆ ಹೋದಂತೆಯೇ.

**ಯದ್ಗೇಹೇ ಲಿಖಿತಂ ಶಾಸ್ತ್ರಂ ಪುಣ್ಯಂ ಭಾಗವತಂ ಶುಭಮ್ ।**
**ವರ್ತತೇ ತದ್ಗೃಹಂ ಪುಣ್ಯಂ ಸರ್ವಕ್ಷೇತ್ರಾಧಿಕಂ ಮತಮ್ ॥ ೨೧ ॥**

ಯಾರ ಮನೆಯಲ್ಲಿ ಹಸ್ತಲಿಖಿತ ಭಾಗವತಗ್ರಂಥವಿರುವುದೋ ಅಂತಹ ಮನೆಯು ಸಕಲ ಪುಣ್ಯಕ್ಷೇತ್ರಗಳಿಗಿಂತ ಉತ್ತಮ.

**ಯಃ ಪ್ರಾಕ್ ಸೂರ್ಯೋದಯಾತ್ ಸ್ನಾತ್ವಾ ಕೃತ್ವಾ ಮಾಧವಪೂಜನಂ ।**
**ಮಾಧವಸ್ತವರಾಜೇನ ಯದಿ ಸ್ತೌತಿ ಹರಿಂ ಸಕೃತ್ ॥ ೨೨ ॥**
**ನಿರ್ಧೂಯ ಸರ್ವಪಾಪಾನಿ ಕುಲಾನ್ ಉದ್ಧೃತ್ಯ ಸರ್ವಶಃ ।**
**ಸವಿತುರ್ಮಂಡಲಂ ಭಿತ್ವಾ ವಿಷ್ಣೋಃ ಸಾಯುಜ್ಯಮಾಪ್ನುಯಾತ್ ॥ ೨೩ ॥**

ಸೂರ್ಯೋದಯಕ್ಕಿಂತ ಮುಂಚೆ ಸ್ನಾನಮಾಡಿ, ಶ್ರೀ ಮಾಧವನನ್ನು ಪೂಜಿಸಿ, "ಮಾಧವಸ್ತವರಾಜ"ದಿಂದ ಶ್ರೀಹರಿಯನ್ನು ಸ್ತೋತ್ರಮಾಡುವವನು, ತನ್ನ ಸಮಸ್ತ ಪಾಪಗಳನ್ನೂ ಕಳೆದುಕೊಂಡು, ತನ್ನ ಸರ್ವಕುಲಗಳನ್ನೂ ಉದ್ಧರಿಸಿ, ಸೂರ್ಯಮಂಡಲವನ್ನು ಭೇದಿಸಿಕೊಂಡು, ವಿಷ್ಣುವಿನ ಸಾಯುಜ್ಯಮೋಕ್ಷ ಪಡೆಯುವನು.

**ಮಾಧವಸ್ತವರಾಜಂ ತು ಮಾಘೇ ನಿತ್ಯಂ ಪಠೇನ್ನರಃ ।**
**ತೇನೇಷ್ಟಂ ತೇನ ದತ್ತಂ ಚ ತೇನ ಸರ್ವಮನುಷ್ಠಿತಮ್ ॥ ೨೪ ॥**

**ವಿಷ್ಣೋರ್ನಾಮಸಹಸ್ರಸ್ಯ ತ್ರಿರಾವೃತ್ತ್ಯಾ ತು ಯತ್ಫಲಮ್ ।**
**ತತ್ಫಲಂ ಸಮವಾಪ್ನೋತಿ ಮಾಧವಸ್ತವರಾಜತಃ ॥ ೨೫ ॥**

ಮಾಘ ಮಾಸದಲ್ಲಿ ನಿತ್ಯವೂ ಮಾಧವಸ್ತವರಾಜವನ್ನು ಪಠಿಸುವುದರಿಂದ ಎಲ್ಲ ಸತ್ಕರ್ಮಗಳನ್ನು ಅನುಷ್ಠಾನಮಾಡಿದಂತೆಯೇ, ಎಲ್ಲ ದಾನಗಳನ್ನೂ ಕೊಟ್ಟಂತೆಯೇ. ವಿಷ್ಣುಸಹಸ್ರನಾಮ ಸ್ತೋತ್ರವನ್ನು ಮೂರು ಬಾರಿ ಪಠಿಸಿದರೆ ಎಷ್ಟು ಪುಣ್ಯ ಬರುವುದೋ ಅಷ್ಟು ಪುಣ್ಯವು ಮಾಧವಸ್ತವರಾಜವನ್ನು ಒಂದೇ ಸಲ ಪಠಿಸುವುದರಿಂದ ದೊರಕುವುದು.

**ಕುಟೀರಸ್ಥಾ ಊಚುಃ—**

**ಸ್ತೋತ್ರಮೇತತ್ ಮಹಾಪುಣ್ಯಂ ಯತ್ತ್ವಯೋಕ್ತಂ ದ್ವಿಜೋತ್ತಮ ।**
**ಮಾಧವಸ್ತವರಾಜಂ ತು ಶ್ರೋತುಮಿಚ್ಛಾಮಹೇ ವಯಮ್ ॥ ೨೬ ॥**
**ಕಿಂ ಫಲಂ ತಸ್ಯ ಪಠನೇ ಕೇನ ಲೋಕೇ ಪ್ರಕಾಶಿತಮ್ ।**
**ಏತದ್ಬ್ರಹ್ಮನ್ ವದಾಸ್ಮಾಕಂ ಪರಂ ಕೌತೂಹಲಂ ಹಿ ನಃ ॥**

ಕುಟೀರವಾಸಿಗಳು ನುಡಿದರು—

ನೀವು ಈಗ ತಿಳಿಸಿದ ಶ್ರೇಷ್ಠವಾದ, ಮಹಾಪುಣ್ಯಕರವಾದ "ಮಾಧವಸ್ತವ ರಾಜ"ವೆಂಬ ಸ್ತೋತ್ರವನ್ನು ಕೇಳಲು ಇಚ್ಛಿಸುತ್ತೇವೆ. ಅದರ ಪಠನದಿಂದ ಏನು ಫಲ, ಲೋಕದಲ್ಲಿ ಅದನ್ನು ಪ್ರಕಟಿಸಿದವರು ಯಾರು ಮುಂತಾದ ವಿಚಾರಗಳನ್ನು ತಿಳಿದುಕೊಳ್ಳಲು ಕುತೂಹಲಿಗಳಾಗಿದ್ದೇವೆ, ದಯಮಾಡಿ ತಿಳಿಸಿರಿ—

**ಗಾಲವ ಉವಾಚ—**

**ಪಾದೌ ಪ್ರಕ್ಷಾಲ್ಯ ಚಾಚಮ್ಯ ಕೃತನ್ಯಾಸಃ ಕೃತಾಸನಃ ॥ ೨೭ ॥**
**ಸ್ತೋತ್ರಮೇತತ್ ಪಠೇನ್ನಿತ್ಯಂ ಮಾಘೇ ಮಾಸಿ ವಿಶೇಷತಃ ।**
**ಆದೌ ನತ್ವಾ ಗುರೂನ್ ಸರ್ವಾನ್ ಪಶ್ಚಾದ್ವಾಮೇ ಚ ಪಾರ್ಶ್ವಕೇ ॥ ೨೮ ॥**
**ಪಾಪಂ ಚ ಪುರುಷಂ ಧ್ಯಾಯೇತ್ ಸ್ಪೃಷ್ಟ್ವಾ ದಕ್ಷಿಣಹಸ್ತತಃ ।**
**ಬ್ರಹ್ಮಹತ್ಯಾಶಿರಸ್ಕಂ ಚ ಸ್ವರ್ಣಸ್ತೇಯಭುಜದ್ವಯಮ್ ॥ ೨೯ ॥**
**ಸುರಾಪಾನಹೃದಾ ಯುಕ್ತಂ ಗುರುತಲ್ಪಕಟಿದ್ವಯಮ್ ।**
**ತತ್ಸಂಯೋಗಪದದ್ವಂದ್ವಂ ಅಂಗಪ್ರತ್ಯಂಗಪಾತಕಮ್ ॥ ೩೦ ॥**
**ಉಪಪಾತಕರೋಮಾಣಂ ರಕ್ತಶ್ಮಶ್ರುವಿಲೋಚನಮ್ ।**
**ಖಡ್ಗಚರ್ಮಧರಂ ಕೃಷ್ಣಂ ಕುಕ್ಷೌ ಪಾಪಂ ವಿಚಿಂತಯೇತ್ ॥ ೩೧ ॥**

ಗಾಲವರು ನುಡಿದರು—

ಮೊದಲು ಪಾದಗಳನ್ನು ತೊಳೆದುಕೊಂಡು, ಆಚಮನ ಮಾಡಿ, ಆಸನದಲ್ಲಿ ಕುಳಿತು ನಿತ್ಯವೂ, ವಿಶೇಷವಾಗಿ ಮಾಘಮಾಸದಲ್ಲಿಯೂ ಈ ಸ್ತೋತ್ರವನ್ನು ಪಠಿಸಬೇಕು. ಅಂಗನ್ಯಾಸವನ್ನು ಮಾಡಿ, ತನ್ನ ಗುರುಗಳನ್ನು ಮನಸಾ ನಮಸ್ಕರಿಸಿ, ತನ್ನ ಹೊಟ್ಟೆಯ ಎಡಭಾಗದಲ್ಲಿ ಬಲಗೈಯಿಂದ ಸ್ಪರ್ಶಿಸಿ, ಪಾಪಪುರುಷನನ್ನು ಧ್ಯಾನಿಸಬೇಕು. ಹೇಗೆಂದರೆ—ಪಾಪಪುರುಷನ ತಲೆಯೇ ಬ್ರಹ್ಮಹತ್ಯೆ, ಬಂಗಾರವನ್ನು ಕಳ್ಳತನ ಮಾಡುವ ಪಾಪವೇ ಅವನ ಎರಡು ಭುಜಗಳು, ಸುರಾಪಾನವೆಂಬ ಪಾಪವೇ ಅವನ ಹೃದಯ, ಗುರುತಲ್ಪ ಪಾಪವೇ ಅವನ ಕಟಿ (ಸೊಂಟ), ಗುರುತಲ್ಪ ಸಂಯೋಗಕ್ಕೆ ಸಹಾಯ ಮಾಡುವ ಪಾಪಗಳೇ ಅವನ ಎರಡು ಪಾದಗಳು ಮತ್ತು ಇತರ ಅವಯವಗಳು, ಇತರ ಸಣ್ಣ-ಪುಟ್ಟ ಪಾಪಗಳೇ ಅವನ ರೋಮಗಳು, ಮೀಸೆ ಮತ್ತು ಕಣ್ಣುಗಳು ಕೆಂಪಾಗಿರುವವನು, ಕೈಯಲ್ಲಿ ಖಡ್ಗಚರ್ಮವನ್ನು ಹಿಡಿದುಕೊಂಡಿರುವವನು, ಕಪ್ಪಾದ ಮೈಬಣ್ಣ ಉಳ್ಳವನು—ಈ ರೀತಿಯಲ್ಲಿರುವ ಪಾಪಪುರುಷನನ್ನು ಕುಕ್ಷಿಯ ಎಡಭಾಗದಲ್ಲಿ ಚಿಂತಿಸಬೇಕು.

**ನಾಭಿಂ ಸ್ಪೃಷ್ಟ್ವಾ ತತಃ ಪಶ್ಚಾತ್ ವಾಯುಬೀಜಮನುಸ್ಮರನ್ ।**
**ಷಟ್‌ಕೋಣಚಕ್ರಗಂ ನೀಲಂ ಭಗವಂತಮನುಸ್ಮರನ್ ॥ ೩೨ ॥**
**ದೇಹಸ್ಥಂ ಪಾಪಪುರುಷಂ ವಾಯುನಾ ಶೋಷಯೇತ್ಸ್ವರಾ ।**
**ತತೋ ಹೃದಿ ಕರಂ ನ್ಯಸ್ಯ ವಹ್ನಿಮಂಡಲಗಂ ಹರಿಮ್ ॥ ೩೩ ॥**
**ತ್ರಿಕೋಣಚಕ್ರಗಂ ರಕ್ತಂ ಭಗವಂತಮನುಸ್ಮರನ್ ।**
**ದೇಹಸ್ಥಂ ಪಾಪಪುರುಷಂ ನಿರ್ದಹೇತ್ ಅಗ್ನಿನಾ ತತಃ ॥ ೩೪ ॥**

ನಂತರ ನಾಭಿಯನ್ನು ಸ್ಪರ್ಶಮಾಡಿ ಆಮೇಲೆ ವಾಯುಬೀಜವನ್ನು ಸ್ಮರಿಸಿ, ಷಟ್‌ಕೋಣಚಕ್ರಸ್ಥನಾದ, ನೀಲವರ್ಣದಿಂದ ಯುಕ್ತನಾದ, ಷಡ್ಗುಣೈಶ್ವರ್ಯದಿಂದ ಭರಿತನಾದ ಶ್ರೀಹರಿಯನ್ನು ಚಿಂತಿಸಿ, ಪಾಪಪುರುಷನನ್ನು ವಾಯುವಿನಿಂದ ಒಣಗಿಸಬೇಕು. ನಂತರ ಹೃದಯದಲ್ಲಿ ಹಸ್ತವನ್ನಿಟ್ಟುಕೊಂಡು, ಅಗ್ನಿಯಲ್ಲಿ ಸನ್ನಿಹಿತನಾಗಿರುವ ತ್ರಿಕೋಣಚಕ್ರಸ್ಥನಾದ ರಕ್ತವರ್ಣದಿಂದ ಯುಕ್ತನಾದ ಭಗವಂತನನ್ನು ಸ್ಮರಿಸಿ, ದೇಹದಲ್ಲಿ ಆಗಲೇ ಒಣಗಿರುವ ಪಾಪಪುರುಷನನ್ನು ಅಗ್ನಿಯಿಂದ ದಹಿಸಬೇಕು.

**ಪಶ್ಚಾತ್ ಮೂರ್ಧ್ನಿ ಕರಂ ನ್ಯಸ್ಯ ಸ್ಥಿತಂ ವರುಣಮಂಡಲೇ ।**
**ಚತುರ್ದಲೇ ಸ್ಫಾಟಿಕಾಭಂ ಸ್ಮೃತ್ವಾ ಚಾಮೃತವೃಷ್ಟಿಭಿಃ ॥ ೩೫ ॥**
**ಆಪ್ಲಾವ್ಯ ಸಕಲಂ ದೇಹಂ ಪ್ರಾಣಾಯಾಮಂ ತತಶ್ಚರೇತ್ ।**
**ಗಾಯತ್ರ್ಯಾ ಚೈವ ಮಂತ್ರೇಣ ಪಂಚಾಂಗನ್ಯಾಸಮಾಚರೇತ್ ॥ ೩೬ ॥**

**ಮಾಧವೇತಿ ಹೃದಿ ನ್ಯಸ್ಯ ನ್ಯಸೇತ್ ಮೂರ್ಧ್ನಿ ಚ ಕೇಶವಮ್ ।**
**ನಾರಾಯಣಂ ಶಿಖಾಯಾಂ ಚ ನೇತ್ರಯೋರಚ್ಯುತಂ ತಥಾ ॥ ೩೭ ॥**

**ವಿಷ್ಣವೇ ನಮ ಇತಿ ಚ ವದೇತ್ ಅಸ್ತ್ರಾಯಫಟ್‌ತತಃ ।**
**ಮಂತ್ರಸ್ತತಃ ಪ್ರಯೋಕ್ತವ್ಯಃ ಸರ್ವಪಾಪೋಪಶಾಂತಯೇ ॥ ೩೮ ॥**

ಅನಂತರ ತನ್ನ ತಲೆಯಮೇಲೆ ಹಸ್ತವನ್ನಿಟ್ಟುಕೊಂಡು, ವರುಣಮಂಡಲದಲ್ಲಿ ನಾಲ್ಕುದಳ ಪದ್ಮದಲ್ಲಿ, ಸ್ಫಟಿಕದಂತೆ ಪ್ರಕಾಶಮಾನವಾಗಿರುವ ಭಗವಂತನನ್ನು ಸ್ಮರಿಸಿ, ಅಮೃತವೃಷ್ಟಿಯಿಂದ ತನ್ನ ದೇಹವನ್ನೆಲ್ಲ ನೆನಸಿ, ಶುದ್ಧನಾಗಿ ಗಾಯತ್ರಿ ಮಂತ್ರದಿಂದ ಪಂಚಾಂಗನ್ಯಾಸಮಾಡಬೇಕು ಹೇಗೆಂದರೆ—ಮಾಧವನನ್ನು ಹೃದಯ ದಲ್ಲಿ, ಶಿರಸ್ಸಿನಲ್ಲಿ ಕೇಶವನನ್ನು, ಶಿಖೆಯಲ್ಲಿ ನಾರಾಯಣನನ್ನು, ಎರಡು ಕಣ್ಣುಗಳಲ್ಲಿ ಅಚ್ಯುತನನ್ನು ಧ್ಯಾನಿಸಿ, ವಿಷ್ಣವೇ ನಮಃ "ಅಸ್ತ್ರಾಯಫಟ್" ಎಂದು ಉಚ್ಚರಿಸಿ ಪಂಚಾಂಗನ್ಯಾಸ ಮಾಡಿಕೊಂಡು ಸಮಸ್ತಪಾಪಗಳ ನಿವಾರಣೆಗೆ ಮಾಧವಸ್ತವರಾಜ ಸ್ತೋತ್ರವನ್ನು ಪಠಿಸಬೇಕು.

**ಭುಕ್ತಿಮುಕ್ತಿಪ್ರದೋ ನೃಣಾಂ ಸರ್ವರೋಗವಿನಾಶನಃ ।**
**ಅಚ್ಯುತಾನಂತಗೋವಿಂದ ಪ್ರಣತಾರ್ತಿವಿನಾಶನ ॥**

**ದೇಹಿ ಮೇಽದ್ಯ ಮನಃಶುದ್ಧಿಂ ತ್ವನ್ನಾಮಸ್ಮರಣಾದ್ಧರೇ ॥ ೩೯ ॥**

ಈ ಸ್ತೋತ್ರವು ಇಹಲೋಕದಲ್ಲಿ ಸುಖವನ್ನೂ, ಪರಲೋಕದಲ್ಲಿ ಮುಕ್ತಿ ಯನ್ನೂ ಕೊಡುವುದು. ಸಮಸ್ತರೋಗಗಳನ್ನೂ ಪರಿಹಾರ ಮಾಡುತ್ತದೆ.

ಅಚ್ಯುತನೇ, ಅನಂತನೇ, ಗೋವಿಂದನೇ, ಶರಣಾಗತರ ದುಃಖಪರಿಹಾರಕನೇ, ಶ್ರೀಹರಿಯೇ ನಿನ್ನ ನಾಮೋಚ್ಚಾರಣಮಾಡುವುದರಿಂದ ನನಗೆ ಮನಸ್ಸಿನ ನೈರ್ಮಲ್ಯ ವನ್ನು ದಯಪಾಲಿಸು.

**ಹೃಷೀಕೇಶ ಜಗದ್ವ್ಯಾಪಿನ್ ಸರ್ವಸಾಕ್ಷಿನ್ ದಯಾನಿಧೇ ।**
**ಇಂದ್ರಿಯಾಣ್ಯನುಕೂಲಾನಿ ಸದಾ ಧರ್ಮೇಷು ಮೇ ಕುರು ॥ ೪೦ ॥**

ಹೃಷೀಕೇಶನೇ, ಜಗತ್ತನ್ನೆಲ್ಲ ವ್ಯಾಪಿಸಿರುವವನೇ, ಸರ್ವಸಾಕ್ಷಿಯೇ, ದಯಾ ನಿಧಿಯೇ, ನನ್ನ ಇಂದ್ರಿಯಗಳು ಪಟುತ್ವವನ್ನು ಹೊಂದಿರುವಂತೆ ಮಾಡು, ನಿತ್ಯವೂ ಧರ್ಮದಲ್ಲಿ ಆಸಕ್ತವಾಗಿರುವಂತೆ ಮಾಡು.

**ಯಶ್ಚ ಕ್ಷಮಾರ್ಗಃ ಸೂರ್ಯಗಶ್ಚ ಸೂರ್ಯಾತ್ಮಾ ಸೂರ್ಯಸೇವಿತಃ ।**
**ದರ್ಶಯಸ್ವ ಮಹಾಬಾಹೋ ಸದಾ ಮೇ ಧರ್ಮಪದ್ಧತಿಮ್ ॥ ೪೧ ॥**

ಚಕ್ಷುಗಳಲ್ಲಿಯೂ, ಸೂರ್ಯನಲ್ಲಿಯೂ ಇದ್ದು ಸೂರ್ಯಾಂತರ್ಗತನೆನಿಸಿಕೊಂಡು ಸೂರ್ಯನಿಂದ ಸೇವೆಯನ್ನು ಸ್ವೀಕರಿಸುವ ಮಹಾಪ್ರಭುವೇ, ನನಗೆ ನಿತ್ಯವೂ ಧರ್ಮಮಾರ್ಗವನ್ನೇ ತೋರಿಸು.

**ದಿಗ್ರೂಪೀ ಚ ಶ್ರುತಿಸ್ಥೋ ಯಃ ಸರ್ವಪ್ರತ್ಯಯಗೋಚರಃ ।**
**ವರ್ತಯಸ್ವ ಕಥಾಲಾಪೇ ಶ್ರೋತ್ರೇ ಮೇ ಶ್ರುತಿಬೋಧಿತೇ ॥ ೪೨ ॥**

ದಿಗ್ರೂಪೀನಾಮದಿಂದ ಸರ್ವಪ್ರತ್ಯಯಗೋಚರನಾಗಿ, ನನ್ನ ಕಿವಿಯಲ್ಲಿರುವ ಶ್ರೀಹರಿಯೇ ! ನನ್ನ ಕಿವಿಗಳನ್ನು ಸದಾಕಾಲದಲ್ಲಿಯೂ ಶ್ರುತ್ಯುಕ್ತವಾದ ನಿನ್ನ ಕಥಾಗಳನ್ನು ಕೇಳುವುದರಲ್ಲಿ ನಿಯಮಿಸು.

**ನಾಸತ್ಯರೂಪೀ ಭಗವಾನ್ ನಾಸಾಸ್ಥೋ ಹರಿರವ್ಯಯ ।**
**ನಾಸಾಂ ಮೇ ವರ್ತಯಸ್ವಾಶು ದಿವ್ಯೇ ತ್ವತ್ಪಾದಸೌರಭೇ ॥ ೪೩ ॥**

ನಾಸತ್ಯರೂಪದಿಂದ ಘ್ರಾಣೇಂದ್ರಿಯದಲ್ಲಿರುವ ನಾಶರಹಿತನಾದ ಹರಿಯೇ ! ನನ್ನ ಮೂಗು ಸದಾ ನಿನ್ನ ಪಾದಾರವಿಂದದಲ್ಲಿ ಸಮರ್ಪಿತವಾದ ಪುಷ್ಪಗಳ ಸೌರಭವನ್ನು ಅನುಭವಿಸುವಂತೆ ಅನುಗ್ರಹಿಸು.

**ಜಿಹ್ವಾತ್ಮಾ ವರುಣಸ್ತ್ವಂ ಚ ಮಾಧವಾನಂತಶಕ್ತಿಧೃಕ್ ।**
**ಜಿಹ್ವಾಂ ತವ ರಸಾಸ್ವಾದೇ ವರ್ತಯಸ್ವ ಮಹಾಪ್ರಭೋ ॥ ೪೪ ॥**

ಅಪರಿಮಿತಶಕ್ತಿಯುತನಾದ ಮಾಧವನೇ, ಜಿಹ್ವಾಭಿಮಾನಿವರುಣಾಂತರ್ಗತನೇ, ನನ್ನ ಜಿಹ್ವೆಯು ಸದಾ ನಿನಗೆ ಅರ್ಪಿತವಾದ ಪದಾರ್ಥಗಳ ರುಚಿಯನ್ನು, ಆಸ್ವಾದನೆ ಮಾಡುವಂತೆ ನಿಯಮನ ಮಾಡು.

**ಪ್ರಾಣಾತ್ಮಕೋ ವಿಷ್ಣುರಜಸ್ತ್ವಕ್ ಸ್ಪರ್ಶಾತ್ಮಾ ಮಹಾಪ್ರಭುಃ ।**
**ತ್ವಕ್‌ಸ್ಪರ್ಶಾಭ್ಯಾಂ ಕೃತಂ ಪಾಪಂ ಶಮಯಾಚ್ಯುತ ಮಾಧವ ॥ ೪೫ ॥**

ಪ್ರಾಣಾತ್ಮಕನಾದ ವಿಷ್ಣುವೇ, ತ್ವಕ್‌ಸ್ಪರ್ಶಾತ್ಮಕ ಮಹಾಪ್ರಭುವೇ, ಅಚ್ಯುತನೇ, ಮಾಧವನೇ ! ನನ್ನ ತ್ವಕ್‌ಸ್ಪರ್ಶದಿಂದ ಮಾಡಿದ ಪಾಪವನ್ನು ನಾಶಮಾಡು.

**ಸ್ವಸ್ಥಃ ಸ್ವನಾಮಾ ಭಗವಾನ್ ಸರ್ವವ್ಯಾಪಿನ್ಮಹಾಪ್ರಭೋ ।**
**ಯದಾಕಾಶಾತ್ ಪ್ರವೃತ್ತಂ ಚ ಪಾಪಂ ಪ್ರಶಮಯಾಚ್ಯುತ ॥ ೪೬ ॥**

ಆಕಾಶದಲ್ಲಿದ್ದು ಆಕಾಶ ಶಬ್ದವಾಚ್ಯನಾದ, ಸರ್ವತ್ರ ವ್ಯಾಪ್ತನಾದ, ಷಡ್ಗುಣೈಶ್ವರ್ಯಪೂರ್ಣನಾದ, ಜಗದೊಡೆಯನಾದ ಅಚ್ಯುತನೇ! ಆಕಾಶಸಂಬಂಧದಿಂದ ನಾನು ಮಾಡಿರುವ ಪಾಪವನ್ನು ಪರಿಹರಿಸು.

**ವಾಯುಗೋ ವಾಯುನಾಮಾ ತ್ವಂ ಜಗತ್ಸಾರಾವ್ಯಯಾಚ್ಯುತ ।**
**ವಾಯೋರ್ಭೂತಾತ್ ಕೃತಂ ಪಾಪಂ ಶಮಯಾಚ್ಯುತ ಮಾಧವ ॥ ೪೭ ॥**

ವಾಯುವಿನಲ್ಲಿದ್ದು ವಾಯುಶಬ್ದವಾಚ್ಯನಾದ, ಜಗತ್ಸಾರನೇ, ಅಚ್ಯುತನೇ, ವಾಯುಸಂಬಂಧದಿಂದ ನಾನು ಮಾಡಿರುವ ಪಾಪವನ್ನು ನಾಶಮಾಡು.

**ತೇಜಸ್ಥಿತೋ ವಹ್ನಿನಾಮಾ ಸ್ವಯಂಜ್ಯೋತಿಸ್ತ್ವಮಾದಿದೃಕ್ ।**
**ತೇಜೋಭೂತಾತ್ ಕೃತಂ ಪಾಪಂ ಶಮಯಾಚ್ಯುತ ಮಾಧವ ॥ ೪೮ ॥**

ಅಗ್ನಿಯಲ್ಲಿದ್ದು, ಅಗ್ನಿನಾಮಕನಾದ, ಸ್ವಯಂಜ್ಯೋತಿಯಾದ ಅಚ್ಯುತನೇ! ತೇಜಸ್ಸೆಂಬ ಭೂತಸಂಬಂಧದಿಂದ ನಾನು ಮಾಡಿರುವ ಪಾಪವನ್ನು ಪರಿಹರಿಸು.

**ಅಪ್ ಸ್ಥಿತೋ ಭಗವಾನ್ ವಿಷ್ಣುಃ ಅಬಾತ್ಮಾ ಜೀವನಪ್ರದಃ ।**
**ಅಬ್ಭೂತಾಚ್ಚ ಕೃತಂ ಪಾಪಂ ಶಮಯಾಚ್ಯುತ ಮಾಧವ ॥ ೪೯ ॥**

ಜಲತತ್ವದಲ್ಲಿದ್ದು, ಸರ್ವರಿಗೂ ಜೀವನಪ್ರದನಾದ, ಪರಮಪೂಜ್ಯನಾದ, "ಅಪ್" ಎಂಬ ಶಬ್ದವಾಚ್ಯನಾದ ವಿಷ್ಣುವೇ! ಅಚ್ಯುತನೇ! ಜಲಸಂಬಂಧದಿಂದ ನಾನು ಮಾಡಿರುವ ಪಾಪಗಳನ್ನು ಪರಿಹರಿಸು.

**ಭೂಮಿಸ್ಥಿತೋ ಭೂಮಿನಾಮಾ ಜಗದಾಧಾರ ಕೇಶವ ।**
**ಭೂಮೇರ್ಭೂತಾತ್ ಕೃತಂ ಪಾಪಂ ಶಮಯಾಚ್ಯುತ ಮಾಧವ ॥ ೫೦ ॥**

ಪೃಥ್ವೀತತ್ವದಲ್ಲಿದ್ದು, ಪೃಥ್ವೀಶಬ್ದವಾಚ್ಯನಾದ, ಜಗತ್ತಿಗೆ ಆಧಾರನಾದ ಕೇಶವನೇ! ಅಚ್ಯುತನೇ! ಮಾಧವನೇ! ಭೂಮಿಯಸಂಬಂಧದಿಂದ ನಾನು ಮಾಡಿರುವ ಪಾಪಗಳನ್ನು ನಾಶಮಾಡು.

**ಮಹಾನ್ಮಹದ್ಗತೋ ವಿಷ್ಣುಃ ಜಗದ್ಧೇತುರ್ಜನಾರ್ದನಃ ।**
**ನಿದಾನಂ ಕರ್ಮಣೋ ವಿಷ್ಣೋ ಶಮಯಾಚ್ಯುತಮಾಧವ ॥ ೫೧ ॥**

ಮಹತ್ತತ್ವದಲ್ಲಿದ್ದು, ಮಹತ್ ಶಬ್ದವಾಚ್ಯನಾದ, ಜಗತ್ಕಾರಣನಾದ, ಜನಾರ್ದನನೇ! ಸಕಲಕರ್ಮಗಳಿಗೂ ಕಾರಣನಾದ ವಿಷ್ಣುವೇ! ಮಾಧವನೇ, ಅಚ್ಯುತನೇ! ನನ್ನ ಪಾಪಗಳನ್ನು ಕ್ಷಮಿಸು.

**ಯಶ್ಚಾಹಂಕಾರಗೋ ವಿಷ್ಣುಃ ಜಗದ್ಧೇತುರ್ನಿರಾಶ್ರಯಃ ।**
**ಅಹಂಕಾರಾತ್ ಕೃತಂ ಪಾಪಂ ಶಮಯಾಚ್ಯುತ ಮಾಧವ ॥ ೫೨ ॥**

ಅಹಂಕಾರತತ್ವದಲ್ಲಿರುವ, ಅಹಂಕಾರಶಬ್ದವಾಚ್ಯನಾದ, ಜಗತ್ತಿಗೆ ತಾನು ಆಶ್ರಯನಾದರೂ ತನಗೆ ಮಾತ್ರ ಯಾವ ಆಶ್ರಯವೂ ಇಲ್ಲದಿರುವ, ವಿಷ್ಣುವೇ, ಅಚ್ಯುತನೇ, ಮಾಧವನೇ ! ಅಹಂಕಾರದಿಂದ ನಾನು ಮಾಡಿರುವ ಪಾಪಗಳನ್ನು ನಾಶಮಾಡು.

**ಮನಸ್ಥಿತಃ ಕಾಮರೂಪೀ ಪ್ರವರ್ತಕ ನಿವರ್ತಕ ।**
**ಮನಸಾ ತು ಕೃತಂ ಪಾಪಂ ಶಮಯಾಚ್ಯುತ ಮಾಧವ ॥ ೫೩ ॥**

ಮನಸ್ಸಿನಲ್ಲಿರುತ್ತಾ, ಇಚ್ಛಾರೂಪದಿಂದ ಮನಸ್ಸನ್ನು ಪ್ರವರ್ತಿಸುವ, ನಿವರ್ತಿಸುವ, ಅಚ್ಯುತನೇ, ಮಾಧವನೇ ! ಮನಸ್ಸಿನಿಂದ ನನ್ನಿಂದ ಮಾಡಲ್ಪಟ್ಟ ಪಾಪವನ್ನು ಪರಿಹರಿಸು.

**ಬುದ್ಧಿಗೋ ಬುದ್ಧಿನಾಮಾ ತ್ವಂ ಬೋಧಾತ್ಮಾ ಹರಿರೀಶ್ವರಃ ।**
**ಬುದ್ಧ್ಯಾ ತು ಯತ್ಕೃತಂ ಪಾಪಂ ಶಮಯಾಚ್ಯುತ ಮಾಧವ ॥ ೫೪ ॥**

ಬುದ್ಧಿಯಲ್ಲಿದ್ದು ಬುದ್ಧಿಶಬ್ದವಾಚ್ಯನಾಗಿ ಬೋಧಾತ್ಮಕನಾಗಿ, ಪಾಪ ಪರಿಹಾರಕನಾಗಿ ಜಗತ್ತಿಗೆ ಪ್ರಭುವಾಗಿರುವ ನೀನು ಬುದ್ಧಿಯಿಂದ ನಾನು ಮಾಡಿದ ಪಾಪವನ್ನು ನಾಶಮಾಡು.

**ವಾಚಿ ಸ್ಥಿತೋ ವಹ್ನಿರೂಪೀ ಗುಹಾಶ್ರಯ ನಿರಾಶ್ರಯ ।**
**ವಾಚಾ ಕೃತಂ ಮಹತ್ಪಾಪಂ ಶಮಯಾಚ್ಯುತ ಮಾಧವ ॥ ೫೫ ॥**

ವಾಕ್ ಇಂದ್ರಿಯದಲ್ಲಿದ್ದು, ವಹ್ನಿರೂಪನಾಗಿ, ಹೃದಯಗುಹೆಯಲ್ಲಿ ಸ್ಥಿತನಾಗಿ, ನೀನು ಮಾತ್ರ ನಿರಾಶ್ರಯನಾಗಿರುವಂತಹ ಅಚ್ಯುತನೇ ! ಮಾಧವನೇ ! ವಾಗಿಂದ್ರಿಯದಿಂದ ನಾನು ಮಾಡಿರುವ ಪಾಪಗಳನ್ನು ಪರಿಹರಿಸು.

**ಹಸ್ತಸ್ಥೋ ಭಗವಾನ್ ವಿಷ್ಣುಃ ದಕ್ಷಗಃ ಪುಣ್ಯವಿಗ್ರಹಃ ।**
**ಯದ್ಧಸ್ತಾಭ್ಯಾಂ ಕೃತಂ ಪಾಪಂ ಶಮಯಾಚ್ಯುತ ಮಾಧವ ॥ ೫೬ ॥**

ಹಸ್ತಗಳಲ್ಲಿದ್ದು, ಹಸ್ತಕ್ಕೆ ಅಭಿಮಾನಿಯಾದ ದಕ್ಷನ ಅಂತರ್ಯಾಮಿಯಾಗಿ, ಪೂಜ್ಯನಾಗಿ, ಪುಣ್ಯಶ್ಲೋಕನಾಗಿರುವ ಅಚ್ಯುತನೇ, ಮಾಧವನೇ ! ಹಸ್ತಗಳ ಮೂಲಕ ನಾನು ಮಾಡಿರುವ ಪಾಪಗಳನ್ನು ನಾಶಮಾಡು.

**ಪಾದಸ್ಥಿತೋ ಜಯಂತಾಹ್ವೋ ಭಗವಾನ್ ಗರುಡಾಸನಃ ।**
**ಯತ್ ಪದ್ಭ್ಯಾಂ ಕೃತಂ ಪಾಪಂ ಶಮಯಾಚ್ಯುತ ಮಾಧವ ॥ ೫೭ ॥**

ಪಾದಗಳಲ್ಲಿರುತ್ತಾ, ಪಾದಕ್ಕೆ ಅಭಿಮಾನಿಯಾದ ಜಯಂತನ ಅಂತರ್ಯಾಮಿಯಾಗಿ, ಪೂಜ್ಯನಾಗಿ, ಗರುಡಾಸನನಾಗಿರುವ ಅಚ್ಯುತನೇ, ಮಾಧವನೇ ! ಪಾದಗಳ ಮೂಲಕ ನಾನು ಮಾಡಿರುವ ಪಾಪಗಳನ್ನು ಪರಿಹರಿಸು.

**ಗುಹ್ಯಸ್ಥಿತೋ ಗುಹ್ಯರೂಪೀ ಪ್ರಸವಿಷ್ಣೂ ರಮಾಪತಿಃ ।**
**ಯದ್ಗುಹ್ಯೇನ ಕೃತಂ ಪಾಪಂ ಶಮಯಾಚ್ಯುತ ಮಾಧವ ॥ ೫೮ ॥**

ಗುಹ್ಯೇಂದ್ರಿಯದಲ್ಲಿರುತ್ತಾ ಗುಹ್ಯರೂಪದಿಂದ ನಿಯಮನಮಾಡುವ, ಜಗತ್ತಿಗೆ ಸೃಷ್ಟಿಕರ್ತನಾದ ಲಕ್ಷ್ಮೀಪತಿಯಾದ ಅಚ್ಯುತನೇ, ಮಾಧವನೇ ! ಗುಹ್ಯೇಂದ್ರಿಯದಿಂದ ನಾನು ಮಾಡಿರುವ ಪಾಪಗಳನ್ನು ನಾಶಮಾಡು.

**ಹರೇ ಕೃಷ್ಣ ಹರೇ ಕೃಷ್ಣ ಶಂಖಚಕ್ರಗದಾಧರ ।**
**ಸರ್ವದಾ ಸರ್ವತೋ ಮಹ್ಯಂ ಕುರು ಮಾಧವ ರಕ್ಷಣಮ್ ॥ ೫೯ ॥**

ಶಂಖಚಕ್ರಗದಾಧಾರಿಯಾದ ಹರಿಯೇ, ಕೃಷ್ಣನೇ ! ಸರ್ವಸ್ಥಳಗಳಲ್ಲಿಯೂ, ಸದಾಕಾಲಗಳಲ್ಲಿಯೂ ನನ್ನನ್ನು ರಕ್ಷಿಸು.

**ವಾಮವಾಮನವಿಶ್ವಾತ್ಮನ್ ಬಲಿಧ್ವಂಸಿನ್ ವಟೋ ಹರೇ ।**
**ಕೃಪಾಲಯಸ್ಥಲೇಷು ತ್ವಂ ಕುರು ಮಾಧವ ರಕ್ಷಣಮ್ ॥ ೬೦ ॥**

ಸುಂದರ ರೂಪಯುಕ್ತನಾದ, ವಿಶ್ವಾತ್ಮನಾದ, ಬಲಿಯನ್ನು ನಿಗ್ರಹಿಸಿದ, ವಟು-ರೂಪನಾದ, ಕೃಪಾಳುವಾದ ಮಾಧವನೇ ! ನನ್ನನ್ನು ಸರ್ವಪ್ರದೇಶಗಳಲ್ಲಿಯೂ ರಕ್ಷಿಸು.

**ತ್ರಿವಿಕ್ರಮ ತ್ರಿಕಾಲಜ್ಞ ತ್ರಿಧಾಮಂಸ್ತ್ವಂ ತ್ರಯೀಮಯ ।**
**ಸರ್ವಾಶ್ಚರ್ಯಕರವ್ಯೋಮ್ನಿ ಕುರು ಮಾಧವ ರಕ್ಷಣಮ್ ॥ ೬೧ ॥**

ತ್ರಿವಿಕ್ರಮರೂಪಿಯೇ, ತ್ರಿಕಾಲಜ್ಞನೇ, ತ್ರಿಧಾಮದಲ್ಲಿರುವವನೇ, (ಶ್ವೇತ-ದ್ವೀಪ, ಅನಂತಾಸನ, ವೈಕುಂಠ) ವೇದಪ್ರತಿಪಾದ್ಯನೇ, ಸರ್ವಾಶ್ಚರ್ಯನೇ ! ವ್ಯೋಮಭಾಗದಲ್ಲಿ ನನ್ನನ್ನು ಕಾಪಾಡು.

**ವೇದನೇತ್ರ ಮಹಾಮೀನ ಜಲೇ ವರುಣಪಾಶತಃ ।**
**ಯಾದೋಗಣೇಭ್ಯೋ ದೇವೇಶ ಕುರು ಮಾಧವ ರಕ್ಷಣಮ್ ॥ ೬೨ ॥**

ಸಕಲ ವೇದಗಳನ್ನೂ ಸಂಪೂರ್ಣವಾಗಿ ತಿಳಿದಿರುವವನೇ, ಅತ್ಯಾಶ್ಚರ್ಯಕರವಾದ ಮೀನಿನ ರೂಪವನ್ನು ಧರಿಸಿದವನೇ, ನೀರಿನಲ್ಲಿ ನಾನು ಪ್ರಯಾಣಮಾಡುವಾಗ ಅಲ್ಲಿರುವ ಜಲಚರ ಪ್ರಾಣಿಗಳಿಂದಲೂ, ವರುಣಪಾಶಗಳಿಂದಲೂ, ಮಾಧವನೇ! ನನ್ನನ್ನು ರಕ್ಷಿಸು.

**ಮಹಾವಿಷ್ಣೋ ನೃಸಿಂಹ ತ್ವಂ ವಜ್ರಕಲ್ಪಮಹಾನಖ ।**
**ದುರ್ಗಾಟವೀಗ್ರಹಾದಿಭ್ಯಃ ಕುರು ಮಾಧವ ರಕ್ಷಣಮ್ ॥ ೬೩ ॥**

ವಜ್ರದಂತೆ ಕಠಿಣವಾದ ನಖಗಳನ್ನುಳ್ಳ ನರಸಿಂಹರೂಪಿಯಾದ ಮಹಾವಿಷ್ಣುವೇ! ಗ್ರಹಗಳಿಂದಲೂ, ಬೆಟ್ಟಕಾಡುಗಳಲ್ಲಿ ಸಂಚಾರಮಾಡುವಾಗ ಇತರ ಶತ್ರುಗಳಿಂದಲೂ ನನ್ನನ್ನು ರಕ್ಷಿಸು.

**ಯದ್ದಂಷ್ಟ್ರೇಂದುಕುಲಾಲಗ್ನಾ ಕಲಂಕ ಇವ ಯಾ ಕ್ಷಿತಿಃ ।**
**ವರಾಹಾಧ್ವನಿ ಮೇ ನಿತ್ಯಂ ಕುರು ಮಾಧವ ರಕ್ಷಣಮ್ ॥ ೬೪ ॥**

ಯಾರ ಹಲ್ಲುಗಳಲ್ಲಿ ಚಂದ್ರಕಲೆಯು ಮುಳುಗಿದಂತೆ ಸ್ಥಿತವಾಗಿದೆಯೋ, ಯಾರ ಕೋರೆಹಲ್ಲುಗಳ ಮೇಲೆ ಪೃಥ್ವಿಯು ಒಂದು ಕಲಂಕದಂತೆ ನಿಂತಿದೆಯೋ, ಅಂತಹ ವರಾಹರೂಪೀ ಮಾಧವನೇ! ನಾನು ಅಲ್ಲಲ್ಲಿ ಸಂಚರಿಸುವಾಗ ವರಾಹಗಳಿಂದ ನನ್ನನ್ನು ಕಾಪಾಡು.

**ಶಾರ್ಙ್ಗಧನ್ವನ್ ಮಹಾವೀರ್ಯ ನಾರಾಯಣ ಪರಾತ್ಪರ ।**
**ಪ್ರಮಾದೋತ್ಥಮಹಾದುಃಖಾತ್ ಕುರು ಮಾಧವ ರಕ್ಷಣಮ್ ॥ ೬೫ ॥**

ಕೈಯಲ್ಲಿ "ಶಾರ್ಙ್ಗ"ವೆಂಬ ಧನುಸ್ಸನ್ನು ಹಿಡಿದಿರುವವನೇ, ಮಹಾಪರಾಕ್ರಮಶಾಲಿಯೇ, ಬ್ರಹ್ಮಾದಿ ದೇವತೆಗಳಿಗೂ ಶ್ರೇಷ್ಠನಾದ ನಾರಾಯಣನೇ, ಮಾಧವನೇ! ಪ್ರಮಾದದೋಷದಿಂದ ಸಂಭವಿಸುವ ದುಃಖಗಳಿಂದ ನನ್ನನ್ನು ಕಾಪಾಡು.

**ಅನಸೂಯಾಗರ್ಭರತ್ನ ಯೋಗಿಧ್ಯೇಯಾತ್ರಿಗೋತ್ರಜ ।**
**ಯೋಗೋಪಾಯವಿಹೀನಸ್ಯ ಕುರು ಮಾಧವ ರಕ್ಷಣಮ್ ॥ ೬೬ ॥**

ಅನಸೂಯಾಗರ್ಭರತ್ನನೇ, ಯೋಗಿಗಳಿಂದ ಧ್ಯಾನಯೋಗ್ಯನೆ, ಅತ್ರಿಗೋತ್ರದಲ್ಲಿ ಉತ್ಪನ್ನನಾದ ಮಾಧವನೇ! ಯೋಗೋಪಾಯಗಳ ಜ್ಞಾನಶೂನ್ಯನಾದ ನನ್ನನ್ನು ರಕ್ಷಿಸು. (ಧ್ಯಾನಯೋಗ, ಭಕ್ತಿಯೋಗ, ಕರ್ಮಯೋಗ ಇತ್ಯಾದಿ)

**ಸನತ್ಕುಮಾರ ಕಪಿಲ ಹಯಗ್ರೀವ ಜನಾರ್ದನ ।**
**ದೇವ ಹೇಲನಬಂಧೇಭ್ಯಃ ಕುರು ಮಾಧವ ರಕ್ಷಣಮ್ ॥ ೬೭ ॥**

*

ಸನತ್ಕುಮಾರನೇ, ಕಪಿಲರೂಪಿಯೇ, ಹಯಗ್ರೀವರೂಪಿಯೇ, ಜನಾರ್ದನನೇ, ಮಾಧವನೇ ! ದೇವತೆಗಳನ್ನು ಅವಹೇಳನ ಮಾಡಿದ್ದರಿಂದ ಬಂದ ಪಾಪಗಳಿಂದ ನನ್ನನ್ನು ಕಾಪಾಡು.

**ಸಮಸ್ತಜಗದಾಧಾರ ಸರ್ವದೇವ ಭಯಾಪಹ ।**
**ಘೋರೇಭ್ಯೋ ನರಕೇಭ್ಯಶ್ಚ ಕುರು ಮಾಧವ ರಕ್ಷಣಮ್ ॥ ೬೮ ॥**

ಸಮಸ್ತ ಜಗತ್ತಿಗೂ ಆಶ್ರಯನೇ, ಸಮಸ್ತ ದೇವತೆಗಳ ಭಯವನ್ನು ನಾಶ ಮಾಡುವ ಮಾಧವನೇ, ಘೋರವಾದ ನರಕದುಃಖದಿಂದ ನನ್ನನ್ನು ರಕ್ಷಿಸು.

**ಧನ್ವಂತರೇ ಚಿದಾನಂದಸ್ವರೂಪಿನ್ ವಿಶ್ವಭೇಷಜ ।**
**ಅಪಥ್ಯಜಾನ್ ಮಹಾದುಃಖಾತ್ ಕುರು ಮಾಧವ ರಕ್ಷಣಮ್ ॥ ೬೯ ॥**

ಧನ್ವಂತರಿಯೇ, ಚಿದಾನಂದಸ್ವರೂಪಿಯೇ, ಜಗತ್ತಿನ ಪೋಷಕನೇ, ಮಾಧವನೇ ! ನನ್ನನ್ನು ಅಪಥ್ಯ ಭಕ್ಷಣದಿಂದಾಗುವ ದುಃಖದಿಂದ ರಕ್ಷಿಸು.

**ವಿತತಾತ್ಮನ್ ಮಹಾಶಕ್ತೇ ಬಲಜ್ಞಾನವೃಷಾನ್ವಯ ।**
**ದ್ವಂದ್ವಾದಿಭ್ಯೋ ಮಹಾದುಃಖಾತ್ ಕುರು ಮಾಧವ ರಕ್ಷಣಮ್ ॥ ೭೦ ॥**

ಸರ್ವತ್ರ ವ್ಯಾಪ್ತನೇ, ಅಪ್ರತಿಮಶಕ್ತಿಸ್ವರೂಪನೇ, ಬಲಜ್ಞಾನಾದಿಗಳಿಂದ ಪೂರ್ಣನೇ, ಮಾಧವನೇ ! ಜನನಮರಣಾದಿ ದ್ವಂದ್ವ ದುಃಖದಿಂದ ಕಾಪಾಡು.

**ಕೃಷ್ಣದ್ವೈಪಾಯನ ಹರೇ ಬುದ್ಧ ಕಲ್ಕಿನ್ ಶುಭಪ್ರದ ।**
**ಅಜ್ಞಾನಾದಿಭಯಾನ್ನಿತ್ಯಂ ಕುರು ಮಾಧವ ರಕ್ಷಣಮ್ ॥ ೭೧ ॥**

ವ್ಯಾಸರೂಪಿ ಹರಿಯೇ, ಬುದ್ಧರೂಪಿಯೇ, ಕಲ್ಕಿಯೇ, ಮಂಗಳದಾಯಕನೇ, ಮಾಧವನೇ ! ಅಜ್ಞಾನ-ಸಂಶಯಜ್ಞಾನ-ಭ್ರಾಂತಿ-ವಿಪರೀತ ಜ್ಞಾನಗಳಿಂದ ರಕ್ಷಿಸು.

**ಕೇಶವಾಚ್ಯುತ ಗೋವಿಂದ ದಾಮೋದರ ಜನಾರ್ದನ ।**
**ಪ್ರಾತಃ ಸಂಗವಮಧ್ಯಾಹ್ನೇ ಕುರು ಮಾಧವ ರಕ್ಷಣಮ್ ॥ ೭೨ ॥**

ಕೇಶವನೇ, ಅಚ್ಯುತನೇ, ಗೋವಿಂದನೇ, ದಾಮೋದರನೇ, ಜನಾರ್ದನನೇ, ಮಾಧವನೇ ! ಪ್ರಾತಃಕಾಲದಲ್ಲಿಯೂ, ಮಧ್ಯಾಹ್ನಕಾಲದಲ್ಲಿಯೂ ನನ್ನನ್ನು ಕಾಪಾಡು.

**ಕಾಲಮೂರ್ತೇ ಮಹಾವಿಷ್ಣೋ ಪದ್ಮನಾಭ ಗದಾಧರ ।**
**ಪ್ರದೋಷದುಷ್ಟಕಾಲೇಭ್ಯಃ ಕುರು ಮಾಧವ ರಕ್ಷಣಮ್ ॥ ೭೩ ॥**

ಕಾಲನಿಯಾಮಕನೇ, ಮಹಾವಿಷ್ಣುವೇ, ಪದ್ಮನಾಭನೇ, ಗದಾಧರನೇ, ಮಾಧವನೇ ! ಪ್ರದೋಷವೇ ಮುಂತಾದ ದುಷ್ಟ ಕಾಲಗಳಿಂದ ರಕ್ಷಿಸು.

**ಶ್ರೀವತ್ಸಲಾಂಛನ ಶ್ರೀಮಂಶ್ಚಕ್ರಪಾಣೇ ಭವಾರ್ತಿಹನ್ ।**
**ಅಜ್ಞಾನತಿಮಿರಾನ್ನಿತ್ಯಂ ಕುರು ಮಾಧವ ರಕ್ಷಣಮ್ ॥ ೭೪ ॥**

ಶ್ರೀವತ್ಸಚಿಹ್ನೆಯಿಂದ ಯುಕ್ತನಾದವನೇ, ಮಹದೈಶ್ವರ್ಯಪೂರ್ಣನೇ, ಚಕ್ರಧಾರಿಯೇ, ಸಂಸಾರ ಸಮುದ್ರದಿಂದ ಪಾರುಮಾಡಿಸುವವನೇ, ಮಾಧವನೇ ! ಅಜ್ಞಾನವೆಂಬ ಅಂಧಕಾರದಿಂದ ನನ್ನನ್ನು ರಕ್ಷಿಸು.

**ವಾಸುದೇವ ಜಗದ್ಯೋನೇ ಜಿತಾಮಿತ್ರ ಚತುರ್ಭುಜ ।**
**ಮಯಾಜ್ಞಾನಾತ್ಕೃತಾತ್ ಪಾಪಾತ್ ಕುರು ಮಾಧವ ರಕ್ಷಣಮ್ ॥ ೭೫ ॥**

ವಾಸುದೇವನೇ, ಜಗತ್ಕಾರಣನೇ, ಶತ್ರುಗಳನ್ನು ಜಯಿಸಿದವನೇ, ಚತುರ್ಭುಜನೇ, ಮಾಧವನೇ ! ಅಜ್ಞಾನವಶದಿಂದ ನಾನು ಮಾಡಿದ ಪಾಪದಿಂದ ಕಾಪಾಡು.

**ವೇದಸಾರ ಜಗತ್ತ್ರಾಣ ಸತ್ಯವಾಕ್ ಸತ್ಯವಿಕ್ರಮ ।**
**ಅನೃತಾಚ್ಚ ಮಹಾಪಾಪಾತ್ ಕುರು ಮಾಧವ ರಕ್ಷಣಮ್ ॥ ೭೬ ॥**

ವೇದಗಳ ಸಾರಭೂತನೇ, ಜಗತ್ತಿಗೆ ಶಕ್ತಿಪ್ರದನೇ, ಸತ್ಯವನ್ನೇ ನುಡಿಯು ವವನೇ, ಸತ್ಯವಿಕ್ರಮನೇ, ಮಾಧವನೇ ! ಅನೃತದಿಂದ ಉಂಟಾಗುವ ಮಹಾಪಾಪ ದಿಂದ ನನ್ನನ್ನು ಕಾಪಾಡು.

**ಸಮಸ್ತಪಾತಕಧ್ವಂಸಿನ್ ಸರ್ವಾವಸ್ಥಾನಿಯಾಮಕ ।**
**ತ್ವತ್ವಿಸ್ಮೃತೇರ್ಮಹಾಪಾಪಾತ್ ಕುರು ಮಾಧವ ರಕ್ಷಣಮ್ ॥ ೭೭ ॥**

ಸಮಸ್ತಪಾಪಗಳನ್ನೂ ನಾಶಮಾಡುವ ಪ್ರಭುವೇ, ಸರ್ವ ಅವಸ್ಥಾಗಳಿಗೂ ನಿಯಾಮಕನೇ, (ಜಾಗ್ರತ್, ಸುಷುಪ್ತಿ, ಸ್ವಪ್ನ, ಮೂರ್ಛೆ) ಮಾಧವನೇ ! ನಿನ್ನನ್ನು ಮರೆಯುವುದರಿಂದ ಬರುವ ಪಾಪದಿಂದ ನನ್ನನ್ನು ರಕ್ಷಿಸು.

**ಪರಾನಂದ ಪರಬ್ರಹ್ಮನ್ ಸತ್ಯಬೋಧಾವ್ಯಯಾತ್ಮಕ ।**
**ಅಧ್ಯಾನಾತ್ತೇ ಮಹಾಪಾಪಾತ್ ಕುರು ಮಾಧವ ರಕ್ಷಣಮ್ ॥ ೭೮ ॥**

ಅಪ್ರಾಕೃತ ಆನಂದ ಸ್ವರೂಪನೇ, ಅಪ್ರಾಕೃತ ಗುಣಪೂರ್ಣನೇ, ಸತ್ಯ ಬೋಧನೇ, ನಾಶರಹಿತನೇ, ಮಾಧವನೇ! ನಿನ್ನ ಧ್ಯಾನವನ್ನು ಮಾಡದೇ ಇರುವುದ ರಿಂದ ಬಂದ ಪಾಪವನ್ನು ನಾಶಮಾಡು.

**ಸರ್ವಕರ್ತಃ ಸರ್ವಸಾಕ್ಷಿನ್ ಶಿವರೂಪ ಶಿವಪ್ರದ ।**
**ಸುಶಿವಜ್ಞಾನರಾಹಿತ್ಯಾತ್ ಕುರು ಮಾಧವ ರಕ್ಷಣಮ್ ॥ ೭೯ ॥**

ಸರ್ವಕರ್ತನೇ, ಸರ್ವಸಾಕ್ಷಿಯೇ, ಮಂಗಳರೂಪನೇ, ಮಂಗಳಕರನೇ, ಮಾಧವನೇ ! ಶುಭಪ್ರದವಾದ ಯಥಾರ್ಥಜ್ಞಾನರಹಿತನಾದುದರಿಂದ ಮಾಡಿದ ಪಾಪವನ್ನು ನಾಶಮಾಡು.

**ಯಜ್ಞಭೃದ್ಯಜ್ಞಕೃದ್ಯಜ್ಞ ಯಜ್ಞಭುಗ್ಯಜ್ಞಸಾಧನ ।**
**ಕ್ರಿಯಾತ್ಯಾಗಾತ್ ಮಹಾಪಾಪಾತ್ ಕುರು ಮಾಧವ ರಕ್ಷಣಮ್ ॥ ೮೦ ॥**

ಯಜ್ಞಭೃತನೇ, ಯಜ್ಞಕರ್ತನೇ, ಯಜ್ಞಶಬ್ದವಾಚ್ಯನೇ, ಯಜ್ಞಫಲ ಭೋಜಕನೇ, ಯಜ್ಞಸಾಧಕನೇ ! ಸತ್ಕರ್ಮಗಳನ್ನು ತ್ಯಾಗಮಾಡಿದ ಫಲವಾಗಿ ಬಂದ ಪಾಪಗಳಿಂದ ನನ್ನನ್ನು ರಕ್ಷಿಸು.

**ಭಕ್ತಪ್ರಿಯಾಖಿಲಾಧಾರ ಪುಣ್ಯಕೀರ್ತೇ ನಿರಾಮಯ ।**
**ಅರತೇಸ್ತು ಮಹಾದೋಷಾತ್ ಕುರು ಮಾಧವ ರಕ್ಷಣಮ್ ॥ ೮೧ ॥**

ಭಕ್ತವತ್ಸಲನೇ, ಸಮಸ್ತಕ್ಕೂ ಆಶ್ರಯನೇ, ಪುಣ್ಯಕೀರ್ತಿಯೇ, ನಿರ್ದೋಷನೇ, ಮಾಧವನೇ ! ನಿನ್ನಲ್ಲಿ ಭಕ್ತಿಮಾಡದೇ ಇರುವುದರಿಂದ ಬಂದ ಮಹಾಪಾಪವನ್ನು ಪರಿಹರಿಸು.

**ನಿರಂಜನ ನಿರಾಕಾರ ನಿರ್ಗುಣಾನಂತನಿಶ್ಚಲ ।**
**ಗುಣತ್ರಯಕೃತಾತ್ ಬಂಧಾತ್ ಕುರು ಮಾಧವ ರಕ್ಷಣಮ್ ॥ ೮೨ ॥**

ದೋಷರಹಿತನೇ, ಪ್ರಾಕೃತರೂಪರಹಿತನೇ, ಪ್ರಾಕೃತವಾದ ಸತ್ವರಜಸ್ತಮೋ ಗುಣರಹಿತನೇ, ಅನಂತನೇ, ನಿಶ್ಚಲನೇ, ಮಾಧವನೇ ! ಗುಣತ್ರಯಬಂಧನದ ಫಲವಾಗಿ ನಾನು ಮಾಡಿರುವ ಪಾಪಗಳನ್ನು ಕ್ಷಮಿಸು.

**ಕ್ಷೇತ್ರಜ್ಞ ಕ್ಷೇತ್ರಕೃತ್ ಕ್ಷೇತ್ರಿನ್ ಕ್ಷೇತ್ರದೂರ ಕೃಪಾಕರ ।**
**ಕ್ಷೇತ್ರಜಾಚ್ಚ ಮಹಾಪಾಪಾತ್ ಕುರು ಮಾಧವ ರಕ್ಷಣಮ್ ॥ ೮೩ ॥**

ನಿನ್ನ ಆವಾಸಸ್ಥಾನವಾದ ಬ್ರಹ್ಮಾಂಡವನ್ನು ಸಾಕಲ್ಯೇನ ತಿಳಿದಿರುವವನೇ, ಬ್ರಹ್ಮಾಂಡಾದಿ ಸಮಸ್ತವಸ್ತುಗಳಿಗೂ ಸೃಷ್ಟಿಕರ್ತನೇ, ಕ್ಷೇತ್ರಶಬ್ದವಾಚ್ಯನೇ, ಕ್ಷೇತ್ರದಿಂದ ಅತ್ಯಂತ ಭಿನ್ನನೇ, ಕೃಪಾಳುವಾದ ಮಾಧವನೇ ! ಶರೀರವೆಂಬ ಕ್ಷೇತ್ರದಿಂದ ಮಾಡಲ್ಪಟ್ಟ ಮಹಾಪಾಪಗಳ ದೆಸೆಯಿಂದ ರಕ್ಷಿಸು.

**ಉತ್ತಿಷ್ಠನ್ ಪ್ರಸ್ವಪನ್ ಗಚ್ಛನ್ ಪಿಬನ್ ಭುಂಜನ್ ವಿಜೃಂಭಯನ್ ।**
**ಯತ್ಪಾಪಂ ಕುರುತೇ ತಸ್ಮಾತ್ ಕುರು ಮಾಧವ ರಕ್ಷಣಮ್ ॥ ೮೪ ॥**

ಏಳುವಾಗ, ನಿದ್ರಿಸುವಾಗ, ನಡೆಯುವಾಗ, ಕುಡಿಯುವಾಗ, ಊಟ ಮಾಡುವಾಗ, ಆಕಳಿಸುವಾಗ—ಈ ಕಾಲಗಳಲ್ಲಿ ನನ್ನಿಂದ ಮಾಡಲ್ಪಟ್ಟ ಪಾಪಗಳಿಂದ ರಕ್ಷಿಸು.

**ದಾಕ್ಷಿಣ್ಯಾದರ್ಥಲೋಭಾದ್ವಾ ಭಯಾದ್ವಾ ದುಷ್ಟಸಂಗತೇಃ ।**
**ಸ್ವಕೃತಾತ್ತುರ್ಜನ್ಯೈಃ ಪಾಪಾತ್ ಕುರು ಮಾಧವ ರಕ್ಷಣಮ್ ॥ ೮೫ ॥**

ದಾಕ್ಷಿಣ್ಯದಿಂದ, ಹಣದ ಲೋಭದಿಂದ, ಇನ್ನೊಬ್ಬರ ಭಯದಿಂದ, ದುರ್ಜನರ ಸಹವಾಸದಿಂದ, ನನ್ನಿಂದ ಮಾಡಲ್ಪಟ್ಟ ಪರರ ದೂಷಣಾದಿ ಪಾಪಗಳಿಂದ, ಮಾಧವನೇ ! ರಕ್ಷಿಸು.

**ಆಲಸ್ಯಾದ್ದುಷ್ಟಭಾವಾದ್ವಾ ಮೋಕ್ಷೋಪಾಯೋ ನ ಸಾಧಿತಃ ।**
**ಅಪರಾಧಾತ್ ದಯಾಸಿಂಧೋ ಕುರು ಮಾಧವ ರಕ್ಷಣಮ್ ॥ ೮೬ ॥**

ಆಲಸ್ಯದಿಂದ, ದುಷ್ಟಭಾವನೆಯಿಂದ, ಮೋಕ್ಷಕ್ಕೆ ಬೇಕಾದ ಸಾಧನೆಯನ್ನು ಮಾಡಿಕೊಳ್ಳದೇ ಇರುವುದರಿಂದ ಬಂದ ಪಾಪಗಳನ್ನು, ದಯಾಸಾಗರನಾದ ಮಾಧವನೇ ! ನಾಶಮಾಡು.

**ಅಗಮ್ಯಾಗಮನಾತ್ ಪಾಪಾತ್ ಅಭಕ್ಷ್ಯಭಕ್ಷಣಾದ್ವಿಭೋ ।**
**ಅಕಾರ್ಯಕರಣಾಚ್ಚಾಪಿ ಕುರು ಮಾಧವ ರಕ್ಷಣಮ್ ॥ ೮೭ ॥**

ಅಗಮ್ಯಸ್ಥಳಗಳಲ್ಲಿ ಸಂಚಾರಮಾಡಿದ ಪಾಪಗಳಿಂದ, ನಿಷಿದ್ಧವಸ್ತುಗಳನ್ನು ಭಕ್ಷಿಸಿದ್ದರಿಂದ ಆದ ಪಾಪಗಳಿಂದ, ನಿಷಿದ್ಧಕರ್ಮಾಚರಣೆಯಿಂದ ಮಾಡಿದ ಪಾಪಗಳಿಂದ, ಜಗದೊಡೆಯನಾದ ಮಾಧವನೇ ! ನನ್ನನ್ನು ರಕ್ಷಿಸು.

**ಭೋಗಲೌಲ್ಯಾತ್ ದುರಭ್ಯಾಸಾತ್ ದುಷ್ಟಾನಾಂ ತು ಸಮಾಗಮಾತ್ ।**
**ಪ್ರತಿಗ್ರಹಾತ್ ದುರಾಚಾರಾತ್ ಕುರು ಮಾಧವ ರಕ್ಷಣಮ್ ॥ ೮೮ ॥**

ವಿಷಯಾಸಕ್ತನಾದ ಕಾರಣದಿಂದ, ದುರಭ್ಯಾಸದ ಕಾರಣದಿಂದ, ದುರ್ಜನರ ಸಹವಾಸದಿಂದ, ದಾನ ಸ್ವೀಕಾರದಿಂದ, ಕೆಟ್ಟ ನಡತೆಯಿಂದ ನಾನು ಮಾಡಿರುವ ಪಾಪಗಳನ್ನು, ಮಾಧವನೇ ! ಕ್ಷಮಿಸು.

**ಅಗ್ನಿತ್ಯಾಗಾತ್ ದುರನ್ನಾಚ್ಚ ಸಂಧ್ಯಾಕರ್ಮಾದಿಲೋಪನಾತ್ ।**
**ಅಪೂಜನಾತ್ ಜಗನ್ಮೂರ್ತೇಃ ಕುರು ಮಾಧವ ರಕ್ಷಣಮ್ ॥ ೮೯ ॥**

ಅಗ್ನಿಕಾರ್ಯವನ್ನು ಪರಿತ್ಯಜಿಸುವ ಕಾರಣದಿಂದ, ಸಂಸ್ಕಾರರಹಿತ ಆಹಾರ ಸೇವನೆಯಿಂದ, ಸಂಧ್ಯಾವಂದನಾದಿ ಕರ್ಮಗಳನ್ನು ಆಚರಿಸದೇ ಇರುವ ಕಾರಣ

ದಿಂದ, ಜಗನ್ಮೂರ್ತಿಯಾದ ಶ್ರೀಹರಿಯನ್ನು ಪೂಜಿಸದೇ ಇದ್ದ ಕಾರಣದಿಂದ ಬಂದ ಪಾಪಗಳಿಂದ, ಮಾಧವನೇ ! ರಕ್ಷಿಸು.

**ಏಕಾದಶ್ಯಶನಾತ್ ಪಾಪಾತ್ ದ್ವಾದಶ್ಯಾಂ ಚ ದ್ವಿಭುಕ್ತಿತಃ ।**
**ಶ್ರಾದ್ಧಕರ್ಮಪರಿತ್ಯಾಗಾತ್ ಕುರು ಮಾಧವ ರಕ್ಷಣಮ್ ॥ ೯೦ ॥**

ಏಕಾದಶಿಯಲ್ಲಿ ಭೋಜನಮಾಡಿದ ಕಾರಣದಿಂದ, ದ್ವಾದಶಿಯಲ್ಲಿ ಎರಡು ಸಲ ಭೋಜನಮಾಡಿದ ಕಾರಣದಿಂದ, ಮಾತಾಪಿತೃಗಳ ಶ್ರಾದ್ಧಗಳನ್ನು ಬಿಟ್ಟ ಕಾರಣದಿಂದ ಬಂದ ಪಾಪಗಳಿಂದ, ಮಾಧವನೇ ! ರಕ್ಷಿಸು.

**ವೇದಭ್ರಂಶಾತ್ ವ್ರತಭ್ರಂಶಾತ್ ಕರ್ಮಭ್ರಂಶಾತ್ ದುರಾಗ್ರಹಾತ್ ।**
**ನಿಂದನಾತ್ ಗುರುಸಾಧೂನಾಂ ಕುರು ಮಾಧವ ರಕ್ಷಣಮ್ ॥ ೯೧ ॥**

ವೇದಭ್ರಷ್ಟನೂ, ವ್ರತಭ್ರಷ್ಟನೂ, ಸತ್ಕರ್ಮಭ್ರಷ್ಟನೂ, ದುರಾಗ್ರಹಿಯೂ, ಗುರುಗಳ ಹಾಗೂ ಸಾಧುಗಳ ನಿಂದಕನೂ ಆದ ಕಾರಣದಿಂದ ನನ್ನಿಂದ ಮಾಡಲ್ಪಟ್ಟ ಪಾಪಗಳಿಂದ ರಕ್ಷಿಸು.

**ಅನಾಶ್ರಮಾತ್ ಅನಧ್ಯಾಯಾತ್ ಅದಾನಾತ್ ದನುಜಾಂತಕ ।**
**ಅವಿಶ್ವಾಸಾತ್ ಗುರೌ ನಿತ್ಯಂ ಕುರು ಮಾಧವ ರಕ್ಷಣಮ್ ॥ ೯೨ ॥**

ದಾನವವೈರಿಯಾದ ಮಾಧವನೇ ! ಆಶ್ರಮೋಚಿತವಾದ ಕರ್ಮಗಳನ್ನು ತ್ಯಾಗಮಾಡಿದ ಕಾರಣದಿಂದ, ವೇದಾದಿ ಸಚ್ಛಾಸ್ತ್ರಗಳನ್ನು ಅಧ್ಯಯನ ಮಾಡದೇ ಇದ್ದ ಕಾರಣದಿಂದ, ದಾನಮಾಡದೇ ಇದ್ದ ಕಾರಣದಿಂದ, ಗುರುಗಳಲ್ಲಿ ವಿಶ್ವಾಸ ಮಾಡದೇ ಇದ್ದ ಕಾರಣದಿಂದ ಬಂದ ಪಾಪಗಳಿಂದ ಸದಾ ರಕ್ಷಿಸು.

**ದೂಷಣಾತ್ ಕುಲಕನ್ಯಾನಾಂ ವಿವಾಹಸ್ಯ ಚ ಕಂಟಕಾತ್ ।**
**ಆಶಾಚ್ಛೇದಾತ್ ಮಹಾಬಾಹೋ ಕುರು ಮಾಧವ ರಕ್ಷಣಮ್ ॥ ೯೩ ॥**

ಕುಲಸ್ತ್ರೀಯರನ್ನು ನಿಂದನೆ ಮಾಡಿದ ಪಾಪದಿಂದ, ವಿವಾಹ ಕಾರ್ಯಗಳಿಗೆ ವಿಘ್ನಮಾಡಿದ ಪಾಪದಿಂದ, ಪರರಿಗೆ ಆಸೆ ತೋರಿಸಿ ಅದನ್ನು ಪೂರ್ಣಮಾಡದೇ ಇದ್ದ ಪಾಪದಿಂದ, ಪರಾಕ್ರಮಶಾಲಿಯಾದ ಮಾಧವನೇ ! ರಕ್ಷಿಸು.

**ಭಾರ್ಯಾದ್ವಯಪರಿತ್ಯಾಗಾತ್ ಏಕಸ್ಯಾದುಷ್ಟಚೇತಸಾ ।**
**ಪರದಾರಾಭಿಮರ್ಶಾಚ್ಚ ಕುರು ಮಾಧವ ರಕ್ಷಣಮ್ ॥ ೯೪ ॥**

ಇಬ್ಬರು ಪತ್ನಿಯರಲ್ಲಿ ಒಬ್ಬಳು ದುರ್ಬುದ್ಧಿಯುವಳೆಂದು ತಿಳಿದು ಇಬ್ಬರನ್ನೂ ತ್ಯಜಿಸಿ ಪರಸ್ತ್ರೀಯಲ್ಲಿ ಅನುರಕ್ತನಾದ ಕಾರಣದಿಂದ ಬಂದ ಪಾಪದಿಂದ, ಮಾಧವನೇ ! ನನ್ನನ್ನು ರಕ್ಷಿಸು.

**ಮೇರುಮಂದರಸಮಾತ್ ಪಾಪಾತ್ ಉಪಪಾಪಾಚ್ಚ ಪಾತಕಾತ್ ।**
**ಬ್ರಹ್ಮಹತ್ಯಾದಿಪಾಪಾಚ್ಚ ಕುರು ಮಾಧವ ರಕ್ಷಣಮ್ ॥ ೯೫ ॥**

ಮೇರು ಮಂದರ ಪರ್ವತಗಳಿಗೆ ಸಮಾನವಾದ ಬ್ರಹ್ಮಹತ್ಯಾದಿ ಮಹಾ ಪಾಪಗಳಿಂದಲೂ, ಸಣ್ಣ ಪುಟ್ಟ ಪಾಪಗಳಿಂದಲೂ, ಮಾಧವನೇ ! ನನ್ನನ್ನು ರಕ್ಷಿಸು.

**ಇತೀದಂ ಕೀರ್ತಿತಂ ಪುಣ್ಯಂ ಮಹಾಪಾತಕನಾಶನಮ್ ।**
**ದಾರಿದ್ರ್ಯನಾಶನಂ ಧನ್ಯಂ ಆಯುಷ್ಯಂ ಚ ಯಶಸ್ಕರಮ್ ॥ ೯೬ ॥**
**ಯ ಇದಂ ಪಠತೇ ನಿತ್ಯಂ ಮಾಘಸ್ನಾನೇ ದ್ವಿಜೋತ್ತಮಃ ।**
**ಯನ್ಮಾಘೇ ಚ ಕೃತಂ ಪುಣ್ಯಂ ಕೋಟಿಕೋಟಿಗುಣಂ ಭವೇತ್ ॥ ೯೭ ॥**

ಪುಣ್ಯಪ್ರದವಾದ, ಮಹಾಪಾಪಗಳನ್ನೂ ನಾಶಮಾಡುವ ದಾರಿದ್ರ್ಯವನ್ನು ನಾಶಮಾಡುವ, ಧನ್ಯವಾದ, ಆಯುಸ್ಸನ್ನೂ, ಯಶಸ್ಸನ್ನೂ ಅಭಿವೃದ್ಧಿಗೊಳಿಸುವ "ಮಾಧವಸ್ತವರಾಜ"ವೆಂಬ ಸ್ತೋತ್ರವನ್ನು ನಿಮಗೆ ಹೇಳಿರುತ್ತೇನೆ. ಮಾಘಸ್ನಾನ ಮಾಡಿದ ಬ್ರಾಹ್ಮಣಶ್ರೇಷ್ಠನು ನಿತ್ಯವೂ ಇದನ್ನು ಪಠಿಸುವುದರಿಂದ ಮಾಘಮಾಸ ದಲ್ಲಿ ಮಾಡಿದ ಪುಣ್ಯಕರ್ಮಗಳು ಕೋಟಿ ಕೋಟಿಯಷ್ಟು ಅಧಿಕ ಫಲಕೊಡುತ್ತದೆ.

**ನಿತ್ಯಂ ಪ್ರಾತಃ ಪಠೇನ್ಮರ್ತ್ಯಃ ಶುಚಿಃ ಶಾಂತೋ ಜಿತೇಂದ್ರಿಯಃ ।**
**ದೇವೈರಪಿ ಸುಪೂಜ್ಯಃ ಸ್ಯಾತ್ ಸ ವೈ ಲೋಕೋತ್ತರೋತ್ತರಃ ॥ ೯೮ ॥**

ಶುಚಿಯಾಗಿ, ಶಾಂತಮನಸ್ಕರಾಗಿ, ಇಂದ್ರಿಯನಿಗ್ರಹವುಳ್ಳ, ಜನರು ಈ ಸ್ತೋತ್ರವನ್ನು ನಿತ್ಯದಲ್ಲಿಯೂ ಪಠಿಸಿದರೆ, ಅವರು ದೇವತೆಗಳಿಂದಲೂ ಸನ್ಮಾನಿತರಾಗಿ ಇನ್ನೂ ಹೆಚ್ಚಾದ ಅಭ್ಯುದಯವನ್ನು ಇತರ ಲೋಕಗಳಲ್ಲಿಯೂ ಪಡೆಯುವರು.

**ಮಾಧವಸ್ತವರಾಜಂ ತು ಯಃ ಪಠೇತ್ ನಿಯತಃ ಶುಚಿಃ ।**
**ಸ ಪುಮಾನ್ ತ್ರಿಷು ಲೋಕೇಷು ಸ ಏವ ಸ್ಯಾತ್ ಜನಾರ್ದನಃ ॥ ೯೯ ॥**

ಸ್ತೋತ್ರಗಳಲ್ಲಿ ಶ್ರೇಷ್ಠವಾದ ಈ ಸ್ತೋತ್ರವನ್ನು ಯಾರು ನಿಯಮದಿಂದ, ಶುಚಿಯಾಗಿದ್ದು, ನಿತ್ಯವೂ ಪಠಿಸುವರೋ ಅವರು ಮೂರು ಲೋಕಗಳಲ್ಲಿಯೂ ಶ್ರೇಷ್ಠರೆನಿಸಿ, ಜನನ-ಮರಣರಾಹಿತ್ಯವನ್ನು ಹೊಂದುವರು.

**ಪಠತಃ ಸ್ತವರಾಜಸ್ಯ ನ ಗ್ರಹಾದಿವ್ಯಥಾ ಭವೇತ್ ।**
**ಮಾಧವಸ್ತವರಾಜೋಽಯಂ ಪಾಪಗುಲ್ಮದವಾನಲಃ ॥ ೧೦೦ ॥**

ಪಾಪವೆಂಬ ಪೊದೆಗೆ ಬೆಂಕಿಯಂತೆ ಇರುವ ಈ "ಮಾಧವಸ್ತವರಾಜ"ವನ್ನು ಪಠಿಸುವವನಿಗೆ ಗ್ರಹಾದಿಗಳಿಂದ ಯಾವ ಭಯವೂ ಇರುವುದಿಲ್ಲ.

**ಧರ್ಮಾದಿಮೋಕ್ಷಪರ್ಯಂತಂ ಪುರುಷಾರ್ಥಸ್ಯ ಕಾರಣಮ್ ।**
**ಯಃ ಪಠೇತ್ ಪುಣ್ಯಕಾಲೇಷು ಸ್ತವರಾಜಂ ಮಹಾಮನುಮ್ ।**
**ಕಲ್ಪಕೋಟಿಸಹಸ್ರೇಷು ಮೋದತೇ ವಿಷ್ಣುಮಂದಿರೇ ॥ ೧೦೧ ॥**

ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಪುರುಷಾರ್ಥಗಳಿಗೆ ಸಾಧಕವಾದ ಈ ಸ್ತೋತ್ರರತ್ನವನ್ನು ಪುಣ್ಯಕಾಲಗಳಲ್ಲಿ ಯಾರು ಪಠಿಸುವರೋ ಅವರು ಸಹಸ್ರಾರು ಕೋಟಿ ಕಲ್ಪಗಳಲ್ಲಿಯೂ ವಿಷ್ಣುಲೋಕದಲ್ಲಿ ಆನಂದಿಸುವರು.

ಇತಿ ಶ್ರೀ ವಾಯುಪುರಾಣೇ ಮಾಘಮಾಸಮಾಹಾತ್ಮ್ಯೇ
ಪಂಚವಿಂಶೋಽಧ್ಯಾಯಃ

ಶ್ರೀವಾಯುಪುರಾಣಾಂತರ್ಗತ ಮಾಘಮಾಸ ಮಾಹಾತ್ಮ್ಯೆಯಲ್ಲಿ
ಇಪ್ಪತ್ತೈದನೇ ಅಧ್ಯಾಯವು ಸಮಾಪ್ತಿಯಾಯಿತು.

**ಗಾಲವ ಉವಾಚ—**

**ಏತತ್ ಸ್ತೋತ್ರಂ ಮಹಾಪುಣ್ಯಂ ವಸಿಷ್ಠಾಯ ಮಹಾತ್ಮನೇ ।**
**ವೇಧಾ ಉಪದಿದೇಶೇದಮಾರ್ತಾಯಾತ್ಮಜಶೋಕಿತಃ ॥ ೧ ॥**

ಗಾಲವರು ನುಡಿದರು :

ಈ ಮಹಾಪುಣ್ಯಕರವಾದ "ಮಾಧವಸ್ತವರಾಜ" ಸ್ತೋತ್ರವನ್ನು, ಮಕ್ಕಳನ್ನು ಕಳೆದುಕೊಂಡು ದುಃಖಿತನಾಗಿದ್ದ ವಸಿಷ್ಠರಿಗೆ ಬ್ರಹ್ಮದೇವರು ಉಪದೇಶ ಮಾಡಿದರು.

**ಕುಟೀರಸ್ಥಾ ಊಚುಃ—**

**ಕುತೋ ವ್ಯಾಭೂತ್ ಪುತ್ರಶೋಕೋ ಬ್ರಹ್ಮಿಷ್ಠಾಯ ಮಹಾತ್ಮನೇ ।**
**ಶೋಕನಾಶಃ ಕಥಮಭೂತ್ ಉಪದೇಶಾತ್ಪ್ರಜಾಪತೇಃ ॥ ೨ ॥**

ಕುಟೀರವಾಸಿಗಳು ಕೇಳಿದರು :

ಬ್ರಹ್ಮಜ್ಞಾನಿಗಳಾದ, ಮಹಾತ್ಮರಾದ, ವಸಿಷ್ಠರಿಗೆ ಪುತ್ರಶೋಕವು ಏಕೆ ಆಯಿತು ? ಬ್ರಹ್ಮದೇವರ ಉಪದೇಶದಿಂದ ಆ ಶೋಕವು ಹೇಗೆ ನಾಶವಾಯಿತು ?

**ಏತದಾಚಕ್ಷ್ವ ನೋ ಬ್ರಹ್ಮನ್ ಶುಶ್ರೂಷೂಣಾಂ ಮಹಾಮತೇ ।**

ಮಹನೀಯರೇ, ಬ್ರಹ್ಮಜ್ಞಾನಿಗಳೇ ! ನಿಮ್ಮ ಸೇವಕರಾದ ನಮಗೆ ತಿಳಿಸಿರಿ.

**ಗಾಲವ ಉವಾಚ—**

**ಕೋಪಾಂಶತೋ ಮಹಾತೇಜಾ ವಿಶ್ವಾಮಿತ್ರೋ ಮಹಾತಪಾಃ ॥ ೩ ॥**

**ಬ್ರಹ್ಮರ್ಷಿತ್ವಂ ಸಮಾಸಾದ್ಯ ವಸಿಷ್ಠಾಧಿಕ್ಯಕಾಂಕ್ಷಯಾ ।**
**ತಪಸ್ತೇಪೇ ಮಹಾಘೋರಂ ದಿವ್ಯಾಯುತಮತಂದ್ರಿತಃ ॥ ೪ ॥**

ಗಾಲವರು ಹೇಳಿದರು :

ಕೋಪಿಷ್ಠರೂ, ಮಹಾತೇಜಸ್ವಿಗಳೂ, ತಪಸ್ವಿಗಳೂ ಆದ ವಿಶ್ವಾಮಿತ್ರರು ತಾವೂ ಸಹ ಬ್ರಹ್ಮರ್ಷಿಗಳಾಗಿ ವಸಿಷ್ಠರಿಗಿಂತ ಶ್ರೇಷ್ಠರಾಗಬೇಕೆಂಬ ಇಚ್ಛೆಯಿಂದ ದೇವತೆಗಳ ಕಾಲದ ಪ್ರಕಾರ ಹತ್ತುಸಾವಿರ ವರ್ಷಗಳಕಾಲ ಘೋರವಾದ ತಪಸ್ಸನ್ನು ಆಚರಿಸಿದರು.

**ವಸಿಷ್ಠಾದಧಿಕಂ ಮೇನೇ ಹ್ಯಾತ್ಮಾನಂ ಚ ತಪೋಬಲಾತ್ ।**
**ಕದಾಚಿತ್ ಇಂದ್ರಸದಸಿ ದೇವೇಂದ್ರೋ ದೇವಸೇವಿತಃ ॥ ೫ ॥**
**ಮಹದೈಶ್ವರ್ಯಸಂಪನ್ನೋ ದೇವೇಂದ್ರೋ ವಾಕ್ಯಮಬ್ರವೀತ್ ।**

ನಂತರ ತಾವು ವಸಿಷ್ಠರಿಗಿಂತ ಶ್ರೇಷ್ಠರೆಂದು ತಿಳಿದುಕೊಂಡ ವಿಶ್ವಾಮಿತ್ರರು ತಮ್ಮ ತಪೋಬಲದಿಂದ ಒಂದು ಸಲ ಇಂದ್ರನ ಸಭೆಗೆ ಹೋದರು. ದೇವತೆಗಳಿಂದ ಸೇವೆಯನ್ನು ಸ್ವೀಕರಿಸುತ್ತಿದ್ದ, ಮಹದೈಶ್ವರ್ಯಸಂಪನ್ನನಾದ ದೇವೇಂದ್ರನು ಸಭಿಕರನ್ನು ಕುರಿತು ಹೇಳಿದನು—

**ಭೋ ಭೋ ದೇವಾಃ ಸಮಾಸೀನಾಃ ಋಷಯಃ ಸಂಶಿತವ್ರತಾಃ ॥ ೬ ॥**
**ಕೋ ಜೀವೇಷ್ವಧಿಕೋ ಜೀವಃ ಕೋ ವಾ ಬ್ರಹ್ಮಾಭಿಧೋ ಮತಃ ।**
**ಬ್ರಹ್ಮರ್ಷೀಣಾಂ ಚ ಕಃ ಶ್ರೇಷ್ಠೋ ದೇವರ್ಷೀಣಾಂ ಕ ಉತ್ತಮಃ ॥ ೭ ॥**

ನೆರೆದಿರುವ ದೇವತೆಗಳೇ, ಧೃಢವ್ರತರಾದ ಋಷಿಗಳೇ ! ಜೀವರುಗಳಲ್ಲಿ ಅತ್ಯಂತ ಶ್ರೇಷ್ಠನಾದವನು ಯಾರು ? ಸಮಸ್ತಗುಣಸಂಪೂರ್ಣನಾಗಿ ಸರ್ವೋತ್ತಮನೆಂದು ಕರೆಸಿಕೊಳ್ಳಲ್ಪಡುವವನು ಯಾರು ? ಬ್ರಹ್ಮರ್ಷಿಗಳಲ್ಲಿ ಶ್ರೇಷ್ಠರು ಯಾರು ? ದೇವರ್ಷಿಗಳಲ್ಲಿ ಶ್ರೇಷ್ಠರು ಯಾರು ?

**ಮಯಾ ಪೃಷ್ಟಾ ಮಹಾತ್ಮಾನೋ ಬ್ರೂತ ಪ್ರಶ್ನಸ್ಯ ಚೋತ್ತರವ್ ।**
**ಸದಸ್ಯೇವಂ ಮಹಾತ್ಮಾನೋ ಬಲಸೂದನಚೋದಿತಾಃ ॥ ೮ ॥**
**ನಾರದಂ ಚೋದಯಾಮಾಸುಃ ದಾತುಂ ಪ್ರತ್ಯುತ್ತರಂ ದ್ವಿಜಾಃ ।**
**ತೈರಾಜ್ಞಪ್ತೋ ಮಹಾಪ್ರಾಜ್ಞೋ ನಾರದೋ ವಾಕ್ಯಮಬ್ರವೀತ್ ॥ ೯ ॥**

ಮಹಾತ್ಮರೇ, ನನ್ನ ಪ್ರಶ್ನೆಗೆ ಉತ್ತರವನ್ನು ಹೇಳಿರಿ. ಹೀಗೆ ಇಂದ್ರನಿಂದ ಪ್ರಶ್ನಿತರಾದ ಮಹಾತ್ಮರಾದ ಸದಸ್ಯರು, ಪ್ರಶ್ನೆಗೆ ಉತ್ತರವನ್ನು ನೀಡಲು ನಾರದರನ್ನು ಕೇಳಿಕೊಂಡರು. ಸದಸ್ಯರಿಂದ ಆಜ್ಞಪ್ತರಾದ ಜ್ಞಾನಿಗಳಾದ ನಾರದರು ಹೀಗೆ ನುಡಿದರು—

**ಸರ್ವಜ್ಞಶ್ಚ ಸಭಾಮಧ್ಯೇ ಪ್ರಾಂಜಲಿಃ ಸತ್ಯಭಾಷಣಃ ।**

ಅವರು ಸರ್ವಜ್ಞರಾಗಿದ್ದರು, ಸತ್ಯವನ್ನೇ ಹೇಳುವವರು, ಕೈಮುಗಿದಿದ್ದರು—

**ತಿರ್ಯಗ್ಯೋನಿಮನುಷ್ಯೇಷು ಭೂಮಿಪೇಷು ಬುಧೇಷು ಚ ॥ ೧೦ ॥**

**ಭಾರತೀರಮಣಃ ಶ್ರೇಷ್ಠೋ ಜೀವೇಭ್ಯೋಽಯಂ ಪರಃ ಪುಮಾನ್ ।**
**ಪರಂಬ್ರಹ್ಮ ಹರಿಃ ಸಾಕ್ಷಾತ್ ವೇದವೇದ್ಯೋ ರಮಾಪತಿಃ ॥ ೧೧ ॥**

ತಿರ್ಯಕ್‌ಜೀವರಲ್ಲಿ, ಮನುಷ್ಯರಲ್ಲಿ, ಚಕ್ರವರ್ತಿಗಳಲ್ಲಿ, ಜ್ಞಾನಿಗಳಲ್ಲಿ, ಸಕಲ ಜೀವರಲ್ಲಿ ಭಾರತೀಪತಿಗಳಾದ ವಾಯುದೇವರೇ ಅತ್ಯಂತ ಶ್ರೇಷ್ಠರು ; ಸಮಸ್ತ ಗುಣಪೂರ್ಣನೂ, ವೇದಗಳಿಂದಲೇ ತಿಳಿಯಲ್ಪಡತಕ್ಕವನೂ, ಸಕಲರಿಗಿಂತಲೂ ಶ್ರೇಷ್ಠನಾದವನು ಸಾಕ್ಷಾತ್ ಲಕ್ಷ್ಮೀರಮಣನಾದ ಶ್ರೀಹರಿಯೇ.

**ಬ್ರಹ್ಮರ್ಷೀಣಾಂ ವಸಿಷ್ಠೋಽಯಂ ವೇದವೇದಾಂಗಪಾರಗಃ ।**
**ದೇವರ್ಷೀಣಾಂ ಅಹಂ ವಿದ್ವಾನ್ ಇತಿ ಮೇ ಭಾತಿ ನಿಶ್ಚಯಮ್ ॥ ೧೨ ॥**

ಬ್ರಹ್ಮರ್ಷಿಗಳಲ್ಲಿ ಸಕಲವೇದವೇದಾಂಗಗಳಲ್ಲಿ ಪಾರಂಗತರಾದ ವಸಿಷ್ಠರೇ ಶ್ರೇಷ್ಠರು ; ದೇವರ್ಷಿಗಳಲ್ಲಿ ಜ್ಞಾನಿಯಾದ ನಾನೇ ಶ್ರೇಷ್ಠನೆಂದು ನನ್ನ ನಿಶ್ಚಿತ ಅಭಿಪ್ರಾಯ.

**ಸಭ್ಯಾಸ್ತೇ ತುಷ್ಟುವುಃ ಸರ್ವೇ ಶ್ರುತ್ವಾ ನಾರದಭಾಷಿತಮ್ ।**
**ಅಯಮರ್ಥೋ ವೇದಸಾರಃ ಸಾಧುಸಾಧುವಚೋಽಬ್ರುವನ್ ॥ ೧೩ ॥**

ಸಭೆಯಲ್ಲಿದ್ದ ಸದಸ್ಯರೆಲ್ಲರೂ ನಾರದರ ಮಾತನ್ನು ಕೇಳಿ ಸಂತೋಷಗೊಂಡರು. ಇದೇ ಸರ್ವವೇದಗಳ ಸಾರ, ಭಲೇ, ಭಲೇ, ಎಂದು ನಾರದರನ್ನು ಹೊಗಳಿದರು.

**ವಿಶ್ವಾಮಿತ್ರಸ್ತು ತಚ್ಛ್ರುತ್ವಾ ವಸಿಷ್ಠಾಭ್ಯುದಯಂ ರುಷಾ ।**
**ಉತ್ತಸ್ಥೌ ಚ ಸಭಾಮಧ್ಯಾಚ್ಚಲದೋಷ್ಠೋ ವಿನಿಂದಯನ್ ॥ ೧೪ ॥**

ವಸಿಷ್ಠರು ಶ್ರೇಷ್ಠರೆಂಬ ಈ ನುಡಿಯನ್ನು ಕೇಳಿದ ವಿಶ್ವಾಮಿತ್ರರು ಕೋಪದಿಂದ ತುಟಿಗಳನ್ನು ನಡುಗಿಸುತ್ತಾ ಸಭಾಮಧ್ಯದಲ್ಲಿ ಎದ್ದುನಿಂತು ನಿಂದಿಸಿದರು—

**ಕ್ರೋಧಾದಾತಪ್ಯಮಾನಸ್ತಂ ನಾರದಂ ಪ್ರತ್ಯಭಾಷತ ।**
**ಯದ್ಯಪೀದಂ ತ್ವಯಾ ಪ್ರೋಕ್ತಂ ಹರಿರ್ಬ್ರಹ್ಮೇತಿ ನಾನ್ಯಥಾ ॥ ೧೫ ॥**
**ತಥಾ ಜೀವಾಧಿಕೋ ವಾಯುರೇತತ್ಸರ್ವಂ ನ ಸಂಶಯಃ ।**
**ಬ್ರಹ್ಮರ್ಷೀಣಾಂ ವಸಿಷ್ಠಶ್ಚ ದೇವರ್ಷೀಣಾಮಹಂ ತ್ವಿತಿ ॥ ೧೬ ॥**
**ಚಿತ್ರಮೇತದ್ದ್ವಯಂ ಪ್ರೋಕ್ತಂ ಋಷೀಣಾಂ ಯೇನ ಸಂಸದಿ ।**
**ಕಥಮಾತ್ಮಪ್ರಶಂಸಾ ವಾ ಕೃತಾ ಪಂಡಿತಮಾನಿನಾ ॥ ೧೭ ॥**

ಕ್ರೋಧದಿಂದ ನಡುಗುತ್ತಾ ನಾರದರಿಗೆ ಹೇಳಿದರು—ಪರಬ್ರಹ್ಮನಾದ ಶ್ರೀಹರಿಯು ಸರ್ವೋತ್ತಮನೆಂದೂ, ಜೀವೋತ್ತಮರು ವಾಯುದೇವರೆಂದೂ, ನೀವು ಹೇಳಿದ್ದು ಸತ್ಯವೇ, ಸಂಶಯವಿಲ್ಲ. ಆದರೆ ಬ್ರಹ್ಮರ್ಷಿಗಳಲ್ಲಿ ವಸಿಷ್ಠರು ಶ್ರೇಷ್ಠರೆಂದೂ, ದೇವರ್ಷಿಗಳಲ್ಲಿ ನಾನೇ (ನಾರದನೇ) ಶ್ರೇಷ್ಠನೆಂದೂ ಹೇಳಿದ್ದು ಕೇಳಿ ಈ ಋಷಿಗಳ ಸಭೆಯಲ್ಲಿ ಆಶ್ಚರ್ಯವಾಗಿದೆ. ಪಂಡಿತಮಾನಿಯಾದ ನೀವು ಆತ್ಮ ಪ್ರಶಂಸೆಯನ್ನು ಹೇಗೆ ಮಾಡಿಕೊಂಡಿರಿ ?

**ಮಾರ್ಕಂಡೇಯೇ ಸ್ಥಿತೇಽಪ್ಯಸ್ಮಿನ್ ಕಲ್ಪಸ್ಥಾಯಿನಿ ಸಂಸದಿ ।**
**ವಿದ್ಯಮಾನೇ ಸಭಾಮಧ್ಯೇ ಭೃಗೌ ಬ್ರಹ್ಮರ್ಷಿಸತ್ತಮೇ ॥ ೧೮ ॥**
**ಕಥಮಶ್ರಾವ್ಯನಾತ್ಮಜ್ಞ ವಸಿಷ್ಠೇನಾಭಿಮಾನಿನಾ ।**
**ನಾರದಃ ನಿತ್ಯವಾದೀತಿ ಪ್ರಸಿದ್ಧೋ ಭುವನತ್ರಯೇ ॥ ೧೯ ॥**

ಕಲ್ಪಸ್ಥಾಯಿಯಾದ ಮಾರ್ಕಂಡೇಯರು ಈ ಸಭೆಯಲ್ಲಿರುವಾಗ, ಬ್ರಹ್ಮರ್ಷಿಗಳಾದ ಭೃಗು ಋಷಿಗಳು ಇರುವಾಗ, ವಸಿಷ್ಠರು ಶ್ರೇಷ್ಠರೆಂದೂ, ನಾನೇ ದೇವರ್ಷಿಗಳಲ್ಲಿ ಶ್ರೇಷ್ಠನೆಂದೂ ಆತ್ಮಪ್ರಶಂಸೆಯನ್ನು ಹೇಗೆ ಮಾಡಿಕೊಂಡಿರಿ ? ಮೂರು ಲೋಕಗಳಲ್ಲಿಯೂ ನಾರದರು ಸತ್ಯವನ್ನೇ ನುಡಿಯುವವರೆಂದು ಪ್ರಸಿದ್ಧಿ ಇದೆ.

**ಆತ್ಮಾನಂ ವಾ ಕಥಂ ಸ್ತೌತಿ ಸನಕಾದಿಷು ಸತ್ಸ್ವಪಿ ।**
**ಬ್ರಹ್ಮರ್ಷಿತ್ವಂ ಮಯಾ ಪ್ರಾಪ್ತಂ ತಪಸಾ ದುಶ್ಚರೇಣ ಚ ॥ ೨೦ ॥**
**ಕಿಂ ನ ಜಾನಾತಿ ಲೋಕೋಽಯಂ ಪ್ರಥಿತಂ ಭುವನತ್ರಯೇ ।**
**ತಪಸಾ ಭೂರಿಶಃ ಶಕ್ತಿಃ ಬ್ರಹ್ಮಣಾ ಸಮವಿಕ್ರಮಃ ॥ ೨೧ ॥**

ಸನಕಾದಿಗಳು ಇಲ್ಲಿರುವಾಗ ನಿಮ್ಮನ್ನೇ ಪ್ರಶಂಸೆಯನ್ನು ಹೇಗೆ ಮಾಡಿಕೊಂಡಿರಿ ? ಇತರರಿಗೆ ಅಸಾಧ್ಯವಾದ ಕಠಿಣತಪಸ್ಸಿನ ಫಲವಾಗಿ ನಾನು ಬ್ರಹ್ಮರ್ಷಿ ಪದವಿಯನ್ನು ಪಡೆದಿರುತ್ತೇನೆ. ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾದ ಈ ವಿಷಯ ನಿಮಗೆ ಗೊತ್ತಿಲ್ಲವೇ ? ತಪಸ್ಸಿನ ಫಲವಾಗಿ ನಾನು ವಿಪುಲವಾದ ಶಕ್ತಿಯನ್ನು ಸಂಪಾದಿಸಿ ವಿಕ್ರಮದಲ್ಲಿ ಬ್ರಹ್ಮನಿಗೆ ಸರಿಸಮನಾಗಿರುತ್ತೇನೆ.

**ಕಿಂ ವಸಿಷ್ಠ ನ ಜಾನಾಸಿ ತ್ರಿಶಂಕೋರ್ವಿಷಯೇಽಪಿ ಮಾಮ್ ।**
**ದೃಷ್ಟ್ವಾಽಪ್ಯರ್ಥೋ ನ ಭಾತ್ಯೇವ ವೃಥಾಪಂಡಿತಮಾನಿನಃ ॥ ೨೨ ॥**

ವಸಿಷ್ಠರೇ, ತ್ರಿಶಂಕುವಿನ ವಿಚಾರದಲ್ಲಿ ನನ್ನ ಸಾಮರ್ಥ್ಯವು ನಿಮಗೆ ತಿಳಿಯಲಿಲ್ಲವೇ ? ತಾವೇ ಪಂಡಿತರೆಂದು ತಿಳಿದುಕೊಂಡಿರುವವರು ಇತರರ ಸಾಮರ್ಥ್ಯವನ್ನು ತಿಳಿದಿದ್ದರೂ ತೋರ್ಪಡಿಸಿಕೊಳ್ಳುವುದಿಲ್ಲ.

**ತನ್ನ ಜಾನಾಸಿ ಕಿಂ ಪ್ರಾಜ್ಞ ನಾರದೇತಿ ಚ ವಿಶ್ರುತಃ ।**
**ತ್ವಯಾ ತದ್ವಿಸ್ಮೃತಂ ಪೂರ್ವಂ ವಿಚಾರ್ಯಾದ್ಯ ಪುನರ್ವದ ॥ ೨೩ ॥**

ನಾರದರೇ ! ಇಂತಹ ಪ್ರಸಿದ್ಧ ವಿಚಾರವನ್ನೆಲ್ಲ ನೀವು ಅರಿತಿಲ್ಲವೆ ? ಅಥವಾ ಮರೆತಿರುವಿರೋ ? ಚೆನ್ನಾಗಿ ಆಲೋಚಿಸಿ ಪುನಃ ಹೇಳಿ.

**ಇತಿ ತದ್ವಚನಂ ಶ್ರುತ್ವಾ ಪ್ರಹಸಂಸ್ತಮುವಾಚ ಹ ।**
**ಭವತಶ್ಚ ವಸಿಷ್ಠಸ್ಯ ವಿವಾದಂ ತು ಪಿತಾಮಹಃ ॥ ೨೪ ॥**

**ತವೈವ ವಚಸಾ ಸದ್ಯೋ ಹರಿಷ್ಯತಿ ನ ಸಂಶಯಃ ।**
**ಬ್ರಹ್ಮಣಃ ಸದನಂ ಗಚ್ಛ ವಸಿಷ್ಠೇನಾಪಿ ಸಂಯುತಃ ॥ ೨೫ ॥**

ವಿಶ್ವಾಮಿತ್ರರ ಈ ಮಾತುಗಳನ್ನು ಕೇಳಿ, ನಾರದರು ನಗುತ್ತಾ ನುಡಿದರು— ವಿಶ್ವಾಮಿತ್ರರೇ, ನಿಮಗೂ ವಸಿಷ್ಠರಿಗೂ ಮಧ್ಯೆ ಇರುವ ವಿವಾದವನ್ನು ಚತುರ್ಮುಖ ಬ್ರಹ್ಮದೇವರು ನಿಮ್ಮ ಮಾತಿಗೆ ಅನುಸಾರಿಯಾಗಿಯೇ ಪರಿಹರಿಸುತ್ತಾರೆ. ವಸಿಷ್ಠರೊಡನೆ ಬ್ರಹ್ಮದೇವರ ಮಂದಿರಕ್ಕೆ ಪ್ರಯಾಣ ಮಾಡಿರಿ.

**ಸ ಏವ ವೇತ್ತಾ ಸರ್ವಸ್ಯ ಶೃಣು ಗಾಧಿತನೂದ್ಭವ ।**
**ಇತಿ ತದ್ವಚನಂ ಶ್ರುತ್ವಾ ದ್ರುತೋಚ್ಚಾರಣಗದ್ಗದಃ ॥ ೨೬ ॥**

**ಓಮಿತ್ಯುಕ್ತ್ವಾ ವಸಿಷ್ಠಂ ತಂ ಸಮಾಹ್ವಯದತಂದ್ರಿತಃ ।**
**ವಸಿಷ್ಠೋಽಪಿ ಹಸನ್ ತೇನ ವಿಶ್ವಾಮಿತ್ರೇಣ ಧೀಮತಾ ॥ ೨೭ ॥**

**ಸಾಕಂ ಯಯೌ ಬ್ರಹ್ಮಸದೋ ವಿಸ್ಮಯೋತ್ಫುಲ್ಲಲೋಚನಃ ।**
**ಅಪಶ್ಯತಾಂ ಮಹಾತ್ಮಾನೌ ಬ್ರಹ್ಮಾಣಂ ಮುನಿಸೇವಿತಮ್ ॥ ೨೮ ॥**

ಬ್ರಹ್ಮದೇವರಿಗೆ ಮಾತ್ರವೇ ಸಮಸ್ತವೂ ತಿಳಿದಿದೆ. ಹೀಗೆಂಬ ನಾರದರ ಮಾತನ್ನು ಕೇಳಿದ ವಿಶ್ವಾಮಿತ್ರರೂ ಕೂಡಲೇ ಗದ್ಗತಕಂಠದಿಂದ "ಆಗಲಿ" ಎಂದು ಹೇಳಿ ವಸಿಷ್ಠರನ್ನು ಆಹ್ವಾನಿಸಿದರು. ಅವರೂ ಸಹ ನಗುತ್ತಲೇ ಜ್ಞಾನಿಗಳಾದ ವಿಶ್ವಾಮಿತ್ರರಿಂದ ಸಹಿತರಾಗಿ ಅರಳಿದ ಕಣ್ಣುಗಳಿಂದ ಯುಕ್ತರಾಗಿ ಬ್ರಹ್ಮಲೋಕಕ್ಕೆ ಹೋದರು. ಅಲ್ಲಿ ಅನೇಕ ಮುನಿಗಳಿಂದ ಸೇವೆಯನ್ನು ಸ್ವೀಕರಿಸುತ್ತಿದ್ದ ಬ್ರಹ್ಮದೇವರನ್ನು ಜ್ಞಾನಿಗಳಾದ ವಸಿಷ್ಠ-ವಿಶ್ವಾಮಿತ್ರರು ಕಂಡರು.

**ಪ್ರಣಾಮಂ ಚಕ್ರತುಃ ತಸ್ಯ ಲೋಕಸ್ರಷ್ಟುರ್ಮಹಾತ್ಮನಃ ।**
**ಜಾನನ್ನಪಿ ಸ್ವಯಂ ಬ್ರಹ್ಮಾ ಮುನೀ ಪಪ್ರಚ್ಛ ಸನ್ಮನಾಃ ॥ ೨೯ ॥**

ಲೋಕವನ್ನು ಸೃಷ್ಟಿಸುವ ಮಹಾತ್ಮರಾದ ಬ್ರಹ್ಮದೇವರಿಗೆ ಇಬ್ಬರೂ ನಮಸ್ಕರಿಸಿದರು. ಎಲ್ಲವನ್ನೂ ತಿಳಿದಿದ್ದರೂ, ಬ್ರಹ್ಮದೇವರು ಋಷಿಗಳನ್ನು ವಿಚಾರಿಸಿದರು.

**ಕಿಮರ್ಥಂ ಆಗತೌ ಅತ್ರ ಭವಂತೌ ಲೋಕಪೂಜಿತೌ ।**
**ಯುವಯೋರಾನನೇ ಖಿನ್ನೇ ವದತಂ ಕಾರಣಂ ತ್ವಿತಿ ॥ ೩೦ ॥**

ಲೋಕಪೂಜ್ಯರಾದ ಋಷಿಗಳೇ! ಇಲ್ಲಿಗೇಕೆ ಬಂದಿರುವಿರಿ ? ನಿಮ್ಮ ಮುಖಗಳು ಖಿನ್ನವಾಗಿರಲು ಕಾರಣವೇನು ?

**ವಿಶ್ವಾಮಿತ್ರಸ್ತದಾ ಚಾಹ ಬ್ರಹ್ಮಾಣಂ ತಾಮ್ರಲೋಚನಃ ।**
**ಅನ್ಯೋನ್ಯಾಧಿಕ್ಯಬುದ್ಧ್ಯಾ ದ್ವೌ ವಿವದಂತೌ ಪರಸ್ಪರಮ್ ॥ ೩೧ ॥**
**ತವಾಭ್ಯಾಶಂ ರುಷಾಪನ್ನಾವಾವಾಂ ತ್ವಾಂ ಪ್ರಷ್ಟುಮೀಪ್ಸಿತೌ ।**
**ಯಚ್ಚ ಯಾವಚ್ಚ ಲೋಕಾನಾಂ ವೇತ್ತಾ ತ್ವಂ ನಾರದೋಽಬ್ರವೀತ್ ॥೩೨॥**
**ನಿರ್ಧಾರ್ಯ ಸತ್ಯಮೇವೋಕ್ತ್ವಾ ಕಲಹಂ ಚಾವಯೋರ್ಹರ ।**
**ವಿಶ್ವಾಮಿತ್ರವಚಃ ಶ್ರುತ್ವಾ ಬ್ರಹ್ಮಾ ವಾಕ್ಯಮಥಾಬ್ರವೀತ್ ॥ ೩೩ ॥**

ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ವಿಶ್ವಾಮಿತ್ರರು ಹೇಳಿದರು— ನಮ್ಮಿಬ್ಬರಲ್ಲಿ ಯಾರು ಶ್ರೇಷ್ಠರೆಂಬುದೇ ವಿವಾದ. ಇದರ ಇತ್ಯರ್ಥವಾಗಿ ಕೋಪಾವಿಷ್ಟರಾದ ನಾವು ನಿಮ್ಮನ್ನು ವಿಚಾರಿಸಲು ಬಂದಿರುತ್ತೇವೆ. ನೀವು ಲೋಕದಲ್ಲಿರುವ ಸಮಸ್ತ ವಿಚಾರವನ್ನೂ ತಿಳಿದಿರುವಿರಿ ಎಂದು ನಾರದರು ಹೇಳಿದರು. ಆದುದರಿಂದ ಎಲ್ಲವನ್ನೂ ವಿಮರ್ಶಿಸಿ ಸತ್ಯವನ್ನೇ ಹೇಳಿ ನಮ್ಮಿಬ್ಬರಲ್ಲಿಯೂ ಇರುವ ಕಲಹವನ್ನು ಪರಿಹರಿಸಿರಿ. ಹೀಗೆಂಬ ವಿಶ್ವಾಮಿತ್ರರ ಮಾತನ್ನು ಕೇಳಿ ಬ್ರಹ್ಮದೇವರು ಹೇಳಿದರು—

**ವಿವಾದನಿರ್ಣಯಃ ಕಾರ್ಯಃ ತ್ರಿಭಿಃ ಸಾಕ್ಷಿಭಿರನ್ವಿತಃ ।**
**ತಸ್ಮಾತ್ ಶೇಷಂ ತಥಾ ಸೂರ್ಯಂ ಅಗಸ್ತ್ಯಂ ಚ ಸಮಾಹ್ವಯ ॥ ೩೪ ॥**

ವಿಶ್ವಾಮಿತ್ರರೇ, ಈ ಕಲಹದ ನಿರ್ಣಯವು ಮೂರು ಮಂದಿ ಸಾಕ್ಷಿಗಳಿಂದ ಕೂಡಿ ಆಗಬೇಕು. ಆದುದರಿಂದ ಶೇಷದೇವರನ್ನೂ, ಸೂರ್ಯನನ್ನೂ ಹಾಗೂ ಅಗಸ್ತ್ಯರನ್ನೂ ಕರೆದುಕೊಂಡು ಬನ್ನಿರಿ.

**ಇತಿ ಬ್ರಹ್ಮವಿನಿರ್ದಿಷ್ಟೋ ವಿಶ್ವಾಮಿತ್ರೋಽಗಮದ್ದ್ರುತಮ್ ।**
**ನಾಗಲೋಕಮುವಾಚಾಥ ನಾಗೇಂದ್ರಂ ಮುನಿಪುಂಗವಃ ॥ ೩೫ ॥**
**ಅನ್ಯೋನ್ಯಾಧಿಕ್ಯವಿಷಯೇ ವಸಿಷ್ಠಸ್ಯ ಮಮಾಪಿ ಚ ।**
**ವಿವಾದೋಽಭೂನ್ನಿರ್ಣಯಾರ್ಥಂ ಸಾಕ್ಷ್ಯರ್ಥೇ ತಾನ್ ಸಮಾಹ್ವಯ ॥೩೬॥**
**ಇತಿ ಬ್ರಹ್ಮವಿನಿರ್ದಿಷ್ಟಃ ತವಾಂತಿಕಮುಗಾಮಹಮ್ ।**
**ತಸ್ಮಾದಾಗಚ್ಛ ತ್ವಂ ಶೇಷ ಸತ್ಯಂ ಬ್ರೂಹಿ ಸಭಾಂಗತಃ ॥ ೩೭ ॥**

ಬ್ರಹ್ಮನಿಂದ ಆಜ್ಞಪ್ತರಾದ ವಿಶ್ವಾಮಿತ್ರರು ಶೀಘ್ರವಾಗಿ ನಾಗಲೋಕಕ್ಕೆ ಬಂದು ನಾಗೇಂದ್ರನಾದ ಶೇಷದೇವರನ್ನು ಕುರಿತು ಹೇಳಿದರು—ನಾನು ಮತ್ತು ವಸಿಷ್ಠರು ಇವರಿಬ್ಬರಲ್ಲಿ ಯಾರು ಶ್ರೇಷ್ಠರೆಂಬ ವಿಷಯದಲ್ಲಿ ವಿವಾದವಿದೆ. ಅದನ್ನು ನಿರ್ಣಯಿಸಲು ಬ್ರಹ್ಮದೇವರು ನಿಮ್ಮನ್ನು ಸಾಕ್ಷಿಗಾಗಿ ಹೇಳಿಕಳಿಸಿದ್ದಾರೆ. ಆದ್ದರಿಂದ ನೀವು ಬ್ರಹ್ಮದೇವರ ಸಭೆಗೆ ಬಂದು ಸತ್ಯವನ್ನು ಹೇಳಿರಿ.

ಇತಿ ತದ್ವಚನಂ ಶ್ರುತ್ವಾ ವಿಶ್ವಾಮಿತ್ರಮುವಾಚ ಸಃ ।
ನ ಮಯಾ ಶಕ್ಯತೇ ಗಂತುಂ ಧೃತೋ ಮೂರ್ಧಸಹಸ್ರತಃ ॥ ೩೮ ॥

ಲೋಕಭಾರೋ ಹರೇರಾಜ್ಞಾ ಗಚ್ಛ ತ್ವಂ ಚ ಯಥಾಸುಖಮ್ ।
ಪಶ್ಚಾತ್ಸೂರ್ಯಂ ಯಯೌ ಧೀಮಾನಿತಿ ತೇನ ನಿರಾಕೃತಃ ॥ ೩೯ ॥

ವಿಶ್ವಾಮಿತ್ರರ ವಾಕ್ಯಗಳನ್ನು ಕೇಳಿದ ಬಳಿಕ ಶೇಷದೇವರು ನುಡಿದರು— ನನಗೆ ಬರಲು ಸಾಧ್ಯವಿಲ್ಲ. ಶ್ರೀಹರಿಯ ಆಜ್ಞಾಪ್ರಕಾರ ನನ್ನ ಸಹಸ್ರ ಫಣೆಗಳ ಮೇಲೆ ಲೋಕಗಳ ಭಾರವನ್ನು ಹೊತ್ತಿರುತ್ತೇನೆ. ಆದುದರಿಂದ ನೀವು ಹೋಗಿರಿ. ಶೇಷದೇವರಿಂದ ನಿರಾಕೃತರಾದ ವಿಶ್ವಾಮಿತ್ರರು ನಂತರ ಸೂರ್ಯನ ಬಳಿ ಹೋದರು.

ಸೂರ್ಯಂ ಸಮಾಹ್ವಯಾಂಚಕ್ರೇ ಸ್ವವೃತ್ತಾಂತಂ ನಿವೇದ್ಯ ಚ ।
ಸೋಽಪ್ಯಾಹ ನ ಮಯಾ ಶಕ್ಯಂ ಗಂತುಂ ಲೋಕಹಿತೇಚ್ಛಯಾ ॥ ೪೦ ॥

ನಿಯುಕ್ತೋ ಹರಿಣಾ ಪೂರ್ವಂ ಯಜ್ಞಾದ್ಯರ್ಥಂ ಮುನೀಶ್ವರ ।
ಕಾಲಜ್ಞಾನಾಯ ಜಗತಾಂ ತಸ್ಮಾದ್ಗಚ್ಛೇತಿ ತಂ ಮುನಿಮ್ ॥ ೪೧ ॥

ಸೂರ್ಯನಿಗೆ ತಮ್ಮ ವೃತ್ತಾಂತವನ್ನೆಲ್ಲ ತಿಳಿಸಿ ಬ್ರಹ್ಮನ ಬಳಿಗೆ ಬರಲು ಕೇಳಿಕೊಂಡರು. ಸೂರ್ಯನು ಋಷಿಗಳಾದ ವಿಶ್ವಾಮಿತ್ರರಿಗೆ ಹೇಳಿದನು— ನನಗೆ ಬ್ರಹ್ಮಸಭೆಗೆ ಹೋಗಲು ಸಾಧ್ಯವಿಲ್ಲ. ಲೋಕದಲ್ಲಿ ಯಜ್ಞಯಾಗಾದಿಗಳನ್ನು ಆಚರಿಸುವ ಜನರಿಗೆ ಕಾಲಜ್ಞಾನಾರ್ಥವಾಗಿ ಶ್ರೀಹರಿಯು ನನ್ನನ್ನು ನಿಯಮಿಸಿರುತ್ತಾನೆ. ಆದುದರಿಂದ ತಾವು ಹೊರಡಿರಿ.

ಅಗಸ್ತ್ಯಂ ಸ ಯಯೌ ಧೀಮಾನ್ ಸೂರ್ಯೇಣಾಪಿ ನಿರಾಕೃತಃ ।
ಮುನೀಂದ್ರಂ ಆಹ್ವಯಾಂಚಕ್ರೇ ಸೋಽಪ್ಯಾಹಾತ್ಮೀಯಸಂಸ್ಥಿತಿಮ್ ॥೪೨॥

ಅಗಸ್ತ್ಯೋಽಪಿ ತಮಾಹೇದಂ ಮುನೇ ಪೂರ್ವಂ ಕ್ಷಿತಿಸ್ತ್ವಿಯಮ್ ।
ಹಿರಣ್ಯಾಕ್ಷೇಣ ದೈತ್ಯೇನ ಕಟಿವದ್ಯಾನಿಕುಂಚ್ಯ ಚ ॥ ೪೩ ॥

ನೀತಾ ಪಶ್ಚಾದ್ವರಾಹೇಣ ಹತ್ವಾ ತಂ ಪುನರುದ್ಧೃತಾ ।
ಪ್ರಸಾರ್ಯ ಸ್ಥಾಪಿತಾ ಭೂಮಿಃ ಪೂರ್ವವದ್ಧರಿಣಾಂಜಸಾ ॥ ೪೪ ॥

**ಸಂಸ್ಕಾರಾತ್ ಕಟಿವದ್ಭೂಯಃ ಪುನಃ ಸಂಕುಚಿತಾ ಕ್ಷಿತಿಃ |**
**ಪೂರ್ವವತ್ ಸ್ಥಾಪನಾಯಾಹಂ ದಿಗ್ಗಜಾ ಅಪಿ ವಿಷ್ಣುನಾ || ೪೫ ||**

ಸೂರ್ಯನಿಂದಲೂ ನಿರಾಕೃತರಾದ ವಿಶ್ವಾಮಿತ್ರರು ಅಗಸ್ತ್ಯಋಷಿಗಳ ಬಳಿ ಬಂದು ಕರೆದರು. ಅವರೂ ಸಹ ತಮ್ಮ ಪರಿಸ್ಥಿತಿಯನ್ನು ಹೇಳಿದರು—"ಋಷಿಗಳೇ ಪೂರ್ವದಲ್ಲಿ ಹಿರಣ್ಯಾಕ್ಷನೆಂಬ ದೈತ್ಯನು ಈ ಭೂಮಿಯನ್ನು ಚಾಪೆಯಂತೆ ಸುತ್ತಿ ತೆಗೆದುಕೊಂಡು ಹೋದಾಗ ವರಾಹರೂಪದಿಂದ ಶ್ರೀಹರಿಯು ಅವನನ್ನು ಕೊಂದು ಭೂಮಿಯನ್ನು ಮೊದಲಿನಂತೆ ಹಾಸಿದನು. ಆದರೆ ಬಹಳ ದಿವಸಗಳ ಕಾಲ ಸುತ್ತಿದ್ದ ಪ್ರಯುಕ್ತ ಹರಡಿದ ಭೂಮಿಯು ಪುನಃ ಚಾಪೆಯಂತೆ ಸುತ್ತುಗೊಂಡಿತು. ಅದನ್ನು ಪುನಃ ಹರಡಿ ತಿರುಗಿ ಸುತ್ತಿಕೊಳ್ಳದಂತೆ ನೋಡಿಕೊಳ್ಳಲು ಶ್ರೀಹರಿಯು ನನ್ನನ್ನೂ, ದಿಗ್ಗಜಗಳನ್ನೂ ನಿಯಮಿಸಿರುವನು".

**ದಕ್ಷಿಣೋತ್ತರತಸ್ತೇನ ಸ್ಥಾಪಿತಾ ವಯಮತ್ರ ಹಿ |**
**ತತ್ರಾಪಿ ದಕ್ಷಿಣಾಶಾಯಾಂ ಸ್ಥಾಪಿತೋಽಹಂ ವ್ರಜೇತಿ ತವರ್ || ೪೬ ||**

ದಕ್ಷಿಣೋತ್ತರ ದಿಕ್ಕುಗಳಲ್ಲಿ ನಮ್ಮನ್ನು ಸ್ಥಾಪಿಸಿರುತ್ತಾನೆ. ಅದರಲ್ಲಿಯೂ ದಕ್ಷಿಣದಲ್ಲಿ ನನ್ನನ್ನೇ ಸ್ಥಾಪಿಸಿರುತ್ತಾನೆ. ಆದುದರಿಂದ ನನಗೆ ಬರಲು ಸಾಧ್ಯವಿಲ್ಲ; ನೀವು ಹೊರಡಿರಿ.

**ನಿರಾಕೃತಃ ತತಸ್ತೇನ ಬ್ರಹ್ಮಲೋಕಂ ಪುನರ್ಯಯೌ |**
**ಏತತ್ ವೃತ್ತಾಂತಮಖಿಲಂ ಬ್ರಹ್ಮಣೇಽಥ ನ್ಯವೇದಯತ್ || ೪೭ ||**

ಅಗಸ್ತ್ಯರಿಂದಲೂ ನಿರಾಕೃತರಾದ ವಿಶ್ವಾಮಿತ್ರರು ಪುನಃ ಬ್ರಹ್ಮಲೋಕಕ್ಕೆ ತೆರಳಿ ಬ್ರಹ್ಮದೇವರಿಗೆ ಎಲ್ಲ ಸಮಾಚಾರವನ್ನೂ ತಿಳಿಸಿದರು.

**ತೇ ನಾಗತಾ ಇತಿ ಶ್ರುತ್ವಾ ಸ್ವಾಧಿಕಾರೇಷು ಸಂಸ್ಥಿತಾಃ |**
**ವಸಿಷ್ಠಂ ಪ್ರೇಷಯಾಮಾಸ ತ್ರೀನಾಹೂಯ ಸಹತ್ರಿಭಿಃ || ೪೮ ||**
**ಏತೈಃ ಮಹಾತ್ಮಭಿಃ ಶೀಘ್ರಂ ಸಮಾಗಚ್ಛೇತಿ ವೈ ಪುನಃ |**
**ಸೋಽಪಿ ಶೇಷಾಂತಿಕಂ ಗತ್ವಾ ತಮಾಗಚ್ಛೇತಿ ಚಾಬ್ರವೀತ್ || ೪೯ ||**

ತಮ್ಮ ತಮ್ಮ ಅಧಿಕಾರಗಳಲ್ಲಿದ್ದ ಕಾರಣ ಅವರು ಬರಲಿಲ್ಲವೆಂಬ ವಿಚಾರವನ್ನು ಕೇಳಿ ಬ್ರಹ್ಮದೇವರು ವಸಿಷ್ಠರನ್ನು ಕಳಿಸಿದರು ; ಆಗ ಋಷಿಗಳಿಗೆ ಹೇಳಿದರು— "ಈ ಮೂರು ಜನ ಮಹಾತ್ಮರನ್ನೂ ಕರೆದುಕೊಂಡು ಅವರೊಡನೆ ನೀವೂ ಸಹ ಶೀಘ್ರವಾಗಿ ಇಲ್ಲಿಗೆ ಬನ್ನಿ". ವಸಿಷ್ಠರು ಶೇಷದೇವರ ಬಳಿ ಹೋಗಿ ಹೇಳಿದರು.

**ಸ್ವಾಧಿಕಾರಂ ನಿವೇದ್ಯಾಥ ನ ಶಕ್ಯಮಿತಿ ಸೋಽಬ್ರವೀತ್ ।**
**ತದೇತದ್ವಚನಂ ಶ್ರುತ್ವಾ ವಸಿಷ್ಠೋ ಬ್ರಹ್ಮನಂದನಃ ॥ ೫೦ ॥**
**ಸ್ವದಂಡಂ ಸ್ಥಾಪಯಾಮಾಸ ಲೋಕೋದ್ವಾಹನಕರ್ಮಣಿ ।**
**ದಂಡೇನ ಚ ಧೃತೇ ಲೋಕಭಾರೇ ತೇನ ಸಹಾಯಯೌ ॥ ೫೧ ॥**

ತನ್ನ ಅಧಿಕಾರನಿಮಿತ್ತದಿಂದ ಬರಲು ಸಾಧ್ಯವಿಲ್ಲವೆಂದು ಶೇಷದೇವರು ನುಡಿದರು. ಅದನ್ನು ಕೇಳಿದ ಬ್ರಹ್ಮಪುತ್ರರಾದ ವಸಿಷ್ಠರು ತಮ್ಮ ದಂಡವನ್ನು ಲೋಕಗಳನ್ನು ಹೊತ್ತುಕೊಂಡಿರುವ ಕಾರ್ಯಕ್ಕೆ ಸ್ಥಾಪಿಸಿದರು. ದಂಡವು ಲೋಕಭಾರವನ್ನು ಹೊರಲು, ಶೇಷದೇವರೊಡನೆ ಸೂರ್ಯನಲ್ಲಿಗೆ ಬಂದರು.

**ತತಃ ಸೂರ್ಯಂ ಸಮಾಸಾದ್ಯ ತಮಾಗಚ್ಛೇತಿ ಚಾಬ್ರವೀತ್ ।**
**ಸ್ವಾಧಿಕಾರಂ ನಿವೇದ್ಯಾಥ ನ ಶಕ್ಯಮಿತಿ ಸೋಽಬ್ರವೀತ್ ॥ ೫೨ ॥**

ಸೂರ್ಯನನ್ನು ಕರೆಯಲು ಅವನು ತನ್ನ ಅಧಿಕಾರಕರ್ಮಗಳನ್ನು ಹೇಳಿ ಬರಲು ಸಾಧ್ಯವಿಲ್ಲವೆಂದು ನುಡಿದರು.

**ತತ್ ಶ್ರುತ್ವಾ ಪ್ರಹಸನ್ ಮಂದಂ ವಸಿಷ್ಠೋ ಬ್ರಹ್ಮನಂದನಃ ।**
**ಉದಯಾದಿನಿದಾನತ್ವೇ ಶಾಟೀಂ ಸೂರ್ಯರಥೇಽಕ್ಷಿಪತ್ ॥ ೫೩ ॥**

ಅದನ್ನು ಕೇಳಿ ನಸುನಕ್ಕು, ಬ್ರಹ್ಮಪುತ್ರರಾದ ವಸಿಷ್ಠರು ಸೂರ್ಯೋದಯಾದಿ ಕೆಲಸಗಳ ನಿರ್ವಹಣೆಗಾಗಿ ಸೂರ್ಯನ ರಥದಲ್ಲಿ ತಮ್ಮ ವಸ್ತ್ರವನ್ನು ಇಟ್ಟರು.

**ಪಟೇನೈವಂ ಯಥಾಪೂರ್ವಂ ಸೂರ್ಯಕೃತ್ಯೇ ಕೃತೇ ಸತಿ ।**
**ಸಹಾಯಯೌ ಚ ಶೇಷೇಣ ಸೂರ್ಯೋ ಲೋಕಪಿತಾಮಹಮ್ ॥ ೫೪ ॥**

ವಸ್ತ್ರದಿಂದ ಸೂರ್ಯನ ಕೆಲಸಗಳು ನಡೆಯಲು ಪ್ರಾರಂಭಿಸಲು, ಸೂರ್ಯನು ಶೇಷದೇವರಿಂದ ಕೂಡಿ ಬ್ರಹ್ಮಲೋಕಕ್ಕೆ ಹೋದನು.

**ದಕ್ಷಿಣಾಶಾಂ ತತೋ ಗತ್ವಾ ಮುನಿಂ ಪ್ರಾಪ್ಯ ನಿವೇದ್ಯ ಚ ।**
**ಸ್ವವೃತ್ತಾಂತಂ ಯಥಾಪೂರ್ವಂ ತಮಾಗಚ್ಛೇತಿ ಚಾಬ್ರವೀತ್ ॥ ೫೫ ॥**

ನಂತರ ವಸಿಷ್ಠರು ದಕ್ಷಿಣಕ್ಕೆ ತೆರಳಿ, ಅಗಸ್ತ್ಯರನ್ನು ಕಂಡು, ತಮ್ಮ ಸಮಾಚಾರವನ್ನು ತಿಳಿಸಿ, ಬರಲು ಕೇಳಿಕೊಂಡರು.

**ಸ್ವಾಧಿಕಾರಂ ನಿವೇದ್ಯಾಥ ನ ಶಕ್ಯಮಿತಿ ಸೋಽಬ್ರವೀತ್ ।**
**ಅಗಸ್ತ್ಯಸ್ವಾಧಿಕಾರೇ ತು ಸ್ಥಾಪಿತಃ ಸ್ವಕಮಂಡಲುಃ ॥ ೫೬ ॥**

**ಕೃತೇ ಚೋದಕಪಾತ್ರೇಣ ಸ್ವಕೃತ್ಯೇ ಸ ಮುನಿಸ್ತಥಾ ।**
**ಸಾಕಂ ಚ ಸೂರ್ಯಶೇಷಾಭ್ಯಾಂ ಬ್ರಹ್ಮಲೋಕಂ ಅಥಾಯಯೌ ॥ ೫೭ ॥**

ತಮ್ಮ ಅಧಿಕಾರ ಕರ್ಮನಿಮಿತ್ತವನ್ನು ತಿಳಿಸಿ ಬರಲು ಸಾಧ್ಯವಿಲ್ಲವೆಂದು ಅಗಸ್ತ್ಯರು ತಿಳಿಸಲು, ಅವರ ಅಧಿಕಾರಕಾರ್ಯವನ್ನು ನಿರ್ವಹಿಸಲು ತಮ್ಮ ಕಮಂಡಲುವನ್ನು ಇಟ್ಟರು. ಆ ಕಮಂಡಲವು ತನ್ನ ಕೆಲಸವನ್ನು ಮಾಡಲು ಪ್ರಾರಂಭಿಸಲು ವಸಿಷ್ಠರು, ಅಗಸ್ತ್ಯರು-ಶೇಷ-ಸೂರ್ಯರಿಂದ ಕೂಡಿ ಬ್ರಹ್ಮಲೋಕಕ್ಕೆ ವಾಪಸ್ಸು ಬಂದರು.

**ತ್ರೀನಾಹೂಯ ಯಯೌ ಶೀಘ್ರಂ ವಸಿಷ್ಠೋ ಬ್ರಹ್ಮಣಃ ಪದಮ್ ।**
**ಉಪವೇಶ್ಯಾಥ ತಾನ್ ಬ್ರಹ್ಮಾ ವಿವಾದಂ ಚ ತಯೋರಥ ॥ ೫೮ ॥**

**ನಿವೇದ್ಯ ನಿಶ್ಚಿತಂ ಬ್ರೂತೇತ್ಯೇತಾನಾಹ ಪಿತಾಮಹಃ ।**
**ತ್ರಯಸ್ತೇ ಬ್ರಹ್ಮಣಾದಿಷ್ಟಾ ವಿಶ್ವಾಮಿತ್ರಮಥಾಬ್ರುವನ್ ॥ ೫೯ ॥**

ಆ ಮೂರು ಜನರನ್ನೂ ಕೂಡಿಸಿ ಬ್ರಹ್ಮದೇವರು ಅವರಿಗೆ ವಸಿಷ್ಠ-ವಿಶ್ವಾಮಿತ್ರರ ವಿವಾದವನ್ನು ವಿವರಿಸಿ ನಿಜವಾದ ವಿಷಯವನ್ನು ಹೇಳಿ ಎನ್ನಲು, ಆಗ ಮೂವರೂ ವಿಶ್ವಾಮಿತ್ರರಿಗೆ ಹೀಗೆ ಹೇಳಿದರು —

**ನ ಶಕ್ತಿಸ್ತೇ ಪುರಾ ಚಾಸೀತ್ ಅಸ್ಮದಾಹ್ವಾನಕರ್ಮಣಿ ।**
**ಅಸ್ಮದ್ಭಾರಂ ನಯಂಚೋಢ್ವಾ ಅಸ್ಮಾನಾಹೂಯ ಸಹಾಯಯೌ ॥ ೬೦ ॥**

**ಅನೇನ ಯುವಯೋರ್ವಿಪ್ರ ಸ್ಫುಟಮನ್ಯತರಸ್ಯ ಚ ।**
**ಆಧಿಕ್ಯಂ ತ್ವಂ ವಿಚಾರ್ಯೈವ ಮನಃ ಪೃಚ್ಛ ಪುನರ್ಮನೇ ॥ ೬೧ ॥**

ನಮ್ಮನ್ನು ಕರೆದುಕೊಂಡುಬರುವ ಕಾರ್ಯದಲ್ಲಿ ನಿಮಗೆ ಶಕ್ತಿ ಇದ್ದಿಲ್ಲ. ವಸಿಷ್ಠರಾದರೋ ನಮ್ಮ ಕಾರ್ಯಗಳನ್ನು ನಡೆಸುವ ಭಾರವನ್ನು ತಾವೇ ವಹಿಸಿಕೊಂಡರು. ವಿಪ್ರರೇ, ನಿಮ್ಮಿಬ್ಬರಲ್ಲಿ ಯಾರು ಶ್ರೇಷ್ಠರೆಂದು ಸ್ಪಷ್ಟವಾಗಿದೆ. ನಿಮ್ಮ ಮನಸ್ಸಿನಲ್ಲಿಯೇ ಪುನಃ ಆಲೋಚಿಸಿಕೊಳ್ಳಿರಿ.

**ಬ್ರೂಹಿ ಸತ್ಯಂ ತ್ವಮೇವೇತಿ ವ್ರೀಡಯಾ ನಿಶ್ಚಲೋಽಭವತ್ ।**
**ತೂಷ್ಣೀಂ ಸ್ಥಿತೇ ಗಾಧಿಸುತೇ ಹ್ರಿಯಾ ನಮ್ರಮುಖೇಽಪಿ ಚ ॥ ೬೨ ॥**

ನೀವೇ ಸತ್ಯವನ್ನು ಹೇಳಿರಿ ಎನ್ನಲು, ವಿಶ್ವಾಮಿತ್ರರು ನಾಚಿಕೆಯಿಂದ, ತಲೆತಗ್ಗಿಸಿ ಮಾತನ್ನಾಡದೇ ನಿಂತುಕೊಂಡರು.

**ಬ್ರಹ್ಮಣಾ ಚ ಅಭ್ಯನುಜ್ಞಾತಾ ಯಯುಃ ಸ್ಥಾನಂ ಯಥಾಕ್ರಮಮ್ ।**
**ಅಂತರ್ಜಾಜ್ವಲ್ಯಮಾನಃ ಸನ್ ವಿಶ್ವಾಮಿತ್ರೋ ಯಯೌ ಭುವಮ್ ॥ ೬೩ ॥**

ಬ್ರಹ್ಮದೇವರಿಂದ ಆಜ್ಞಪ್ತರಾದ ಅವರೆಲ್ಲರೂ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು. ವಿಶ್ವಾಮಿತ್ರರು ಮನಸ್ಸಿನಲ್ಲಿಯೇ ಕೋಪಗೊಂಡವರಾಗಿ ಭೂಲೋಕಕ್ಕೆ ಹೋದರು.

**ಪಿತರಂ ಚಾನುಮಂತ್ರ್ಯಾಥ ವಸಿಷ್ಠಃ ಸ್ವಾಶ್ರಮಂ ಯಯೌ ।**
**ವಿಶ್ವಾಮಿತ್ರಃ ತತಃ ಕ್ರೋಧಾತ್ ವಸಿಷ್ಠಸ್ಯಾಹಿತಂ ಸ್ಮರನ್ ॥ ೬೪ ॥**

**ಬ್ರಹ್ಮಣಶ್ಚ ಪ್ರತೀಕಾರಂ ಚಿಂತಯಂಸ್ತಪಸಿ ಸ್ಥಿತಃ ।**
**ತಪಸಸ್ತು ಮಹಿಮ್ನೈವ ಪ್ರತಿಸೃಷ್ಟಿಂ ಚಕಾರ ಹ ॥ ೬೫ ॥**

ತಂದೆಯ ಆಜ್ಞೆಯನ್ನು ಸ್ವೀಕರಿಸಿ ವಸಿಷ್ಠರು ತಮ್ಮ ಆಶ್ರಮಕ್ಕೆ ಹೋದರು. ವಿಶ್ವಾಮಿತ್ರರಾದರೋ ಕೋಪದಿಂದ ವಸಿಷ್ಠರಿಗೆ ಕೆಟ್ಟದ್ದನ್ನು ಬಗೆಯುತ್ತಾ, ಬ್ರಹ್ಮದೇವರಮೇಲೆ ಸೇಡನ್ನು ತೀರಿಸಿಕೊಳ್ಳಬೇಕೆಂಬ ಇಚ್ಛೆಯಿಂದ ತಪಸ್ಸಿಗೆ ಕುಳಿತರು. ತಪಸ್ಸಿನ ಪ್ರಭಾವದಿಂದ ಬೇರೆ ಸೃಷ್ಟಿಯನ್ನೇ ಮಾಡಿದರು.

**ಏತಸ್ಮಿನ್ನಂತರೇ ಕಶ್ಚಿದ್ರಾಕ್ಷಸೋ ಲೋಕಕಂಟಕಃ ।**
**ತಪಸಾ ತೋಷಯಾಮಾಸ ಶಂಕರಂ ಲೋಕಶಂಕರಮ್ ॥ ೬೬ ॥**

ಇದೇ ಕಾಲದಲ್ಲಿ ಲೋಕಕಂಟಕನಾದ ಒಬ್ಬ ರಾಕ್ಷಸನು ಲೋಕಕ್ಕೆ ಸುಖಪ್ರದರಾದ ರುದ್ರದೇವರನ್ನು ತಪಸ್ಸಿನಿಂದ ಸಂತೋಷಪಡಿಸಿದನು.

**ಶಿವೋಪ್ಯಾವಿರಭೂತ್ತಸ್ಯ ವೃಣೀಷ್ವ ಚ ವರಂ ತ್ವಿತಿ ।**
**ಆಹ ತಂ ಸ ಪುನಶ್ಚಾಹ ಮೋಕ್ಷಂ ದೇಹೀತಿ ಶಂಕರಮ್ ॥ ೬೭ ॥**

ರುದ್ರದೇವರು ಪ್ರೀತರಾಗಿ, ಅವನಿಗೆ ಪ್ರತ್ಯಕ್ಷರಾಗಿ, ಬೇಕಾದ ವರವನ್ನು ಬೇಡು ಎನ್ನಲು ಆ ರಾಕ್ಷಸನು " ನನಗೆ ಮೋಕ್ಷವನ್ನು ನೀಡಿರಿ " ಎಂದನು.

**ಶಂಕರೋಽಪಿ ವಿಚಾರ್ಯಾಥ ಪಾಪಿಷ್ಠಾಯೇದಮಬ್ರವೀತ್ ।**
**ದೇಹ್ಯಾಹಾರಂ ವಸಿಷ್ಠಾಯ ದುಷ್ಟಂ ಮಾನುಷಮಾಂಸತಃ ॥ ೬೮ ॥**

**ಸ್ವೇನೈವ ಕರ್ಮಣಾ ಸರ್ವೇ ಗತಿಂ ಸ್ವಾಂ ಯಾಂತಿ ನಿಶ್ಚಯಮ್ ।**
**ತ್ವದ್ಗತಿರ್ಭವಿತಾ ತೇನ ಕರ್ಮಣಾ ಸ್ವೇನ ನಿಶ್ಚಯಮ್ ॥ ೬೯ ॥**

ರುದ್ರದೇವರು ಚೆನ್ನಾಗಿ ಆಲೋಚಿಸಿ ಪಾಪಿಷ್ಠನಾದ ರಾಕ್ಷಸನಿಗೆ ಹೀಗೆಂದರು—ವಸಿಷ್ಠರಿಗೆ ದುಷ್ಟವಾದ ಮನುಷ್ಯರ ಮಾಂಸವನ್ನು ಆಹಾರವಾಗಿ ಕೊಡು. ಜಗತ್ತಿನಲ್ಲಿ ಸರ್ವರೂ ತಮ್ಮ ತಮ್ಮ ಕರ್ಮಗಳಿಗೆ ಅನುಸಾರವಾಗಿ ಗತಿಯನ್ನು ಹೊಂದುತ್ತಾರೆ. ಇದು ನಿಶ್ಚಯ. ನೀನು ನಾನು ಹೇಳಿದಂತೆ

ಮಾಡಿದರೆ ಆ ಕರ್ಮದ ಫಲವಾಗಿ ಮೋಕ್ಷವನ್ನು ನಿಶ್ಚಯವಾಗಿಯೂ ಪಡೆಯುತ್ತೀಯೆ.

**ಇತಿ ತಸ್ಮೈ ಪರಂ ದತ್ವಾ ತತ್ರೈವಾಂತರಧೀಯತ ।**
**ವಿಶ್ವಾಮಿತ್ರತಪಸ್ತುಷ್ಟೋ ವಸಿಷ್ಠಾಹಿತಕಾಂಕ್ಷಯಾ ॥ ೭೦ ॥**

**ತಸ್ಮೈ ವರಂ ದದೌ ಪೂರ್ವಂ ಕರಿಷ್ಯತಿ ತಪೋ ಮಹತ್ ।**
**ರಾಕ್ಷಸೋ ಮೋಕ್ಷಮುದ್ದಿಶ್ಯ ಕಶ್ಚಿಲ್ಲೋಕಸ್ಯ ಕಂಟಕಃ ॥ ೭೧ ॥**

ಹೀಗೆ ರಾಕ್ಷಸನಿಗೆ ವರವನ್ನು ಕೊಟ್ಟು ರುದ್ರದೇವರು ಅದೃಶ್ಯರಾದರು. ವಸಿಷ್ಠರಿಗೆ ಕೇಡನ್ನು ಬಯಸುತ್ತಿದ್ದ ವಿಶ್ವಾಮಿತ್ರರ ತಪಸ್ಸಿಗೆ ಸಂತುಷ್ಟರಾಗಿ ರುದ್ರದೇವರು ಅವರಿಗೂ ವರವನ್ನು ನೀಡಿದರು. ರಾಕ್ಷಸನಿಗೆ ಕೊಡುವ ಮುಂಚೆಯೇ ವಿಶ್ವಾಮಿತ್ರರಿಗೆ ಕೊಟ್ಟರು. ಕೊಡುವ ಕಾಲದಲ್ಲಿ ಋಷಿಗಳಿಗೆ ಹೀಗೆ ಹೇಳಿದರು— ಒಬ್ಬ ಲೋಕಕಂಟಕನಾದ ರಾಕ್ಷಸನು ಮೋಕ್ಷಬೇಕೆಂಬ ಇಚ್ಛೆಯಿಂದ ತಪಸ್ಸನ್ನಾಚರಿಸುತ್ತಾನೆ.

**ಜರಾಮರಣರಾಹಿತ್ಯಂ ಮೋಕ್ಷೇ ಜಾನನ್ ದುರಾಗ್ರಹಃ ।**
**ಮುಕ್ತಿಗಾ ಅಖಿಲಾ ನಾರ್ಯೋ ಬ್ರಹ್ಮಾಣ್ಯಾದ್ಯಾಃ ಸಹಸ್ರಶಃ ॥ ೭೨ ॥**

**ಆಕ್ರಮ್ಯಾನುಭವಿಷ್ಯೇಹಂ ನಾಸ್ಮದ್ದಂಡಧರಃ ಕ್ಷಮಃ ।**
**ಇತ್ಯೇತದ್ದುಷ್ಟಮನಸಾ ತಪೋ ದುಶ್ಚರಮಾಚರನ್ ॥ ೭೩ ॥**

ಅವನು ಮೋಕ್ಷವನ್ನು ಇಚ್ಛಿಸಲು ಕಾರಣವೇನೆಂದರೆ—ಮೋಕ್ಷಕ್ಕೆ ಹೋದವರಿಗೆ ಮುಪ್ಪು, ಹುಟ್ಟುವುದು, ಸಾಯುವುದು ಯಾವುದೂ ಇರುವುದಿಲ್ಲ. ಅಲ್ಲಿ ಸರಸ್ವತಿಯೇ ಮುಂತಾದ ಸಹಸ್ರಾರು ಸ್ತ್ರೀಯರನ್ನು ಅನುಭವಿಸುತ್ತೇನೆ. ನಾನೇ ಎಲ್ಲರಿಗೂ ಒಡೆಯನು. ನನ್ನನ್ನು ದಂಡಿಸುವವರು ಯಾರೂ ಇರುವುದಿಲ್ಲ— ಹೀಗೆ ದುಷ್ಟಮನಸ್ಸಿನಿಂದ ತಪಸ್ಸನ್ನು ಆಚರಿಸುವನು.

**ಸ್ಥಾಸ್ಯತ್ಯಚಿರಕಾಲೇನ ತಂ ಮಾರ್ಗಾತ್ ಭ್ರಂಶಯುನ್ನಹಮ್ ।**
**ದದಾಮ್ಯಸ್ಮೈ ವರಂ ಕ್ರೂರಂ ತೇನೇಷ್ಟಂ ತೇ ಭವಿಷ್ಯತಿ ॥ ೭೪ ॥**

ಇನ್ನು ಸ್ವಲ್ಪಕಾಲದಲ್ಲಿಯೇ ಇಂತಹ ತಪಸ್ಸನ್ನಾಚರಿಸುವ ರಾಕ್ಷಸನನ್ನು ಅವನ ಮಾರ್ಗದಿಂದ ಭ್ರಷ್ಟನನ್ನಾಗಿ ಮಾಡಲು ಅವನಿಗೆ ಅವನು ಕೇಳಿದ ವರವನ್ನು ನೀಡುತ್ತೇನೆ. ಇದರಿಂದ ನಿಮ್ಮ (ವಿಶ್ವಾಮಿತ್ರರ) ಇಚ್ಛೆಯೂ ನೆರವೇರಿದಂತೆ ಆಗುತ್ತದೆ.

**ತಸ್ಮಾತ್ ತಥಾ ವರಂ ಚಾಸ್ಮೈ ಶಂಕರೋಽದಾತ್ಸರಕ್ಷಸೇ ।**
**ಸ ರಾಕ್ಷಸೋ ಲಬ್ಧವರಃ ಸಂಚರನ್ ಭುವಿ ದುಷ್ಟಧೀಃ ॥ ೭೫ ॥**

**ಉಪಾಯಜ್ಞೋ ವಸಿಷ್ಠಾಯ ದಾತುಂ ಮಾನುಷಮಾಮಿಷಮ್ ।**
**ವಿಶ್ವಾಮಿತ್ರಾಶ್ರಮಂ ಪ್ರಾಪ್ತಃ ಸ್ವವೃತ್ತಾಂತಮಚೋದಯತ್ ॥ ೭೬ ॥**

ರುದ್ರದೇವರ ಸಂಕಲ್ಪವು ಈರೀತಿ ಇದ್ದ ಕಾರಣ ರಾಕ್ಷಸನಿಗೆ ವರವನ್ನು ಕೊಟ್ಟರು. ವರ ಪಡೆದ ಆ ನೀಚಬುದ್ಧಿಯು ಭೂಮಿಯಲ್ಲೆಲ್ಲ ಸುತ್ತುತ್ತಾ, ವಸಿಷ್ಠರಿಗೆ ನರಮಾಂಸವನ್ನು ಕೊಡುವ ಉಪಾಯವನ್ನು ಯೋಚಿಸುತ್ತಾ, ವಿಶ್ವಾಮಿತ್ರರ ಆಶ್ರಮಕ್ಕೆ ಬಂದು ಅವರಿಗೆ ತನ್ನ ಸಮಾಚಾರವನ್ನೆಲ್ಲ ತಿಳಿಸಿದನು.

**ತತ್ ಶ್ರುತ್ವಾ ವಚನಂ ಪಶ್ಚಾತ್ ಸಂತೋಷಾಕುಲಮಾನಸಃ ।**
**ಆಗತಂ ರಾಕ್ಷಸಂ ಧೀರಂ ಉಪಾಯಮಿತಿ ಸೋಽಬ್ರವೀತ್ ॥ ೭೭ ॥**

ತಾನು ಯೋಚಿಸಿದ ಉಪಾಯವನ್ನು ವಿಶ್ವಾಮಿತ್ರರಿಗೆ ಹೇಳಲು ಅವರು ದೃಢನಿಶ್ಚಯನಾದ ರಾಕ್ಷಸನಿಗೆ ಹೇಳಿದರು—

**ನೃಪಃ ಕಲ್ಮಾಷಪಾದೋಽಸ್ತಿ ಸಪ್ತದ್ವೀಪವತೀಶಿತಾ ।**
**ಗೃಹಂ ಗಚ್ಛ ಭವಾಶು ತ್ವಂ ಸೂದಃ ಪಾಕವಿಶಾರದಃ ॥ ೭೮ ॥**
**ಅಚಿರೇಣಾಸ್ಯ ಕಾಲೇನ ಪಿತುಃ ಶ್ರಾದ್ಧಂ ಭವಿಷ್ಯತಿ ।**
**ಪುರೋಹಿತೋ ವಸಿಷ್ಠಶ್ಚ ತತ್ರಾಗಚ್ಛತಿ ನಿಶ್ಚಿತಮ್ ॥ ೭೯ ॥**

ಸಪ್ತದ್ವೀಪಗಳಿಗೆ ಅಧಿಪತಿಯಾದ ಕಲ್ಮಾಷಪಾದನೆಂಬ ರಾಜನಿದ್ದಾನೆ. ನೀನು ಅವನ ಅರಮನೆಗೆ ಹೋಗು, ಅಡಿಗೆ ಕೆಲಸದಲ್ಲಿ ನಾನು ಕುಶಲನೆಂದು ಹೇಳಿ, ಅಲ್ಲಿ ಇರು. ಶೀಘ್ರದಲ್ಲಿಯೇ ಆ ರಾಜನ ತಂದೆಯ ಶ್ರಾದ್ಧ ಬರುತ್ತದೆ. ಆಗ ಪುರೋಹಿತರಾದ ವಸಿಷ್ಠರು ನಿಶ್ಚಯವಾಗಿಯೂ ಅಲ್ಲಿಗೆ ಬರುತ್ತಾರೆ.

**ತದಾ ತ್ವಂ ಕಪಟೇನೈವ ದೇಹಿ ಮಾನುಷಮಾಮಿಷಮ್ ।**
**ತತೋ ಮನೋರಥಸ್ತೇ ತು ಭವಿತಾ ನಾತ್ರ ಸಂಶಯಃ ॥ ೮೦ ॥**

ಆಗ ನೀನು ಕಪಟದಿಂದ ಅವರಿಗೆ ನರಮಾಂಸವನ್ನು ಕೊಡು. ನಿನ್ನ ಮನೋರಥವು ಪೂರ್ಣವಾಗುತ್ತದೆ. ಇದರಲ್ಲಿ ಸಂಶಯವಿಲ್ಲ.

**ಇತಿ ತೇನ ಸಮಾಜ್ಞಪ್ತೋ ಜಗಾಮಾಥ ಸ ರಾಕ್ಷಸಃ ।**
**ಕಲ್ಮಾಷಪಾದಸದನಂ ಸೂದರೂಪೀ ಚ ದುಷ್ಟಧೀಃ ॥ ೮೧ ॥**

ವಿಶ್ವಾಮಿತ್ರರಿಂದ ಆಜ್ಞಪ್ತನಾದ ದುಷ್ಟಬುದ್ಧಿಯ ಆ ರಾಕ್ಷಸನು ಅಡಿಗೆಯುವ ನಂತೆ ಕಲ್ಮಾಷಪಾದನ ಅರಮನೆಗೆ ಹೋದನು.

**ಪಶ್ಚಾದಲ್ಪೇನ ಕಾಲೇನ ತೇನಾಹೂತಃ ಪುರೋಹಿತಃ ।**
**ವಸಿಷ್ಠಃ ಶ್ರಾದ್ಧದಿವಸೇ ಚಾಜಗಾಮ ನೃಪಾಲಯಮ್ ॥ ೮೨ ॥**

ಮುಂದೆ ಸ್ವಲ್ಪಕಾಲದಲ್ಲಿಯೇ ರಾಜನಿಂದ ಆಹ್ವಾನಿಸಲ್ಪಟ್ಟ ಪುರೋಹಿತರಾದ ವಸಿಷ್ಠರು ಶ್ರಾದ್ಧದ ದಿನ ರಾಜನ ಅರಮನೆಗೆ ಹೋದರು.

**ತತೋ ಮಧ್ಯಾಹ್ನವೇಲಾಯಾಂ ಕಿಂಚಿನ್ಮಂದಾಯಿತೇ ರವೌ ।**
**ಬ್ರಾಹ್ಮಣಾನ್ ಭೋಜಯಾಮಾಸ ಸ ನೃಪಃ ಶ್ರದ್ಧಯಾನ್ವಿತಃ ॥ ೮೩ ॥**

ಶ್ರಾದ್ಧದ ದಿನ ಮಧ್ಯಾಹ್ನಕಾಲದಲ್ಲಿ ಬಿಸಿಲು ಸ್ವಲ್ಪ ಕಡಿಮೆಯಾದಾಗ ಶ್ರದ್ಧಾಳುವಾದ ರಾಜನು ಬ್ರಾಹ್ಮಣರಿಗೆ ಭೋಜನ ಮಾಡಿಸಿದನು.

**ತದಾ ಸ ರಾಕ್ಷಸಃ ಪಾಪೀ ವಸಿಷ್ಠಾಯ ಮಹಾತ್ಮನೇ ।**
**ಮೇಧ್ಯಸ್ಯ ಚಾಮಿಷಸ್ಯಾಥ ದುಷ್ಟಂ ಮಾನುಷಮಾಮಿಷಮ್ ॥ ೮೪ ॥**

ಆಗ ಪಾಪಿಯಾದ ಆ ರಾಕ್ಷಸನು ಮಹಾತ್ಮರಾದ ವಸಿಷ್ಠರಿಗೆ ದುರ್ಗಂಧದ ಕೆಟ್ಟ ನರಮಾಂಸವನ್ನು ಬಡಿಸಿದನು.

**ದದೌ ಪಶ್ಚಾತ್ ವಸಿಷ್ಠೋಽಪಿ ಜ್ಞಾತ್ವಾ ದುರ್ಗಂಧತೋಽಶುಚಿ ।**
**ಮಾಂಸಂ ಮಾನುಷಮಿತ್ಯೇವ ಕೋಪಾತ್ತಾಮ್ರವಿಲೋಚನಃ ॥ ೮೫ ॥**

**ಶಾಪಂ ದದೌ ನೃಪಾಯಾಸ್ಮೈ ಯತ್ತ್ವಯಾ ದತ್ತಮಾಮಿಷಮ್ ।**
**ಮಾನುಷಂ ತದ್ಭವಾಶು ತ್ವಂ ರಾಕ್ಷಸೋ ಮಾನುಷಾಶನಃ ॥ ೮೬ ॥**

ದುರ್ಗಂಧಯುಕ್ತವಾದ ಬಡಿಸಿದ ಮಾಂಸವು ನರಮಾಂಸವೆಂದು ತಿಳಿದುಕೊಂಡ ವಸಿಷ್ಠರು, ಕೋಪದಿಂದ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ರಾಜನಿಗೆ ಹೀಗೆ ಶಾಪ ಕೊಟ್ಟರು—ನನಗೆ ನರಮಾಂಸವು ಬಡಿಸಿದ ಕಾರಣದಿಂದ ನೀನು ಮನುಷ್ಯರನ್ನು ತಿನ್ನುವ ರಾಕ್ಷಸನಾಗಿ ಹುಟ್ಟು.

**ಮುನೇಃ ಕೋಪಂ ನೃಪಕೃತಂ ಜ್ಞಾತ್ವಾ ಸೂದಃ ಪಲಾಯಿತಃ ।**
**ನ ಮಯೇದಂ ಕೃತಂ ಕರ್ಮ ವೃಥಾ ಶಾಪಂ ದದೌ ಮುನಿಃ ॥ ೮೭ ॥**

**ಅವಿಚಾರ್ಯ ತತಃ ತಸ್ಮೈ ಪುನಃ ಶಾಪಂ ದದಾಮ್ಯಹಮ್ ।**
**ಇತಿ ಚಾಂಜಲಿನಾ ನೀರಮಾದಾಯೋತ್ಥಿತ ಆಶು ತಮ್ ॥ ೮೮ ॥**

**ಭಾರ್ಯಾ ನಿವಾರಯಾಮಾಸ ಗುರುರಿತ್ಯೇವ ಬೋಧಯತ್ ।**
**ಭಾರ್ಯಾ ನಿವಾರಿತೋ ನೀರಂ ಪಾದಯುಗ್ಮೇ ವ್ಯಚಿಕ್ಷಿಪತ್ ॥ ೮೯ ॥**

ರಾಜನಮೇಲೆ ಕೋಪ ಹೊಂದಿರುವುದನ್ನು ಕಂಡ ಅಡಿಗೆಯವನ ರೂಪದಲ್ಲಿದ್ದ ರಾಕ್ಷಸನು ಓಡಿಹೋದನು. ರಾಜನು ಯೋಚಿಸಿದನು: "ನನ್ನಿಂದ ಈ ದುಷ್ಟ ಕಾರ್ಯವು ನಡೆದಿಲ್ಲ. ಆದರೂ ವಸಿಷ್ಠರು ನನಗೆ ವ್ಯರ್ಥವಾಗಿ ಶಾಪ ಕೊಟ್ಟಿದ್ದಾರೆ. ಶಾಪ ಕೊಡಲಿಕ್ಕೆ ಮುಂಚೆ ಋಷಿಗಳು ವಿಚಾರವನ್ನೇ ಮಾಡಿಲ್ಲ" ಎಂದು ಯೋಚಿಸಿ "ನಾನೂ ಸಹ ವಸಿಷ್ಠರಿಗೆ ಶಾಪಕೊಡುತ್ತೇನೆ" ಎಂದು ಹೇಳುತ್ತಾ ಶೀಘ್ರವಾಗಿ ಬೊಗಸೆಯಲ್ಲಿ ನೀರನ್ನು ಹಿಡಿದುಕೊಂಡನು. ರಾಜಪತ್ನಿಯು ಬಂದು "ಅವರು ನಮ್ಮ ಗುರುಗಳು, ಹೀಗೆ ಶಾಪಕೊಡಬಾರದು" ಎಂದು ತಡೆದಳು. ಪತ್ನಿಯಿಂದ ತಡೆಯಲ್ಪಟ್ಟ ರಾಜನು ನೀರನ್ನು ತನ್ನ ಕಾಲುಗಳ ಮೇಲೆ ಹಾಕಿಕೊಂಡನು.

**ತೇನ ದಗ್ಧೌ ಚ ತತ್ಪಾದೌ ಅಭೂತ್ ಕಲ್ಮಾಷಪಾತ್ತತಃ ।**
**ಶಾಪಂ ದತ್ವಾ ವಸಿಷ್ಠೋಽಪಿ ಸ್ವಾಶ್ರಮಂ ಪ್ರತ್ಯಪದ್ಯತ ॥ ೯೦ ॥**

ಇದರಿಂದ ರಾಜನ ಎರಡು ಪಾದಗಳು ಸುಟ್ಟವು. ಈ ಕಾರಣದಿಂದ ಅವನಿಗೆ "ಕಲ್ಮಾಷಪಾದ"ನೆಂದು ಹೆಸರಾಯಿತು. ವಸಿಷ್ಠರಾದರೋ ರಾಜನಿಗೆ ಶಾಪ ಕೊಟ್ಟು ತಮ್ಮ ಆಶ್ರಮಕ್ಕೆ ತೆರಳಿದರು.

**ತತಃ ಸ ರಾಕ್ಷಸೋ ಭೂತ್ವಾ ವನೇ ಚೋವಾಸ ಭೂಮಿಪಃ ।**
**ರಾಕ್ಷಸೀಂ ಯೋನಿಮಾಪನ್ನಂ ವಿಶ್ವಾಮಿತ್ರಸ್ತು ಭೂಮಿಪಮ್ ॥ ೯೧ ॥**

**ಯೋನಿದೋಷಾದ್ದುಷ್ಟಬುದ್ಧಿಂ ಬೋಧಯಾಮಾಸ ಚಿತ್ರಧಾ ।**
**ದುರ್ಜನಾ ದಂಡಸಾಧ್ಯಾ ಹಿ ನ ಗುಣೇನ ಕದಾಚನ ॥ ೯೨ ॥**

**ಅಯಂ ಸ್ವಭಾವತೋ ದುಷ್ಟೋ ಮುನಿಶ್ಛದ್ಮೀ ದುರಾಗ್ರಹೀ ।**
**ವಿದ್ಯಮಾನಾಸು ಸಂಪತ್ಸು ವೃಥಾ ತಾಭಿರ್ವಿಯೋಜಿತಃ ॥ ೯೩ ॥**

ರಾಜನು ರಾಕ್ಷಸನಾಗಿ ಕಾಡಿನಲ್ಲಿ ತಿರುಗುತ್ತಿದ್ದನು. ವಿಶ್ವಾಮಿತ್ರರು ಅವನನ್ನು ಕಂಡು ಹೀಗೆ ಹೇಳಿದರು—"ದುರ್ಜನರನ್ನು ದಂಡದಿಂದಲೇ ನಿಗ್ರಹಿಸ ಬೇಕು, ಸೌಮ್ಯವಾದ ಮಾತುಗಳಿಂದ ಸಾಧ್ಯವಿಲ್ಲ. ವಸಿಷ್ಠರು ಸ್ವಭಾವದಿಂದ ದುಷ್ಟರು, ಋಷಿಯ ವೇಷವನ್ನು ಕಪಟದಿಂದ ಧರಿಸಿದ್ದಾರೆ, ದುರಾಗ್ರಹಿಗಳು. ಒಳ್ಳೆಯ ಐಶ್ವರ್ಯದಿಂದ ಯುಕ್ತನಾದ ನಿನ್ನನ್ನು ಐಶ್ವರ್ಯಭ್ರಷ್ಟನನ್ನಾಗಿ ಮಾಡಿದ್ದಾರೆ".

**ತ್ವಯಾ ತಸ್ಯ ತತೋ ದಂಡಃ ಕಾರ್ಯಃ ಸಮ್ಯಕ್ ನ ಸಂಶಯಃ ।**
**ಪುರಾ ತೇನ ನೃಪಃ ಶಪ್ತಃ ತ್ರಿಶಂಕುಶ್ಚ ಪೃಥುಶ್ರವಾಃ ॥ ೯೪ ॥**

**ಚಾಂಡಾಲತ್ವಂ ಸಮಾಪನ್ನೋ ದಿವಿ ದೇವೈರ್ನಿರಾಕೃತಃ ।**
**ಮಚ್ಛಿಷ್ಯೋಽಭೂತ್ತದಾಸೋಽಪಿ ತಸ್ಮೈ ಸ್ವರ್ಗಂ ಪ್ರಕಲ್ಪ್ಯ ಚ ॥ ೧೫ ॥**

ಆದುದರಿಂದ ನೀನು ಅವರಿಗೆ ಸರಿಯಾದ ಶಿಕ್ಷೆಯನ್ನು ಕೊಡಬೇಕು, ಸಂಶಯವಿಲ್ಲ. ಹಿಂದೆ ಈ ವಸಿಷ್ಠರಿಂದ ತ್ರಿಶಂಕು ಮತ್ತು ಪೃಥುಶ್ರವರೆಂಬ ರಾಜರು ಶಪ್ತರಾಗಿದ್ದರು. ತ್ರಿಶಂಕು ಚಾಂಡಾಲನಾಗಿ, ಸ್ವರ್ಗಕ್ಕೆ ಹೋದಾಗ, ದೇವತೆಗಳು ಅವನನ್ನು ಅಲ್ಲಿಂದ ನಿರಾಕರಿಸಿದರು. ನಂತರ ಅವನು ನನ್ನ ಶಿಷ್ಯನಾದನು. ನಾನು ಅವನಿಗಾಗಿ ಪ್ರತ್ಯೇಕ ಸ್ವರ್ಗವನ್ನೇ ಸೃಷ್ಟಿಮಾಡಿ ಕೊಟ್ಟೆ.

**ಸ್ಥಾಪಿತೋ ದಿವಿ ಚಾದ್ಯಾಪಿ ದೃಶ್ಯತೇ ಚಾಂಬರೇ ಜನೈಃ ।**
**ಗತ್ವಾ ತದಾಶ್ರಮಂ ರಾತ್ರೌ ತಸ್ಮಾತ್ತ್ವಂ ಪೃಥಿವೀಪತೇ ॥ ೧೬ ॥**

**ಶಕ್ತಿಜ್ಯೇಷ್ಠಾನ್ ಶತಂ ಪುತ್ರಾನ್ ಭಕ್ಷಯೇತಿ ಚ ಬೋಧಿತಃ ।**
**ಯೋನಿದೋಷಾತ್ ಸ ಭೂಪೋಽಪಿ ರಾತ್ರೌ ಗತ್ವಾ ತದಾಶ್ರಮಮ್॥೧೭॥**

ಅಲ್ಲಿ ತ್ರಿಶಂಕುವನ್ನು ಇಟ್ಟೆ. ಇವತ್ತಿಗೂ ಜನರಿಗೆ ಅದೆಲ್ಲ ಕಾಣುತ್ತದೆ. ನೀನು ವಸಿಷ್ಠರ ಆಶ್ರಮಕ್ಕೆ ರಾತ್ರಿಯಲ್ಲಿ ಹೋಗಿ ಅವರ ಮಕ್ಕಳಾದ ಶಕ್ತಿಯೇ ಮೊದಲಾದ ನೂರು ಜನ ಮಕ್ಕಳನ್ನು ತಿಂದುಬಿಡು" ಎಂದು ಬೋಧಿಸಿದರು. ರಾಕ್ಷಸನಾಗಿ ಹುಟ್ಟಿದ್ದ ಪ್ರಯುಕ್ತ ಆ ದೋಷದಿಂದ ರಾಜನು (ರಾಕ್ಷಸನು) ರಾತ್ರಿಯಲ್ಲಿ ವಸಿಷ್ಠರ ಆಶ್ರಮಕ್ಕೆ ಹೋದನು.

**ಸಮಾಧಿಸ್ಥೇ ವಸಿಷ್ಠೇ ಚ ತತ್ಪುತ್ರಾಂಶ್ಚೈವ ನಿದ್ರಿತಾನ್ ।**
**ಭಕ್ಷಯಾಮಾಸ ಪಾಪಾತ್ಮಾ ಕ್ಷಣೇನೈವ ಮಹಾಬಲಃ ॥ ೧೮ ॥**

ವಸಿಷ್ಠರು ಧ್ಯಾನಸಮಾಧಿಯಲ್ಲಿರುವಾಗ, ನೂರು ಮಂದಿ ಮಕ್ಕಳೂ ನಿದ್ರಿಸುತ್ತಿದ್ದಾಗ, ಮಹಾಬಲಶಾಲಿಯಾದ ಪಾಪಾತ್ಮನಾದ ರಾಕ್ಷಸನು ಮಕ್ಕಳನ್ನೆಲ್ಲ ತಿಂದುಬಿಟ್ಟನು.

**ಅರುಂಧತೀ ರುರೋದಾಥ ಲುಂಠಂತೀ ಬಹುಶೋ ಭುವಿ ।**
**ಆರ್ತಸ್ವರಂ ತತಃ ಶ್ರುತ್ವಾ ವಸಿಷ್ಠೋ ಬ್ರಹ್ಮನಂದನಃ ॥ ೧೯ ॥**

**ಮೃತಾನ್ ಪುತ್ರಾನ್ ತತೋ ದೃಷ್ಟ್ವಾ ಶೋಕಾನಲವಿದೂಷಿತಃ ।**
**ಮೂರ್ಛಾಮಾಪ ಮುಹೂರ್ತಂ ತು ಪುನಃ ಶೋಕಾದ್ರುರೋದ ಸಃ ॥**

ಅರುಂಧತಿಯು ದುಃಖಿತಳಾಗಿ ನೆಲದಮೇಲೆ ಹೊರಳಾಡುತ್ತಾ ಕೆಟ್ಟ ಧ್ವನಿಯಿಂದ ಅಳುತ್ತಿರಲು, ಈ ಧ್ವನಿಯಿಂದ ಎಚ್ಚೆತ್ತ ಬ್ರಹ್ಮದೇವರ ಮಕ್ಕಳಾದ

ವಸಿಷ್ಠರೂ ಸಹ ಸತ್ತುಹೋದ ಮಕ್ಕಳನ್ನು ನೋಡಿ, ತುಂಬಾ ದುಃಖಿತರಾಗಿ, ಒಂದು ಮುಹೂರ್ತ ಮೂರ್ಛೆ ಹೋದರು. ನಂತರ ಎದ್ದು ದುಃಖದಿಂದ ಅತ್ತರು.

**ಕಿಮರ್ಥಂ ವಿಧಿನಾ ದತ್ತಾ ಪುತ್ರಸಂಪತ್ಸುಖಾವಹಾ ।**
**ಹೃತಾ ತೇನೈವ ವಿಧಿನಾ ದಯಾಹೀನೇನ ವಾ ಕುತಃ ॥ ೧೦೧ ॥**

ಸುಖಸಂಪತ್ತನ್ನು ನೀಡುವ ಮಕ್ಕಳನ್ನು ಬ್ರಹ್ಮದೇವರು ಯಾತಕ್ಕೆ ಕೊಟ್ಟರು ? ಅವರೇ ಯಾತಕ್ಕೆ ಕಿತ್ತುಕೊಂಡರು. ಅವರು ದಯಾರಹಿತರು.

**ತಥೈವ ಜನ್ಮನಃ ಶುದ್ಧಾಃ ಸದಾಚಾರಾ ದಯಾಲವಃ ।**
**ಆಯುಃಕ್ಷಯೇ ಚ ಪಶ್ಯಾಮಿ ಕಾರಣಂ ಚ ವಿಧಿಂ ವಿನಾ ॥ ೧೦೨ ॥**

ಈ ಮಕ್ಕಳೆಲ್ಲರೂ ಜನ್ಮದಿಂದ ಪರಮ ಶುದ್ಧರು, ಸದಾಚಾರಶೀಲರು, ದಯಾವಂತರು. ಇವರ ಆಯುಸ್ಸು ಮುಗಿದು ಇವರು ಸಾಯಲು ವಿಧಿಯೇ ಕಾರಣ. ವಿಧಿಯನ್ನು ಬಿಟ್ಟು ಬೇರೆ ಕಾರಣವನ್ನು ನಾನು ಕಾಣೆ.

**ಶಕ್ತೇ ಭಗೋದಯೋ ಜಾತಸ್ತ್ವಾತೋತ್ತಿಷ್ಠ ಕ್ರಿಯಾಂ ಕುರು ।**
**ಗಚ್ಛ ಭದ್ರ ಕುಶಾರ್ಥಂ ತ್ವಂ ಮಯಾ ಸಾಕಂ ನದೀಂ ವ್ರಜ ॥ ೧೦೩ ॥**

ಶಕ್ತಿಯೇ, ಪ್ರೀತ್ಯಾಸ್ಪದನಾದ ಮಗನೇ, ಸೂರ್ಯೋದಯ ಆಗಿದೆ, ಏಳು, ನಿತ್ಯವಿಧಿಗಳನ್ನು ಆಚರಿಸು. ಭದ್ರನೇ, ದರ್ಭೆಗಳನ್ನು ತರಲು ನನ್ನೊಡನೆ ನದಿಗೆ ಹೊರಡು.

**ನಾಪ್ರಿಯಂ ಚೋದಿತಂ ಪಿತ್ರಾ ಮಾತ್ರಾ ವಾಪಿ ಕದಾಚನ ।**
**ಕುತೋ ವಾ ಸ್ನೇಹವಿಚ್ಛೇದಃ ಕುತೋ ಲೋಕಾಂತರಂ ತತಃ ॥ ೧೦೪ ॥**

ತಂದೆಯಾಗಲೀ, ತಾಯಿಯಾಗಲೀ, ನಿಮಗೆ ಅಪ್ರಿಯವಾದುದನ್ನು ಎಂದೂ ಮಾಡಲಿಲ್ಲ. ಹೀಗಿದ್ದೂ ನಮ್ಮ-ನಿಮ್ಮ ಸ್ನೇಹವು ಕತ್ತರಿಸಿಹೋಗಲು ಹಾಗೂ ನೀವು ಪರಲೋಕಕ್ಕೆ ಹೋಗಲು ಕಾರಣವೇನು ?

**ಶೂನ್ಯಾನಿ ವಾ ಕುಟೀರಾಣಿ ಕಥಂ ಪಶ್ಯಾಮಿ ಚಾನ್ವಹಮ್ ।**
**ಕಾಲೋ ಮಾಧ್ಯಾಹ್ನಿಕೋ ಜಾತಃ ಸ್ವಾನಾಗಚ್ಛ ಗೃಹಾನ್ಪ್ರತಿ ॥ ೧೦೫ ॥**

ನೀವಿಲ್ಲದೆ ಶೂನ್ಯವಾಗಿರುವ ಈ ಆಶ್ರಮಗಳನ್ನು ಹೇಗೆ ನೋಡಲಿ ! ಮಧ್ಯಾಹ್ನವಾಯಿತು, ಮಕ್ಕಳಿರಾ ನಿಮ್ಮ ಆಶ್ರಮಕ್ಕೆ ತೆರಳಿರಿ.

**ಭುಂಕ್ಷ್ವ ಮಾಂ ಬಾಧತೇ ಕ್ಷುಚ್ಚ ಕೋ ವೇತೋ ಮಾಂ ವದಿಷ್ಯತಿ ।**
**ಕಿಂ ಭುಕ್ತಾಶ್ಚ ಕುಮಾರಾ ಮೇ ಕಾನುದ್ದಿಶ್ಯ ವದಾಮ್ಯಹಮ್ ॥ ೧೦೬ ॥**

ತಂದೆಯೇ, ನಮಗೆ ಹಸಿವಾಗಿದೆ. ನೀವು ಊಟಮಾಡಿರಿ. ನಂತರ ನಾವು ಭೋಜನ ಮಾಡುತ್ತೇವೆಂದು ಇನ್ನುಮುಂದೆ ನನಗೆ ಯಾರು ಹೇಳುತ್ತಾರೆ? ಮಕ್ಕಳಿರಾ, ನಿಮ್ಮ ಊಟವಾಯಿತೆ? ಎಂದು ಯಾರನ್ನು ಕುರಿತು ಇನ್ನುಮುಂದೆ ನಾನು ಕೇಳಬೇಕು?

**ನಿರ್ಬಾಧಂ ವರ್ತತೇ ಚಾಂಕಃ ಲಬ್ಧ್ವಾರ್ವಾಲಫಲಂ ತ್ವಿತಿ ।**
**ಚಕ್ಷುರ್ಹೀನೇನ ವಿಧಿನಾ ದುರ್ಜನಾ ಲೋಕಕಂಟಕಾಃ ॥ ೧೦೭ ॥**

**ನ ದೃಷ್ಟಾನಿ ಕಟೆಸ್ಥಾ ಮೇ ಪುತ್ರಾದೃಷ್ಟಿಪಥಂ ಗತಾಃ ।**
**ಪುನರ್ಲುಠಂಶ್ಚ ಭೂಮೌ ಸಃ ಶಿರೋವಕ್ಷಸ್ತತಾಡ ಚ ॥ ೧೦೮ ॥**

ಮಕ್ಕಳನ್ನು ತೊಡೆಯಮೇಲೆ ಇನ್ನುಮುಂದೆ ಕೂಡಿಸಿಕೊಳ್ಳಲು ಸಾಧ್ಯವಿಲ್ಲದ ಕಾರಣ ನನ್ನ ತೊಡೆಗಳಿಗೆ ಭಾರದ ಬಾಧೆಯೇ ಇಲ್ಲವಾಯಿತು. ಇನ್ನು ಮುಂದೆ ನಾನು ಯಾರನ್ನು ಪ್ರೀತಿಸಲಿ? ಕಣ್ಣಿಲ್ಲದ ವಿಧಿಯು ಎಷ್ಟೋ ಜನ ಲೋಕಕಂಟಕರು ಇರಲು ಅವರನ್ನು ಬಿಟ್ಟು ನನ್ನ ಮಕ್ಕಳಿನ ಮೇಲೆ ತನ್ನ ಕಣ್ಣನ್ನು ಹಾಯಿಸಿದ್ದಾನೆ. ಹೀಗೆಂದು ಹಲುಬುತ್ತಾ ವಸಿಷ್ಠರು ಭೂಮಿಯಲ್ಲಿ ತಮ್ಮ ತಲೆಯನ್ನು ಚಚ್ಚಿಕೊಂಡರು, ಎದೆಯಮೇಲೆ ಕೈಯಿಂದ ಹೊಡೆದುಕೊಂಡರು.

**ಪ್ರಾಕ್ಷಿಪತ್ ಪಾಂಸು ಪಿಂಡಾನಿ ವೃಥಾ ನೇತ್ರೇತಿ ತಾಡಯನ್ ।**
**ಕುಟೀರಾಣ್ಯಥ ತೇಷಾಂ ಚ ದೃಷ್ಟ್ವಾ ದೃಷ್ಟ್ವಾ ಪುನಃ ಪುನಃ ॥ ೧೦೯ ॥**

ಕಣ್ಣುಗಳು ವ್ಯರ್ಥವೆಂದು ಅವುಗಳಲ್ಲಿ ಮಣ್ಣಿನ ಹೆಂಟೆಗಳನ್ನು ತುಂಬಿಕೊಳ್ಳುತ್ತಾ ಕಣ್ಣುಗಳನ್ನು ಹೊಡೆದುಕೊಂಡರು; ಮಕ್ಕಳ ಕುಟೀರಗಳನ್ನು ಬಾರಿಬಾರಿಗೂ ನೋಡುತ್ತಾ ಶೋಕಿಸಿದರು.

**ತತ್ರ ತತ್ರ ಚ ಹಾ ಚಕ್ರೇ ಪುತ್ರ ಪುತ್ರೇತಿ ವೈ ರುದನ್ ।**
**ಕುಂಡಲಾನಿ ತದೀಯಾನಿ ಗೃಹೀತ್ವಾ ವ್ಯಯುತಿ ಕ್ಷಣಮ್ ॥ ೧೧೦ ॥**

ಅಲ್ಲಲ್ಲಿ ಹಾಹಾಕಾರ ಮಾಡುತ್ತಾ, ಮಗನೇ, ಮಗನೇ, ಎಂದು ಅಳುತ್ತಾ ಮಕ್ಕಳ ಕುಂಡಲಗಳನ್ನು ಕೈಯಲ್ಲಿ ಹಿಡಿದುಕೊಂಡು ಅವರವರ ಹೆಸರುಗಳಿಂದ ಕ್ಷಣಕಾಲ ಕೂಗಿದರು.

**ಕ್ಷಣಂ ತೂಷ್ಣೀಗಲದ್ಬಾಷ್ಪೋ ರಾತ್ರಿಶೇಷಮನೀನಯತ್ ।**
**ಬಾಂಧವಾಃ ಪ್ರಾತರಾಗತ್ಯ ಸಾಂತ್ವನೈಃ ಪರ್ಯಸಾಂತ್ವಯನ್ ॥ ೧೧೧ ॥**

ಕಣ್ಣುಗಳಿಂದ ನೀರು ಸುರಿಸುತ್ತಾ ಕ್ಷಣ ಹೊತ್ತು ಸುಮ್ಮನೆ ಕುಳಿತಿರುತ್ತಿದ್ದರು. ಈ ರೀತಿಯಾಗಿ ಉಳಿದ ರಾತ್ರಿಯನ್ನು ಕಳೆದರು. ಪ್ರಾತಃಕಾಲ

ವಸಿಷ್ಠರ ಬಾಂಧವರು ಬಂದು ಸಮಾಧಾನಕರವಾದ ಉಕ್ತಿಗಳಿಂದ ಅವರ ದುಃಖವನ್ನು ಶಮನಮಾಡಿದರು.

**ಮಾಘೇ ಮಾಸಿ ಮೃತಾನಾಂ ಚ ಸುಪುತ್ರಾಣಾಂ ಮಹಾತ್ಮನಾಮ್ ।**
**ಕಥಂಚಿತ್ ಕಾರಯಾಮಾಸ ತೇಷಾಮೇವೌರ್ಧ್ವದೈಹಿಕಮ್ ॥ ೧೧೨ ॥**

ಮಾಘಮಾಸದಲ್ಲಿ ಮೃತರಾದ ಮಹಾತ್ಮರಾದ ಆ ಸುಪುತ್ರರಿಗಾಗಿ ವಸಿಷ್ಠರು ತಮ್ಮ ಶಕ್ತ್ಯನುಸಾರವಾಗಿ ಉತ್ತರಕ್ರಿಯಾದಿಗಳನ್ನು ಮಾಡಿದರು.

**ಪ್ರತ್ಯಹಂ ಸ ಗೃಹಂ ಗಚ್ಛನ್ ಮೃತಪುತ್ರಾನಥಾಹ್ವಯತ್ ।**
**ಪ್ರಲಪನ್ ಪ್ರತಪನ್ನಿತ್ಯಂ ಸೋಢುಂ ನೈವ ಶಶಾಕ ಸಃ ॥ ೧೧೩ ॥**

ನಿತ್ಯವೂ ಮನೆಗೆ ಬಂದ ಕೂಡಲೇ ಸತ್ತುಹೋದ ಮಕ್ಕಳ ಹೆಸರುಗಳನ್ನು ಉಚ್ಚರಿಸುತ್ತಾ ಕರೆಯುತ್ತಿದ್ದರು, ದುಃಖಾತಿಶಯದಿಂದ ಗೋಳಾಡುತ್ತಿದ್ದು ಅದನ್ನು ತಡೆದುಕೊಳ್ಳಲು ಅಸಮರ್ಥರಾದರು.

**ಮರಣಾಯೋದ್ಯಮಂ ಚಕ್ರೇ ವಿಷಂ ಪೂರ್ವಂ ಜಘಾಸ ಸಃ ।**
**ಭುಕ್ತಂ ಜೀರ್ಣಂ ವಿಷಂ ತಸ್ಯ ಭೋಕ್ತವ್ಯತ್ವಾನ್ಮಹಾತ್ಮನಃ ॥ ೧೧೪ ॥**

ತಮ್ಮ ಪ್ರಾಣವನ್ನೇ ತೆಗೆದುಕೊಳ್ಳಲು ಪ್ರಯತ್ನಿಸಿದರು. ಅದಕ್ಕಾಗಿ ವಿಷವನ್ನು ಕುಡಿದರು. ಮಹಾತ್ಮರಾದ ಕಾರಣ ಅವರಿಗೆ ವಿಷವು ತಿನ್ನಲ್ಪಡತಕ್ಕ ವಸ್ತುವಾಗಿ ಜೀರ್ಣವಾಯಿತು.

**ಪ್ರವಿವೇಶಾನಲಂ ಪಶ್ಚಾತ್ ಮೇರುಮಂದರಸನ್ನಿಭಮ್ ।**
**ಶಾಂತೋಽಭವತ್ತತೋ ವಹ್ನಿಃ ಭೋಕ್ತವ್ಯತ್ವಾತ್ ಮಹಾತ್ಮನಃ ॥ ೧೧೫ ॥**

ಮೇರು-ಮಂದರ ಪರ್ವತಗಳಿಗೆ ಸಮನಾದ ಎತ್ತರವುಳ್ಳ ಅಗ್ನಿಯನ್ನು ಸಿದ್ಧಗೊಳಿಸಿ ಅದರಲ್ಲಿ ಪ್ರವೇಶ ಮಾಡಿದರು. ಆ ಅಗ್ನಿಯು ಇತರ ಮಾಹಾತ್ಮ್ಯೆಯ ಕಾರಣವಾಗಿ ಪ್ರವೇಶಯೋಗ್ಯವಾಗಿ ಶಾಂತವಾಯಿತು.

**ಮೇರುಶೃಂಗಂ ಸಮಾರುಹ್ಯ ಪಪಾತಾಧಸ್ತಲೇ ಮುನಿಃ ।**
**ತತ್ರಾಪಿ ನ ಮೃತಿಂ ಪ್ರಾಪ್ತೋ ಭೋಕ್ತವ್ಯತ್ವಾಚ್ಚ ಕರ್ಮಣಃ ॥ ೧೧೬ ॥**

ಮೇರುಪರ್ವತದ ಕೋಡುಗಲ್ಲಿನಮೇಲೆ ಹತ್ತಿ ಅಲ್ಲಿಂದ ಭೂಮಿಗೆ ಬಿದ್ದರು. ಆದಾಗ್ಯೂ ಸಾಯಲಿಲ್ಲ; ಪ್ರಾರಬ್ಧಕರ್ಮವನ್ನು ಅನುಭವಿಸಬೇಕಾಗಿದ್ದುದರಿಂದ ಏನೂ ಅಪಾಯವಾಗಲಿಲ್ಲ.

**ಸಿಂಹವ್ಯಾಘ್ರಾದಿವದನೇ ಪ್ರವೇಶಮಪಿ ಚೇಚ್ಛತಿ ।**
**ಜಗೃಹುಃ ನೈನಮಾಶಾಸುಃ ಮೃಗಾಃ ಕ್ವಾಪಿ ಕದಾಚನ ॥ ೧೧೭ ॥**

ಸಿಂಹ, ಹುಲಿ ಮುಂತಾದ ಕ್ರೂರಮೃಗಗಳ ಬಾಯಲ್ಲಿ ಬಿದ್ದರೂ ಸಹ ವಸಿಷ್ಠರನ್ನು ತಿನ್ನಲು ಯಾವ ಮೃಗವೂ ಸಮರ್ಥವಾಗಲಿಲ್ಲ.

**ಗಿರಿಂ ಬದ್ಧ್ವಾ ಉದರೇ ಪಶ್ಚಾತ್ ಪಯೋಧೌ ಸ ಪಪಾತ ಚ ।**
**ತತ್ರಾಪಿ ನ ಮೃತಿಂ ಪ್ರಾಪ ಭೋಕ್ತ್ರವ್ಯತ್ವಾಚ್ಚ ಕರ್ಮಣಃ ॥ ೧೧೮ ॥**

ತಮ್ಮ ಹೊಟ್ಟೆಗೆ ಬೆಟ್ಟವನ್ನು ಬಿಗಿದುಕೊಂಡು ಸಮುದ್ರದಲ್ಲಿ ಬಿದ್ದರು. ಆದರೂ ಸಹ ಸಾಯಲಿಲ್ಲ—ಪ್ರಾರಬ್ಧಕರ್ಮದ ಕಾರಣದಿಂದ.

**ಪಶ್ಚಾತ್ ಖಡ್ಗಸಮಾದಾಯ ಶಿರಶ್ಛೇತ್ತುಮಥೋದ್ಯತಃ ।**
**ಬ್ರಹ್ಮಾ ತತ್ರಾಜಗಾಮಾಥ ಸ್ವಪುತ್ರಮನುಸಾಂತ್ವಯನ್ ॥ ೧೧೯ ॥**

ನಂತರ ಖಡ್ಗದಿಂದ ತಮ್ಮ ಕುತ್ತಿಗೆಯನ್ನು ಕತ್ತರಿಸಿಕೊಳ್ಳಲು ಸಿದ್ಧರಾದಾಗ ಬ್ರಹ್ಮದೇವರು ತಮ್ಮ ಮಗನಾದ ವಸಿಷ್ಠರನ್ನು ಸಮಾಧಾನಗೊಳಿಸಲು ಅಲ್ಲಿಗೆ ಬಂದರು.

**ಉವಾಚ ಚಾಶ್ರುಪೂರ್ಣಾಕ್ಷಂ ಶ್ರಾಂತಂ ಶ್ರಾಂತಂ ಪುನಃ ಪುನಃ ।**
**ನಿಬೋಧ ತಾತ ಮದ್ವಾಕ್ಯಂ ವಯಂ ಶಂಕರಪೂರ್ವಕಾಃ ॥ ೧೨೦ ॥**

**ಬಲಿಂ ವಹಾಮ ದೇವಾಯ ಸದಾ ತದ್ವಶವರ್ತಿನಃ ।**
**ಯತ್ಪ್ರಾಪ್ತಂ ತತ್ಸುಖಂ ದುಃಖಂ ಸಂಗತೋ ಗುರುಕರ್ಮಣಾಮ್ ॥೧೨೧॥**

ಬಹಳವಾಗಿ ಆಯಾಸಗೊಂಡಿದ್ದ, ಕಣ್ಣುಗಳ ತುಂಬ ನೀರನ್ನು ಹೊಂದಿದ್ದ, ವಸಿಷ್ಠರಿಗೆ ಬ್ರಹ್ಮದೇವರು ಹೇಳಿದರು—"ವತ್ಸ, ನನ್ನ ಮಾತನ್ನು ಕೇಳು. ರುದ್ರದೇವರೇ ಮೊದಲಾದ ನಾವೆಲ್ಲರೂ ಸದಾ ಪರಮಾತ್ಮನ ವಶದಲ್ಲಿ ಇರತಕ್ಕವರು, ಪರಮಾತ್ಮನಿಗೆ ಬಲಿಯನ್ನು ಕೊಡುವವರು, ನಮ್ಮ ಕರ್ಮಗಳಿಗೆ ಅನುಸಾರವಾಗಿ ಬರುವ ಸುಖದುಃಖಗಳನ್ನು ಅನುಭವಿಸಬೇಕು.

**ಚಕ್ಷುಷ್ಮತಾ ನೀಯಮಾನೋಽಚಕ್ಷುಷ್ಮಾನಿವ ನಿತ್ಯಶಃ ।**
**ಈಶದತ್ತಂ ಚ ಭೋಕ್ತವ್ಯಂ ಮತ್ಪೂರ್ವೈಃ ಕಿಮುತಾಪರೈಃ ॥ ೧೨೨ ॥**

ಕಣ್ಣುಗಳಿಲ್ಲದವರನ್ನು ಕಣ್ಣಿದ್ದವನು ಕರೆದುಕೊಂಡು ಹೋಗುವಂತೆ ನಾನೇ ಮೊದಲಾದ ಎಲ್ಲರೂ, ಭಗವಂತನಿಂದ ನಿಯಮನಗೊಳ್ಳುತ್ತಾ, ಅವನಿಂದ ಕೊಡಲ್ಪಟ್ಟ ಫಲಗಳನ್ನು ಅನುಭವಿಸಲೇಬೇಕು. ಇತರರ ಪಾಡೇನು!

**ಕರ್ಮಣಾ ಭ್ರಾಮ್ಯಮಾಣಾನಾಂ ಜನಾನಾಮಿಹ ಸಂಸೃತೌ ।**
**ಋಣಾನುಬಂಧರೂಪೇಣ ಪ್ರಪಾಯಾಮಿವ ಸಂಗತಿಃ ॥ ೧೨೩ ॥**

ಕರ್ಮದ ಕಾರಣದಿಂದ ಈ ಸಂಸಾರದಲ್ಲಿ ಸುತ್ತುತ್ತಿರುವ ಜನರು ಋಣಾನುಬಂಧದಿಂದ ಅರವಟ್ಟಿಗೆಯಲ್ಲಿ ಸೇರಿದಂತೆ ಒಂದು ಕಡೆ—ಬಂಧುಗಳು, ಸ್ನೇಹಿತರು ಈ ರೂಪಗಳಿಂದ—ಸೇರಿರುತ್ತಾರೆ.

**ಈಶ್ವರೋ ವಿಪಣಿಂ ಕೃತ್ವಾ ಜನಾನನಡುಹೋಬಲೀ ।**
**ನಾಸಾರಜ್ಜುಂ ನಾಮ್ನಿ ಬದ್ಧ್ವಾ ವೇದಾಧ್ವನಿಗುಣಾಹ್ವಯೇ ॥ ೧೨೪ ॥**
**ಪಾಪಪುಣ್ಯಾಖ್ಯಭಾರಂ ತಂ ವಾಹಯತ್ಯನಿಶಂ ಹರಿಃ ।**
**ನ ಶಕ್ತೋಽಹಂ ನಿರಾಕರ್ತುಂ ಶಕ್ಯತೇ ವಾ ಕುತಶ್ಚನ ॥ ೧೨೫ ॥**

ಈಶ್ವರನು ಈ ಜಗತ್ತೆಂಬ ಸಂತೆಯಲ್ಲಿ ಜನರೆಂಬ ಎತ್ತುಗಳ ಮೂಗಿನಲ್ಲಿ ತ್ರಿಗುಣಾತ್ಮಕವಾದ ಹಗ್ಗವನ್ನು ಕಟ್ಟಿ ಆ ಜನರೆಂಬ ಎತ್ತುಗಳ ಮೇಲೆ ಅವರವರ ಪಾಪಪುಣ್ಯಗಳೆಂಬ ಭಾರವನ್ನಿಟ್ಟು ಓಡಾಡಿಸುತ್ತಾನೆ. ಅಂತಹ ಭಾರವನ್ನು ತೆಗೆದಿಡಲು ನಾನೇ ಸಮರ್ಥನಲ್ಲ, ಇತರರು ಹೇಗೆ ಸಮರ್ಥರಾಗಲು ಸಾಧ್ಯ ?

**ಇತ್ಯಾದಿ ಬಹುಭಿರ್ವಾಕ್ಯೈಃ ಸತ್ತತ್ತ್ವೈಶ್ಚ ಪಿತಾಮಹಃ ।**
**ದುಃಖಂ ಚ ಶಮಯಾಮಾಸ ವಸಿಷ್ಠಸ್ಯ ಮಹಾತ್ಮನಃ ॥ ೧೨೬ ॥**

ಇವೇ ಮೊದಲಾದ ತತ್ತ್ವವಾಕ್ಯಗಳಿಂದ ಬ್ರಹ್ಮದೇವರು ಮಹಾತ್ಮರಾದ ವಸಿಷ್ಠರ ದುಃಖವನ್ನು ಕಳೆದರು.

**ಪುನಃ ಪಪ್ರಚ್ಛ ಬ್ರಹ್ಮಾಣಂ ವಸಿಷ್ಠೋ ಮುನಿಪುಂಗವಃ ।**
**ಸಂತತೇರ್ವಾ ಕಥಂ ಭೂಯಾತ್ ಅಭಿವೃದ್ಧಿರಿತಃಪರಮ್ ॥ ೧೨೭ ॥**

ಋಷಿಶ್ರೇಷ್ಠರಾದ ವಸಿಷ್ಠರು ಪುನಃ ಬ್ರಹ್ಮದೇವರನ್ನು ಪ್ರಶ್ನಿಸಿದರು—ನನಗೆ ಸಂತತಿಯ ಅಭಿವೃದ್ಧಿಯು ಹೇಗೆ ಆಗುವುದು ?

**ನ ಮೇ ಕೋಪ್ಯವಶಿಷ್ಟೋಽಭೂತ್ ಶತಪುತ್ರೇಷು ಸತ್ಸ್ವಪಿ ।**
**ಕೃತ್ವಾ ಮೇ ಸಂತತೇರ್ವೃದ್ಧಿಂ ಶಮದುಃಖಂ ಚ ಮಾಮಕಮ್ ॥ ೧೨೮ ॥**

ನನಗೆ ನೂರು ಜನ ಮಕ್ಕಳಿದ್ದರೂ ಒಬ್ಬನಾದರೂ ಉಳಿಯಲಿಲ್ಲ. ನನ್ನ ಸಂತತಿಯನ್ನು ಅಭಿವೃದ್ಧಿಗೊಳಿಸಿ ನನ್ನ ದುಃಖವನ್ನು ಶಮನಮಾಡಿರಿ.

**ಇತಿ ಪೃಷ್ಟಃ ತತಶ್ಚಾಹ ಬ್ರಹ್ಮಾ ಬ್ರಹ್ಮವಿದಾಂ ವರಃ ।**
**ಪುತ್ರಾಶ್ಚ ಸ್ವರ್ಗತಾ ಬ್ರಹ್ಮನ್ ಮಾಘಮಾಸಪ್ರಸಾದತಃ ॥ ೧೨೯ ॥**

**ಯದ್ಗತ್ವಾ ನ ನಿವರ್ತಂತೇ ತಾಂ ಗತಿಂ ಪ್ರಾಪುರೋಜಸಾ ।**
**ಪುನರುಜ್ಜೀವನೇ ತೇಷಾಂ ಕಥಂ ಶಕ್ತಿರ್ಭವಿಷ್ಯತಿ ॥ ೧೩೦ ॥**

ಹೀಗೆ ಪ್ರಶ್ನಿಸಲ್ಪಟ್ಟ ಜ್ಞಾನಿಶ್ರೇಷ್ಠರಾದ ಬ್ರಹ್ಮದೇವರು ವಸಿಷ್ಠರನ್ನು ಕುರಿತು ಹೇಳಿದರು—ನಿಮ್ಮ ಮಕ್ಕಳು ಮಾಘಮಾಸದಲ್ಲಿ ಮರಣಹೊಂದಿದ ಕಾರಣದಿಂದ ಆ ಮಾಸದ ಮಹಿಮೆಯಿಂದಲೂ ಮತ್ತು ಅವರ ಪುಣ್ಯಕರ್ಮದ ಪ್ರಭಾವದಿಂದಲೂ ಯಾವ ಸ್ಥಳಕ್ಕೆ ಹೋದರೆ ಪುನಃ ಸಂಸಾರಕ್ಕೆ ಬರುವುದಿಲ್ಲವೋ ಅಂತಹ ಸ್ಥಳಕ್ಕೆ ಹೋದರು. ನಾನಾದರೂ ಅವರನ್ನು ಹೇಗೆ ತಿರುಗಿ ಬದುಕಿಸಲಿ, ನನಗೆ ಅಂತಹ ಶಕ್ತಿ ಎಲ್ಲಿದೆ ?

**ತಸ್ಮಾತ್ ಶಕ್ತೇಶ್ಚ ಭಾರ್ಯೇಯಂ ಗರ್ಭಿಣೀ ಲೋಕಸುಂದರೀ ।**
**ವಿಶ್ವಾಮಿತ್ರಾಜ್ಞಯಾ ಭೂಯಃ ಪುನರೇತಾಂ ತು ಗರ್ಭಿಣೀ ॥ ೧೩೧ ॥**
**ಹನಿಷ್ಯತಿ ನ ಸಂದೇಹಃ ತಸ್ಮಾದೇತಾಂ ಮಹಾಮತೇ ।**
**ಮನುನಾನೇನ ತಾಂ ರಕ್ಷ ಸ್ನುಷಾಂ ತೇ ಗರ್ಭಿಣೀಂ ಮುನೇ ॥ ೧೩೨ ॥**

ನಿಮ್ಮ ಮಗನಾದ ಶಕ್ತಿಯ ಲೋಕಸುಂದರಿಯಾದ ಪತ್ನಿ ಈಗ ಗರ್ಭಿಣಿಯಾಗಿದ್ದಾಳೆ. ವಿಶ್ವಾಮಿತ್ರರ ಆಜ್ಞೆಯಂತೆ ಆ ರಾಕ್ಷಸನು ಗರ್ಭಿಣಿಯನ್ನು ನಾಶಮಾಡುತ್ತಾನೆ. ಸಂದೇಹವಿಲ್ಲ. ಆದುದರಿಂದ ಪ್ರಾಜ್ಞರಾದ ವಸಿಷ್ಠರೇ, ಈ ಮಂತ್ರದ ಬಲದಿಂದ ನಿಮ್ಮ ಗರ್ಭಿಣಿ ಸೊಸೆಯನ್ನು ರಕ್ಷಿಸಿರಿ.

**ಮಾಧವಸ್ತವರಾಜೇನ ಹ್ಯುಪದಿಷ್ಟೇನ ವಿಷ್ಣುನಾ ।**
**ತೇನ ಗುಪ್ತಾಂ ಸ್ನುಷಾಂ ಹಂತುಂ ಶಕ್ತೋ ನೈವ ಸ ರಾಕ್ಷಸಃ ॥ ೧೩೩ ॥**
**ವಿಶ್ವಾಮಿತ್ರಕೃತಾ ಮಾಯಾ ನಿರರ್ಥಾ ತು ಭವಿಷ್ಯತಿ ।**

ವಿಷ್ಣುವಿನಿಂದ ನನಗೆ ಉಪದೇಶ ಮಾಡಲ್ಪಟ್ಟ "ಮಾಧವಸ್ತವರಾಜ"ವೆಂಬ ಮಂತ್ರದ ಬಲದಿಂದ ರಕ್ಷಿತಳಾದ ನಿಮ್ಮ ಸೊಸೆಯನ್ನು ನಾಶಮಾಡಲು ಆ ರಾಕ್ಷಸನು ಸಮರ್ಥನಲ್ಲ. ವಿಶ್ವಾಮಿತ್ರರಿಂದ ರಚಿತವಾದ ಮಾಯೆಯು ವ್ಯರ್ಥವಾಗುತ್ತದೆ.

**ಮಾಘೇ ಮಕರಗೇ ಭಾನೌ ಕುರು ಸ್ನಾನಂ ಯಥಾವಿಧಿ ॥ ೧೩೪ ॥**
**ತೇನ ವಂಶೇ ಭವೇದ್ವಿಷ್ಣುಃ ವ್ಯಾಸರೂಪೀ ಜನಾರ್ದನಃ ।**
**ಇತಿ ತಂ ಬೋಧಯಾಮಾಸ ದದೌ ಮಂತ್ರಮನುತ್ತಮಮ್ ॥ ೧೩೫ ॥**

ಮಾಘಮಾಸದಲ್ಲಿ ಸೂರ್ಯನು ಮಕರ ರಾಶಿಯಲ್ಲಿರುವಾಗ ವಿಧ್ಯುಕ್ತವಾಗಿ ಸ್ನಾನಮಾಡಿ, ಈ "ಮಾಧವಸ್ತವರಾಜ" ಮಂತ್ರ ಜಪಿಸಿರಿ. ನಿಮ್ಮ ವಂಶದಲ್ಲಿ ಸಾಕ್ಷಾತ್ ಶ್ರೀವಿಷ್ಣುವೇ ವೇದವ್ಯಾಸರಾಗಿ ಅವತಾರ ಮಾಡುತ್ತಾನೆ. ಹೀಗೆಂದು

ಹೇಳಿ ಉತ್ತಮವಾದ ಈ ಸ್ತೋತ್ರವನ್ನು ಬ್ರಹ್ಮದೇವರು ವಸಿಷ್ಠರಿಗೆ ಉಪದೇಶ ಮಾಡಿದರು.

**ಬ್ರಹ್ಮಾ ಯಯೌ ತತಃ ಪಶ್ಚಾತ್ ಸ್ತೂಯಮಾನಃ ಸುರೋತ್ತಮೈಃ ।**
**ಶೋಕಂ ಮುಕ್ತ್ವಾ ವಸಿಷ್ಠೋಽಪಿ ಸ್ತವರಾಜೇನ ಗರ್ಭಿಣೀಮ್ ॥ ೧೩೬ ॥**
**ರಕ್ಷಯಾಮಾಸ ಹೃಷ್ಟಾತ್ಮಾ ಕುರ್ವನ್ ಮಾಘೇ ಜಲಾಪ್ಲುತಿಮ್ ।**
**ತೇನ ಪುಣ್ಯಪ್ರಭಾವೇಣ ಪುತ್ರೋಽಭೂಚ್ಚ ಪರಾಶರಃ ॥ ೧೩೭ ॥**

ದೇವತೆಗಳಿಂದ ಸ್ತೋತ್ರಮಾಡಿಸಿಕೊಳ್ಳಲ್ಪಡುತ್ತಾ ಬ್ರಹ್ಮದೇವರು ಪ್ರಯಾಣ ಮಾಡಿದರು. ವಸಿಷ್ಠರೂ ದುಃಖವನ್ನು ಬಿಟ್ಟು 'ಮಾಧವಸ್ತವರಾಜ' ಸ್ತೋತ್ರದಿಂದ ಗರ್ಭಿಣಿಯಾದ ಸೊಸೆಯನ್ನು ರಕ್ಷಿಸಿದರು. ಮಾಘಮಾಸದಲ್ಲಿ ಸ್ನಾನಮಾಡಿ ಸಂತೋಷದಿಂದ ಮಂತ್ರವನ್ನು ಪಠಿಸಿದರು. ಅದರ ಪುಣ್ಯಪ್ರಭಾವದಿಂದ ಆ ಸೊಸೆಗೆ 'ಪರಾಶರ'ನೆಂಬ ಮಗನು ಉತ್ಪನ್ನನಾದನು.

**ತಸ್ಮಾಜ್ಜಜ್ಞೇ ಮಹಾವಿಷ್ಣುಃ ವ್ಯಾಸರೂಪೀ ರಮಾಪತಿಃ ।**
**ದದೌ ಮಂತ್ರಂ ಚ ಪುತ್ರಾಯ ಸೋಽಪಿ ವ್ಯಾಸಂ ಸಮಾವದತ್ ॥ ೧೩೮ ॥**

ಆ ಪರಾಶರರನ್ನು ನಿಮಿತ್ತಮಾಡಿಕೊಂಡು ರಮಾಪತಿಯಾದ ವಿಷ್ಣುವೇ ವೇದವ್ಯಾಸರೂಪದಿಂದ ಪ್ರಾದುರ್ಭವಿಸಿದನು. ವಸಿಷ್ಠರು ಪರಾಶರರಿಗೆ ಉಪದೇಶ ಮಾಡಿದ 'ಮಾಧವಸ್ತವರಾಜ' ಸ್ತೋತ್ರವನ್ನು ಪರಾಶರರು ವ್ಯಾಸರಿಗೆ ಉಪದೇಶ ಮಾಡಿದರು.

**ಇತಿ ಕ್ರಮಾತ್ ಭುವಿ ಖ್ಯಾತಃ ಸರ್ವರಕ್ಷಾಕರೋ ಹ್ಯಯಮ್ ।**
**ಮಂತ್ರಾಗಮಪ್ರಕಾರಶ್ಚ ಕಥಿತಸ್ತು ಮುನೀಶ್ವರಾಃ ॥ ೧೩೯ ॥**

ಹೀಗೆ ಕ್ರಮವಾಗಿ ಈ ಮಂತ್ರವು ಸರ್ವರಕ್ಷಾಕರವೆಂದು ಜಗತ್ತಿನಲ್ಲಿ ಪ್ರಸಿದ್ಧಿ ಪಡೆಯಿತು. ಮಂತ್ರವು ಪ್ರಾಪ್ತವಾದ ರೀತಿಯನ್ನು ಮುನಿಶ್ರೇಷ್ಠರಿರಾ! ನಿಮಗೆ ತಿಳಿಸಿರುತ್ತೇನೆ.

ಇತಿ ಶ್ರೀ ವಾಯುಪುರಾಣೇ ಮಾಘಮಾಸಮಾಹಾತ್ಮ್ಯೇ ಷಡ್ವಿಂಶೋಽಧ್ಯಾಯಃ

ಶ್ರೀ ವಾಯುಪುರಾಣಾಂತರ್ಗತ ಮಾಘಮಾಸ ಮಾಹಾತ್ಮ್ಯೆಯಲ್ಲಿ
ಇಪ್ಪತ್ತಾರನೇ ಅಧ್ಯಾಯವು ಸಮಾಪ್ತಿಯಾಯಿತು.

**ಗಾಲವ ಉವಾಚ—**

**ವಿಶ್ವಾಮಿತ್ರಂ ಮಹಾತ್ಮಾನಂ ತತೋ ಹತ್ಯಾಶತಂ ಮುನಿಮ್ ।**
**ಪೀಡಯಾಮಾಸ ನಿಯತಂ ಪರಿವಾರ್ಯಾಪ್ಯಹರ್ನಿಶಮ್ ॥ ೧ ॥**

ಗಾಲವರು ನುಡಿದರು :

ನೂರು ಬ್ರಹ್ಮಹತ್ಯಾ ಪಾಪಗಳನ್ನು ಮಾಡಿದ ಮಹಾತ್ಮರಾದ ವಿಶ್ವಾಮಿತ್ರರನ್ನು ಆ ಪಾಪಗಳಿಗೆ ಅಭಿಮಾನಿಯಾದ ದೇವತೆಯು ಸುತ್ತುಗಟ್ಟಿ ಅಹೋರಾತ್ರಿ, ಪೀಡಿಸಲಾರಂಭಿಸಿದಳು.

**ಊರ್ಧ್ವಕೇಶೀ ವಿರೂಪಾಕ್ಷೀ ಊರ್ಧ್ವಬಾಹೂ ಭಯಂಕರೀ ।**
**ತಿಷ್ಠಂತಂ ಚ ಸ್ವಪಂತಂ ಚ ನಿಃಶ್ವಸಂತಂ ಭಯಾಕುಲಮ್ ॥ ೨ ॥**
**ಗಚ್ಛಂತಂ ಪ್ರಸ್ಖಲಂ ತಂ ಚ ಧಾವಂತ್ಯನುಮಹಾಮತಿಮ್ ।**
**ದುದ್ರುವೇ ಭಯತಃ ಶೀಘ್ರಂ ಯಮಸ್ಯಾಂತಿಕಮೇವ ಸಃ ॥ ೩ ॥**

ಕೂದಲುಗಳು ಮೇಲಕ್ಕೆದ್ದಿರುವ, ವಿರೂಪವಾದ ಕಣ್ಣುಗಳನ್ನುಳ್ಳ, ಮೇಲಕ್ಕೆ ಎದ್ದಿರುವ ಬಾಹುಗಳನ್ನುಳ್ಳ, ಭಯಂಕರವಾದ ರೂಪದ ದೇವತೆಯು ವಿಶ್ವಾಮಿತ್ರರನ್ನು ಭಯಗ್ರಸ್ತರನ್ನಾಗಿ ಮಾಡಿ, ಅವರನ್ನು ನಡೆಯುವಾಗ, ಎಡವಿ ಬೀಳುವಾಗ, ಓಡುವಾಗ ಬಿಡದೆ ಪೀಡಿಸಿದ ಕಾರಣ ಅವರು ಕೂಡಲೇ ಯಮದೇವರ ಬಳಿಗೆ ಓಡಿಹೋದರು.

**ತಮುವಾಚ ತತೋ ಭೀತಃ ತ್ರಾಹ್ಯಸ್ಮಾದಿತಿ ಸಾದರಮ್ ।**
**ತತೋ ದಂಡಧರಃ ಪ್ರಾಹ ನ ಮೇ ಶಕ್ತಿರಿತಿ ಸ್ಫುಟಮ್ ॥ ೪ ॥**

ಯಮನನ್ನು ಕುರಿತು "ಈ ಭಯದಿಂದ ನನ್ನನ್ನು ರಕ್ಷಿಸು" ಎಂದು ಕೇಳಿಕೊಳ್ಳಲು, ಯಮದೇವರು "ನನಗೆ ಅಂತಹ ಶಕ್ತಿ ಇಲ್ಲ"ವೆಂದು ಸ್ಪಷ್ಟವಾಗಿ ಹೇಳಿದರು.

**ಏವಂ ನಿರಾಕೃತಸ್ತೇನ ವರುಣಾಂತಿಕಮಾಯಯೌ ।**
**ತಮುವಾಚ ತತೋ ಭೀತಃ ತ್ರಾಹ್ಯಸ್ಮಾದಿತಿ ಸಾದರಮ್ ॥ ೫ ॥**

ಯಮನಿಂದ ನಿರಾಕೃತರಾದ ವಿಶ್ವಾಮಿತ್ರರು ವರುಣನಲ್ಲಿಗೆ ಹೋಗಿ "ಈ ಪಾಪದಿಂದ ನನ್ನನ್ನು ಕಾಪಾಡು"ಎಂದು ಕೇಳಿದರು.

**ತತಃ ಪಾಶಧರಃ ಪ್ರಾಹ ನ ಮೇ ಶಕ್ತಿರಿತಿ ಸ್ಫುಟಮ್ ।**
**ಏವಂ ನಿರಾಕೃತಸ್ತೇನ ಸೂರ್ಯಸ್ಯಾಂತಿಕಮಾಯಯೌ ॥ ೬ ॥**

ವರುಣನು "ನನಗೆ ಅಂತಹ ಶಕ್ತಿಯಿಲ್ಲ" ಎಂದು ನುಡಿಯಲು, ವಿಶ್ವಾಮಿತ್ರರು ಸೂರ್ಯನ ಬಳಿ ಹೋದರು.

**ತಮುವಾಚ ತತೋ ಭೀತಃ ತ್ರಾಹ್ಯಸ್ಮಾದಿತಿ ಸಾದರಮ್ ।**
**ಹರಿದಶ್ವಶ್ಚ ತಂ ಪ್ರಾಹ ನ ಮೇ ಶಕ್ತಿರಿತಿ ಸ್ಫುಟಮ್ ॥ ೭ ॥**
**ಏವಂ ನಿರಾಕೃತಸ್ತೇನ ಸೋಮಸ್ಯಾಂತಿಕಮಾಯಯೌ ।**
**ತಮುವಾಚ ತತೋ ಭೀತಃ ತ್ರಾಹ್ಯಸ್ಮಾದಿತಿ ಸಾದರಮ್ ॥ ೮ ॥**
**ತಮುವಾಚಾಬ್ಧಿಜಶ್ಚಂದ್ರೋ ನ ಮೇ ಶಕ್ತಿರಿತಿ ಸ್ಫುಟಮ್ ।**
**ಏವಂ ನಿರಾಕೃತಸ್ತೇನ ದೇವೇಂದ್ರಸ್ಯಾಂತಿಕಂ ಯಯೌ ॥ ೯ ॥**

ಸೂರ್ಯನನ್ನು ಕುರಿತು "ನನ್ನನ್ನು ರಕ್ಷಿಸು" ಎಂದು ಕೇಳಿಕೊಂಡರು. ಸೂರ್ಯನೂ "ನನಗೆ ಅಂತಹ ಸಾಮರ್ಥ್ಯ"ವಿಲ್ಲ ಎಂದು ನುಡಿಯಲು, ಋಷಿಗಳು ಚಂದ್ರನ ಬಳಿ ಹೋಗಿ "ನನ್ನನ್ನು ರಕ್ಷಿಸು" ಎಂದು ಕೇಳಿದರು. ಚಂದ್ರನೂ ಸಹ "ನನಗೆ ಶಕ್ತಿ ಇಲ್ಲ"ವೆಂದು ನುಡಿದಮೇಲೆ ದೇವೇಂದ್ರನ ಬಳಿ ಹೋದರು.

**ತಮುವಾಚ ತತೋ ಭೀತಃ ತ್ರಾಹ್ಯಸ್ಮಾದಿತಿ ಸಾದರಮ್ ।**
**ತತೋ ವಜ್ರಧರಃ ಪ್ರಾಹ ನ ಮೇ ಶಕ್ತಿರಿತಿ ಸ್ಫುಟಮ್ ॥ ೧೦ ॥**
**ಏವಂ ನಿರಾಕೃತಸ್ತೇನ ರುದ್ರಸ್ಯಾಂತಿಕಮಾಯಯೌ ।**
**ತಮುವಾಚ ತತೋ ಭೀತಃ ತ್ರಾಹ್ಯಸ್ಮಾದಿತಿ ಸಾದರಮ್ ॥ ೧೧ ॥**

ದೇವೇಂದ್ರನನ್ನು "ನನ್ನನ್ನು ಕಾಪಾಡು" ಎಂಬುದಾಗಿ ಹೇಳಿಕೊಳ್ಳಲು, ಅವನೂ ಸಹ "ನನಗೆ ಶಕ್ತಿ ಇಲ್ಲ"ವೆಂದು ಸ್ಪಷ್ಟವಾಗಿ ಹೇಳಿದನು. ನಂತರ ವಿಶ್ವಾಮಿತ್ರರು ರುದ್ರದೇವರ ಬಳಿಗೆ ಹೋಗಿ "ನನ್ನನ್ನು ಈ ಭಯದಿಂದ ರಕ್ಷಿಸಿರಿ" ಎಂದು ಕೇಳಿದರು.

**ಶ್ರುತ್ವಾ ರುದ್ರಃ ಸಹಗಣೈಃ ತತ್ರೈವಾಂತರಧೀಯತ ।**
**ಬ್ರಹ್ಮಹತ್ಯಾಶತಂ ಪೃಷ್ಠಂ ಅನುಧಾವತಿ ಧಾವತಿ ॥ ೧೨ ॥**
**ತತಸ್ತುಷ್ಟಾವ ತಂ ರುದ್ರಂ ಭಗವಂತಂ ಮಹೇಶ್ವರಮ್ ।**

ವಿಶ್ವಾಮಿತ್ರರ ವಿಜ್ಞಾಪನೆಯನ್ನು ಕೇಳಿದ ಕೂಡಲೇ ರುದ್ರದೇವರು ತಮ್ಮ ಗಣ ಪರಿವಾರದೊಡನೆ ಅದೃಶ್ಯರಾದರು. ನೂರು ಬ್ರಹ್ಮಹತ್ಯೆಯ ಪಾಪವು ಋಷಿಗಳ ಬೆನ್ನಿನ ಹಿಂದೆಯೇ ಓಡಿ ಬರುತ್ತಿತ್ತು. ಆಗ ಭೀತರಾದ ವಿಶ್ವಾಮಿತ್ರರು ಪೂಜ್ಯರಾದ, ಮಹೇಶ್ವರನೆಂದೆನಿಸಿದ ರುದ್ರದೇವರನ್ನು ಸ್ತುತಿಸಿದರು—

*

**ಸಂಸಾರಾಖ್ಯೋ ಮಹಾರೋಗೋ ಯನ್ನಾಮಸ್ಮೃತಿಮಾತ್ರತಃ ॥ ೧೩॥**
**ದುದ್ರುವೇ ತ್ವಂ ತತೋ ರುದ್ರಃ ತಸ್ಮೈ ತುಭ್ಯಂ ನಮೋ ನಮಃ ।**
**ಯನ್ನಾಮಸ್ಮರಣಾತ್ ಪಾಪಂ ದುದ್ರುವೇ ಚ ದ್ರುತಂ ಯತಃ ॥ ೧೪ ॥**
**ಅತೋ ರುದ್ರೋऽಸಿ ಭಗವಾನ್ ತಸ್ಮೈ ತುಭ್ಯಂ ನಮೋ ನಮಃ ।**

ಯಾರ ನಾಮಸ್ಮರಣೆಯಿಂದ ಸಂಸಾರವೆಂಬ ದೊಡ್ಡ ರೋಗವು ಓಡುತ್ತದೆಯೋ ಅಂತಹ ರುದ್ರನಾಮಕರಾದ ನಿಮಗೆ ಅನೇಕ ನಮಸ್ಕಾರಗಳು. ಯಾರ ನಾಮಸ್ಮರಣೆಯಿಂದ ಪಾಪಗಳು ಓಡಿಹೋಗುತ್ತವೆಯೋ ಆ ಕಾರಣದಿಂದ ನಿಮಗೆ "ರುದ್ರ"ರೆಂದು ಹೆಸರು. ಇಂತಹ ನಿಮಗೆ ಅನೇಕ ನಮಸ್ಕಾರಗಳು.

**ಕ್ಷಯಾಪಸ್ಮಾರರೋಗಾದೀನ್ ಯತೋ ದ್ರಾವಯತೇ ಹಿ ಯಃ ॥ ೧೫ ॥**
**ಅತೋ ರುದ್ರಂ ವದಂತಿ ತ್ವಾಂ ಮುನಯಃ ಶಂಸಿತವ್ರತಾಃ ।**
**ರುಜಂ ದ್ರಾವಯತೇ ಯಸ್ಮಾತ್ ತಸ್ಮಾತ್ ರುದ್ರಂ ವಿದುರ್ಬುಧಾಃ ॥೧೬॥**

ನಿಮ್ಮ ಅನುಗ್ರಹದಿಂದ ಕ್ಷಯ, ಮೂರ್ಛೆ ಮುಂತಾದ ರೋಗಗಳು ಓಡಿ ಹೋಗುತ್ತವೆಯಾದಕಾರಣದಿಂದ ನಿಮ್ಮನ್ನು ಜ್ಞಾನಿಗಳು "ರುದ್ರ"ನೆಂದು ಕರೆಯುತ್ತಾರೆ. ನಿಮ್ಮ ಕೃಪೆಯಿಂದ ಸಕಲ ರೋಗಗಳೂ ಪರಿಹಾರವಾಗಿ ಓಡುತ್ತವೆಯಾದುದರಿಂದ ನಿಮಗೆ "ರುದ್ರ" ಎಂದು ಹೆಸರು—ಹೀಗೆ ಜ್ಞಾನಿಗಳು ಹೇಳುತ್ತಾರೆ.

**ನಮಸ್ತಸ್ಮೈ ಭಗವತೇ ನಿದಾನಾಯ ಶ್ರಿಯಾಮಪಿ ।**
**ರುಧಂ ಮಾರ್ಗಮಿತಿ ಪ್ರಾಹುಃ ತನ್ಮಾರ್ಗಂ ರಾತಿ ವೈ ಸತಾಮ್ ॥ ೧೭ ॥**

ಐಹಿಕ ಐಶ್ವರ್ಯಕ್ಕೆ ಕಾರಣರಾದ ಪೂಜ್ಯರೇ, ನಿಮಗೆ ನಮಸ್ಕಾರಗಳು. ಸಜ್ಜನರ ಶ್ರೇಯಸ್ಸಿಗೆ ಸನ್ಮಾರ್ಗವನ್ನು ತೋರಿಸುವವರು ನೀವೇ.

**ಅತೋ ರುದ್ರಮಿತಿ ಪ್ರಾಹುಃ ನಮಃ ಸನ್ಮಾರ್ಗಹೇತವೇ ।**
**ರುಧೋ ವೇದಾಃ ಸಮುದ್ದಿಷ್ಟಾಃ ಗತಿದಾಃ ಶಾಶ್ವತಾ ಇಮೇ ॥ ೧೮ ॥**
**ತಾನ್ ರಾತ್ಯಾದೌ ಸತಾಂ ಯಸ್ಮಾತ್ ರುದ್ರಂ ತ್ವಾಂ ಮುನಯೋ ವಿದುಃ ।**

ಸನ್ಮಾರ್ಗದರ್ಶಕರಾದ ಪ್ರಯುಕ್ತ ನಿಮಗೆ "ರುದ್ರ" ಎಂದು ಹೆಸರು. ಅಂತಹ ನಿಮಗೆ ನಮಸ್ಕಾರಗಳು. ಸಜ್ಜನರ ಅನುಗ್ರಹಕ್ಕಾಗಿ ಮೋಕ್ಷಾದಿಪುರುಷಾರ್ಥ ಪ್ರದವಾದ ನಿತ್ಯವಾದ ವೇದಗಳ ಮುಖ್ಯ ರಕ್ಷಕರಾಗಿರುತ್ತೀರಿ ; ಆದಕಾರಣದಿಂದ ನೀವು "ರುದ್ರ"ರೆಂದು ಮುನಿಗಳು ತಿಳಿಯುತ್ತಾರೆ.

**ಜಯಿಷ್ಣುಃ ಸರ್ವಲೋಕಾನಾಂ ತ್ವತ್ತೋ ರುದ್ಧೋ ಮನೋಭವಃ ॥ ೧೯ ॥**

ಸರ್ವಲೋಕಗಳಲ್ಲಿರುವವರನ್ನೂ ಜಯಿಸುವ ಮನ್ಮಥನನ್ನು ನೀವು ಜಯಿಸಿರುತ್ತೀರಿ.

**ಅತೋ ರುದ್ರೇತಿ ತ್ವಾಂ ಪ್ರಾಹುಃ ತಸ್ಮೈ ಧೂರ್ಜಟಿನೇ ನಮಃ ।**
**ರುಧಮಾವರಣಾವಿದ್ಯಾಂ ಪ್ರಾಹುಃ ಬ್ರಹ್ಮವಿದೋ ಜನಾಃ ॥ ೨೦ ॥**
**ತಸ್ಯಾಂತಃಪಾವಕೋ ಯಸ್ಮಾತ್ ರುದ್ರಸ್ತುಭ್ಯಂ ನಮೋ ನಮಃ ।**

ಈ ಕಾರಣದಿಂದ ನಿಮ್ಮನ್ನು "ರುದ್ರ"ನೆಂದು ಕರೆಯುತ್ತಾರೆ. ತಲೆಯಲ್ಲಿ ಜಟೆ ಮತ್ತು ಗಂಗೆಯನ್ನು ಧರಿಸಿರುವ ನಿಮಗೆ ನಮಸ್ಕಾರ. ಅಜ್ಞಾನವೆಂಬ ಆವರಣಕ್ಕೆ ಅಗ್ನಿಯಂತೆ ಇರುವ ನಿಮ್ಮನ್ನು ಜ್ಞಾನಿಗಳು "ರುದ್ರ"ನೆಂದು ಹೇಳುವರು. ಅಂತಹ ನಿಮಗೆ ನಮಸ್ಕಾರ.

**ತ್ರೈಪುರಾಣಾಂ ಚ ದೈತ್ಯಾನಾಂ ಯತೋ ಬಾಷ್ಪವಿಮೋಚನಮ್ ॥ ೨೧ ॥**
**ಯತೋ ರಾತಿ ತತೋ ರುದ್ರೋ ಮೃಡಸ್ತಸ್ಮೈ ನಮೋ ನಮಃ ।**
**ರುದಿತಿಜ್ಞಾನಮುದ್ದಿಷ್ಟಂ ತದ್ರಾತ್ಯಸ್ಮಾದಮುಂ ತತಃ ॥ ೨೨ ॥**
**ವದಂತ್ಯೇನಂ ರುದ್ರಮಿತಿ ನಮಸ್ತಸ್ಮೈ ಮಹಾತ್ಮನೇ ।**

ತ್ರಿಪುರಾಸುರನೆಂಬ ದೈತ್ಯನಿಂದ ಕಷ್ಟಪಟ್ಟು, ಕಣ್ಣೀರು ಸುರಿಸುತ್ತಿದ್ದ ಜನರಿಗೆ, ದೈತ್ಯನನ್ನು ಸಂಹರಿಸಿ ದುಃಖವನ್ನು ಪರಿಹರಿಸಿದಿರಿಯಾದಕಾರಣದಿಂದ ನಿಮಗೆ "ರುದ್ರ" ಎಂದು ಹೆಸರು. ನಿಮಗೆ ಅನೇಕ ನಮಸ್ಕಾರ. ಯಥಾರ್ಥ ಜ್ಞಾನವು ನಿಮ್ಮಿಂದ ರಕ್ಷಿಸಲ್ಪಡುತ್ತದೆ. ಈ ಕಾರಣದಿಂದ ನಿಮ್ಮನ್ನು "ರುದ್ರ" ಎಂದು ಕರೆಯುತ್ತಾರೆ. ಅಂತಹ ಮಹಾತ್ಮರಾದ ನಿಮಗೆ ನಮಸ್ಕಾರಗಳು.

**ರುಧಃ ಕ್ರಿಯಾಃ ಸಮುದ್ದಿಷ್ಟಾಃ ತಾಸಾಂ ಸಾಕ್ಷೀ ಯತೋ ಹರಃ ॥ ೨೩ ॥**
**ಅತೋ ವದಂತಿ ತ್ವಾಂ ರುದ್ರಂ ನಮಸ್ತಸ್ಮೈ ವೃಷಧ್ವಜ ।**
**ರುದ್ರಶಬ್ದನಿರುಕ್ತ್ಯೈವ ತುಷ್ಟೋ ರುದ್ರೋ ಮಹಾಪ್ರಭುಃ ॥ ೨೪ ॥**

ಸಜ್ಜನರು ಆಚರಿಸುವ ಸತ್ಕರ್ಮಗಳಿಗೆ ನೀವು ಸಾಕ್ಷೀಭೂತರಾಗಿರುತ್ತೀರಿ. ಅದರಿಂದ ನಿಮ್ಮನ್ನು "ರುದ್ರ" ಎನ್ನುತ್ತಾರೆ. ಅಂತಹ ವೃಷಧ್ವಜರಾದ ನಿಮಗೆ ಅನೇಕ ನಮಸ್ಕಾರಗಳು. ಹೀಗೆ "ರುದ್ರ" ಶಬ್ದಕ್ಕೆ ನಾನಾವಿಧವಾದ ಅರ್ಥಗಳನ್ನು ನಿರೂಪಿಸಿ ಭಕ್ತಿಯಿಂದ ಸ್ತೋತ್ರಮಾಡಿದ ಕಾರಣದಿಂದ ಮಹಾಪ್ರಭುವಾದ ರುದ್ರದೇವರು ಸಂತುಷ್ಟರಾದರು.

**ಮಾಘ್ಯಾಂ ಜಪೇತಿ ಗಾಯತ್ರೀಂ ತಮುವಾಚಾಂತರಿಕ್ಷಗಃ ।**
**ತತಃ ಸಪ್ತನದೀಸಂಗಂ ಪ್ರಾಪ್ಯ ಮಾಘ್ಯಾಂ ಮಹಾಮುನಿಃ ॥ ೨೫ ॥**

**ಸ್ನಾತ್ವಾ ರುದ್ರಂ ಪ್ರತಿಷ್ಠಾಪ್ಯ ಸಮ್ಯಕ್ ಸಂಪೂಜ್ಯ ಭಕ್ತಿತಃ ।**
**ಗಾಯತ್ರೀಂ ಚ ಜಜಾಪಾಸೌ ಪರಬ್ರಹ್ಮರ್ಷಿದೇವತಾಮ್ ॥ ೨೬ ॥**

ಅದೇ ಕಾಲದಲ್ಲಿ ವಿಶ್ವಾಮಿತ್ರರಿಗೆ ಆಕಾಶವಾಣಿಯು ಹೀಗೆ ಹೇಳಿತು— ಮಾಘಮಾಸದಲ್ಲಿ ಗಾಯತ್ರೀ ಮಂತ್ರವನ್ನು ಜಪಿಸಿರಿ—ವಿಶ್ವಾಮಿತ್ರರು ಸಪ್ತನದೀ ಸಂಗಮಕ್ಕೆ ಮಾಘಮಾಸದಲ್ಲಿ ಬಂದು, ಸ್ನಾನಮಾಡಿ, ರುದ್ರ ದೇವರನ್ನು ಭಕ್ತಿಯಿಂದ ಯಥಾಯೋಗ್ಯವಾಗಿ ಪೂಜಿಸಿ, ಬ್ರಹ್ಮರ್ಷಿ-ದೇವತೆಯಾದ ಗಾಯತ್ರೀಮಂತ್ರ ವನ್ನು ಜಪಿಸಿದರು.

**ವೇದಮಾತುರ್ಜಪಾನ್ಮಾಘ್ಯಾಂ ಸ್ನಾನಾತ್ ರುದ್ರಸ್ಯ ಸ್ಥಾಪನಾತ್ ।**
**ಬ್ರಹ್ಮಹತ್ಯಾಶತೇನಾಪಿ ಸದ್ಯೋ ಮುಕ್ತೋ ಮುನೀಶ್ವರಃ ॥ ೨೭ ॥**

ಮಾಘಸ್ನಾನಮಾಡಿ, ರುದ್ರದೇವರ ಪ್ರತಿಷ್ಠೆಮಾಡಿ, ವೇದಮಾತೆಯಾದ ಗಾಯತ್ರೀ ಮಂತ್ರವನ್ನು ಜಪಮಾಡಿದ ಕಾರಣದಿಂದ ನೂರು ಬ್ರಹ್ಮಹತ್ಯೆಯ ಪಾಪದಿಂದ ಋಷಿಶ್ರೇಷ್ಠರು ಮುಕ್ತರಾದರು.

**ತತಃ ಪ್ರಭೃತಿ ಗಾಯತ್ರ್ಯಾ ವಿಶ್ವಾಮಿತ್ರೋ ಋಷಿಃ ಸ್ಮೃತಃ ।**
**ಗೋವಧಾದ್ಯುಪಪಾಪಾನಿ ಕ್ಷುದ್ರಪಾಪಾನಿ ಯಾನಿ ಚ ॥ ೨೮ ॥**

**ತಾನಿ ಸರ್ವಾಣಿ ನಶ್ಯಂತಿ ಗಾಯತ್ರ್ಯೇಕಜಪಾತ್ ಧ್ರುವಮ್ ।**
**ಗಾಯತ್ರೀಂ ಚ ಜಪೇನ್ಮಾಘೇ ಸಕೃದಂಗುಲಿಪರ್ವಣಿ ॥ ೨೯ ॥**

**ಪ್ರಾತಃ ಸ್ನಾತ್ವಾ ಶುಚಿರ್ಭೂತ್ವಾ ಬ್ರಹ್ಮಹತ್ಯಾಂ ವ್ಯಪೋಹತಿ ।**
**ಗಾಯತ್ರೀಂ ಜಪತೇ ಯಸ್ತು ನಿತ್ಯಂ ಮಾಘೇ ಜಲಾಪ್ಲುತಃ ॥ ೩೦ ॥**

**ನ ಲಿಪ್ಯತೇ ಪಾತಕೇನ ಪದ್ಮಪತ್ರಮಿವಾಂಭಸಾ ।**
**ಸ್ನಾತ್ವಾ ಮಾಘೇ ಜಪನ್ ವೇದಮಾತರಂ ಚ ದ್ವಿಜೋತ್ತಮಃ ॥ ೩೧ ॥**
**ಸರ್ವಾನ್ ಕಾಮಾನವಾಪ್ನೋತಿ ಸರ್ವಯಜ್ಞಫಲಂ ಲಭೇತ್ ।**

ಅಂದಿನಿಂದ ಗಾಯತ್ರೀ ಮಂತ್ರಕ್ಕೆ ವಿಶ್ವಾಮಿತ್ರರು ಋಷಿಗಳೆಂದೆನಿಸಿದರು. ಗೋವಧೆಯೇ ಮೊದಲಾದ ಪಾಪಗಳೂ, ಇನ್ನೂ ಸಣ್ಣ ಸಣ್ಣ ಪಾಪಗಳೂ ಒಂದು ಗಾಯತ್ರೀ ಜಪದಿಂದ ನಾಶವಾಗುತ್ತವೆ. ಮಾಘಮಾಸದಲ್ಲಿ ಒಂದೇಸಲ ಬೆರಳುಗಳಲ್ಲಿ ಸಂಜ್ಞೆಮಾಡಿಕೊಂಡು ಗಾಯತ್ರಿಯನ್ನು ಜಪಿಸಿದರೆ ಬ್ರಹ್ಮಹತ್ಯಾ ದೋಷದಿಂದ ಮುಕ್ತನಾಗುತ್ತಾನೆ. ಮಾಘಮಾಸದಲ್ಲಿ ಪ್ರಾತಃಕಾಲದಲ್ಲಿ ಸ್ನಾನ

ಮಾಡಿ ಯಾರು ಗಾಯತ್ರಿಯನ್ನು ನಿತ್ಯವೂ ಜಪಿಸುವರೋ, ಅವರಿಗೆ ಪದ್ಮಪತ್ರವು ನೀರಿನಲ್ಲಿದ್ದರೂ ನೀರು ಅದಕ್ಕೆ ಹೇಗೆ ಅಂಟುವುದಿಲ್ಲವೋ ಅದರಂತೆ ಯಾವ ವಿಧವಾದ ಪಾಪಲೇಪವೂ ಆಗುವುದಿಲ್ಲ. ಮಾಘದಲ್ಲಿ ಬ್ರಾಹ್ಮಣಶ್ರೇಷ್ಠನು ವೇದಮಾತೃವಾದ ಗಾಯತ್ರಿಯನ್ನು ಜಪಿಸಿದರೆ ಅವನಿಗೆ ಸಕಲ ಅಭೀಷ್ಟಗಳೂ ಪೂರ್ಣಗೊಳ್ಳುತ್ತವೆ, ಸಮಸ್ತ ಯಜ್ಞಮಾಡಿದ ಫಲ ದೊರೆಯುತ್ತದೆ.

**ಯೋ ವೇದಮಾತರಂ ನಿತ್ಯಂ ಮಾಸೇಷ್ವನ್ಯೇಷು ವೈ ಪಠನ್॥ ೩೨ ॥**
**ಜಪೇನ್ನೈಕೇನ ಲಭತೇ ರಾಜಸೂಯಾಧಿಕಂ ಫಲಮ್ ।**
**ಮಾಘೇ ಮಾಸಿ ಜಪನ್ ನ್ಯಾಣಾಂ ತಸ್ಮಾತ್ ಕೋಟಿಗುಣಂ ಭವೇತ್ ॥**

ಬೇರೆ ಮಾಸದಲ್ಲಿ ಒಂದಾವರ್ತಿ ನಿತ್ಯವೂ ಜಪಮಾಡಿದರೆ ರಾಜಸೂಯಯಾಗದ ಫಲ ದೊರೆಯುತ್ತದೆ. ಅದನ್ನೇ ಮಾಘಮಾಸದಲ್ಲಿ ಜಪಿಸಿದರೆ ಅದಕ್ಕಿಂತ ಕೋಟಿಗುಣ ಹೆಚ್ಚು ಫಲ ಬರುತ್ತದೆ.

**ಯೋ ವೇದಮಾತರಂ ನಿತ್ಯಂ ಮಾಘೇ ಸ್ನಾತ್ವಾ ಬಹಿರ್ಜಲೇ ।**
**ಕುಷ್ಠರೋಗಾದ್ವಿನಿರ್ಮುಕ್ತಃ ಪರಾಂ ಸಿದ್ಧಿಂ ಅವಾಪ್ನುಯಾತ್ ॥ ೩೪ ॥**

ಮಾಘಮಾಸದಲ್ಲಿ ನಿತ್ಯವೂ ಬಹಿರ್ಜಲದಲ್ಲಿ ಸ್ನಾನಮಾಡಿ ಗಾಯತ್ರಿ ಜಪ ಮಾಡಿದರೆ, ಕುಷ್ಠರೋಗವು ನಾಶವಾಗುವುದಲ್ಲದೆ, ಉತ್ತಮ ಸಿದ್ಧಿಯೂ ಲಭಿಸುತ್ತದೆ.

**ವಿಶ್ವಾಮಿತ್ರಸ್ತಪಃಸಿದ್ಧಿಂ ಗಾಯತ್ರ್ಯಾಶ್ಚ ಪ್ರಭಾವತಃ ।**
**ಪ್ರಾಪ್ಯ ಸಂತೋಷಮಾಪೇದೇ ಸ್ತುವನ್ಮಾಘಫಲಂ ಪುನಃ ॥ ೩೫ ॥**
**ಮಂತ್ರಗರ್ವಾತ್ ಪುನಶ್ಚಾಪಿ ವಸಿಷ್ಠಾಧಿಕ್ಯಕಾಂಕ್ಷಯಾ ।**
**ದುಸ್ತರಂ ಚ ತಪಸ್ತೇಪೇ ಜಪನ್ ವೈ ವೇದಮಾತರಮ್ ॥ ೩೬ ॥**

ವಿಶ್ವಾಮಿತ್ರರು ಹೀಗೆ ತಪಸ್ಸಿದ್ಧಿಯನ್ನು ಗಾಯತ್ರೀ ಪ್ರಭಾವದಿಂದ ಹೊಂದಿ, ಹರ್ಷಗೊಂಡು, ಮಾಘಮಾಸದ ಮಾಹಾತ್ಮ್ಯೆಯನ್ನು ಹೊಗಳಿದರು. ವಸಿಷ್ಠರಿಗಿಂತ ತಾವು ಶ್ರೇಷ್ಠರಾಗಬೇಕೆಂಬ ಇಚ್ಛೆಯಿಂದ, ಗಾಯತ್ರೀ ಜಪವನ್ನು ಮಾಡುತ್ತಾ ಪುನಃ ಘೋರವಾದ ತಪಸ್ಸನ್ನಾಚರಿಸಿದರು.

**ದಿವ್ಯಷಷ್ಟಿಸಹಸ್ರಂ ತು ವರ್ಷಾಣಿ ಕ್ರೋಧವಿಹ್ವಲಃ ।**
**ಮುಷ್ಟಿಮಾತ್ರಮಯಶ್ಚೂರ್ಣಂ ಆಹಾರಾರ್ಥಂ ಪ್ರಕಲ್ಪ್ಯ ಚ ॥ ೩೭ ॥**

ದೇವಮಾನದಿಂದ ಆರು ಸಹಸ್ರ ವರ್ಷಗಳ ಕಾಲ ಕ್ರೋಧದಿಂದ ಯುಕ್ತರಾದ ವಿಶ್ವಾಮಿತ್ರರು ತಮ್ಮ ಆಹಾರಕ್ಕಾಗಿ ಒಂದು ಹಿಡಿ ಉಕ್ಕಿನ ಪುಡಿಯನ್ನು ಸೇವಿಸುತ್ತಾ ತಪಸ್ಸನ್ನು ಮುಂದುವರೆಸಿದರು.

**ತಪಸ್ತೇಜಃ ಸಮುದ್ಭೂತೋ ವಹ್ನಿರೂರ್ಧ್ವಂ ದದಾಹ ಸಃ ।**
**ತ್ರೀನ್ ಲೋಕಾನಭಿತೋಽಹ್ಯಂತಾನ್ ದಿಶಾಂ ಪ್ರಜ್ವಲಿತೋ ಮಹಾನ್ ॥ ೩೮ ॥**

ಇವರ ತಪಸ್ಸಿನ ತೇಜಸ್ಸು ಮೇಲಕ್ಕೆ ಹರಡಿ ಮೂರು ಲೋಕಗಳನ್ನೂ ಸುಡಲಾರಂಭಿಸಿತು.

**ಇಂದ್ರಸ್ತು ಭಯಮಾಪೇದೇ ತಪಸೋಽಸ್ಯ ಮಹಾತ್ಮನಃ ।**
**ಕಿಮುದ್ದಿಶ್ಯ ತಪತ್ಯೇಷ ಪ್ರಾಯೋ ಮತ್ಪದಮಿಚ್ಛತಿ ॥ ೩೯ ॥**

ಇಂದ್ರನಿಗೆ ಈ ಮಹಾತ್ಮರ ತಪಸ್ಸಿನಿಂದ ಭಯ ಉಂಟಾಯಿತು. "ಈ ಋಷಿಗಳು ಏತಕ್ಕಾಗಿ ತಪಸ್ಸನ್ನು ಮಾಡುತ್ತಿದ್ದಾರೆ? ಬಹುಶಃ ನನ್ನ ಪದವಿಯನ್ನು ಉದ್ದೇಶಿಸಿ ಮಾಡುತ್ತಿರುವರೋ?" ಎಂದುಕೊಂಡನು.

**ತಪೋವಿಘ್ನಸ್ತತಃ ಕಾರ್ಯ ಇತಿ ದೇವೈಃ ಸಮನ್ವಿತಃ ।**
**ಕಾಮಂ ಚ ಪ್ರೇಷಯಾಮಾಸ ತತ್ತಪೋವಿಘ್ನಸಿದ್ಧಯೇ ॥ ೪೦ ॥**

ದೇವತೆಗಳಿಂದ ಕೂಡಿ "ಈ ತಪಸ್ಸಿಗೆ ವಿಘ್ನವನ್ನುಂಟುಮಾಡಬೇಕು" ಎಂದು ಆಲೋಚಿಸಿ ಆ ಕಾರ್ಯಕ್ಕಾಗಿ ಕಾಮನನ್ನು ಹೇಳಿಕಳಿಸಿದನು.

**ತಸ್ಯಾಶ್ರಮಂ ಯಯೌ ಧೀಮಾನ್ ಮಾಧವೇನ ಸಮನ್ವಿತಃ ।**
**ಪುಷ್ಪಭಾರಭರಾಕ್ರಾಂತಾಂ ತರೂನ್ ಕಾಮಪ್ರಬೋಧಿತಾನ್ ॥ ೪೧ ॥**
**ಅಕರೋನ್ಮಾಧವಃ ಸದ್ಯೋ ಮೋಹಕೃನ್ಮಹತಾಮಪಿ ।**
**ದೃಷ್ಟ್ವಾ ಕಾಲಂ ವಸಂತಂ ತು ಕಿಮೇತದಿತಿ ಚಿಂತಯನ್ ॥ ೪೨ ॥**

ವಸಂತಋತುವಿನ ಅಭಿಮಾನಿಯಾದ ವಸಂತಮಾಧವನೊಡನೆ ಮನ್ಮಥನು ವಿಶ್ವಾಮಿತ್ರರ ಆಶ್ರಮಕ್ಕೆ ಹೋದನು. ಕೂಡಲೇ ಮಾಧವನು ಆ ಸ್ಥಳದಲ್ಲಿ ಅನೇಕ ಪುಷ್ಪಭರಿತ ಗಿಡಗಳನ್ನು ಸೃಷ್ಟಿಸಿದನು. ಗಿಡಗಳು ಪುಷ್ಪಗಳ ಭಾರದಿಂದ ಬಗ್ಗಿದ್ದವು. ಎಂತಹ ಮಹಾತ್ಮರೂ ಸಹ ಆ ದೃಶ್ಯದಿಂದ ಮೋಹಗೊಳ್ಳಬಹುದು. ವಿಶ್ವಾಮಿತ್ರರು ಇದನ್ನೆಲ್ಲ ನೋಡಿ "ಇದೇನು, ವಸಂತಋತು ಬಂದಿದೆಯೆ?" ಎಂದು ಮನಸ್ಸಿನಲ್ಲಿ ಚಿಂತಿಸಿದರು.

**ಇಂದ್ರಕೃತ್ಯಮಿತಿ ಜ್ಞಾತ್ವಾ ಕಾಮಂ ಚಾಗತಮಿತ್ಯಪಿ ।**
**ವ್ಯಾಘ್ರರೂಪಂ ಸಮಾಸ್ಥಾಯ ತಂ ಕಾಮಂ ಸಾಪ್ಸರೋಗಣಮ್ ॥ ೪೩ ॥**
**ಜಿಘೃಕ್ಷಯಾನುದ್ರುತವಾನ್ ತಂ ದೃಷ್ಟ್ವಾ ದುದ್ರುವೇ ಸ್ಮರಃ ।**
**ಕೋಪಾಸನ್ನೋ ಗಾಧಿಪುತ್ರೋ ಹನ್ಯಾನ್ಮಾಮಾಗತಂ ಮುನಿಃ ॥ ೪೪ ॥**

ಆಮೇಲೆ ಇದೆಲ್ಲ ಇಂದ್ರನ ಕಾರ್ಯವೆಂದು ತಿಳಿದು, ಮನ್ಮಥನೂ ಸಹ ಇಲ್ಲಿಗೆ ಬಂದಿರಬೇಕೆಂದು ಊಹಿಸಿ, ಆ ಮನ್ಮಥನನ್ನೂ ಅವನ ಜೊತೆಯಲ್ಲಿ ಬಂದಿದ್ದ ಅಪ್ಸರೆಯರ ಸಮೂಹವನ್ನೂ ಹಿಡಿಯುವ ಇಚ್ಛೆಯಿಂದ, ಹುಲಿಯ ರೂಪವನ್ನು ತಾಳಿ ಅವರನ್ನು ಅಟ್ಟಿಸಿಕೊಂಡು ಹೋದರು. ಮನ್ಮಥನೂ ಸಹ "ವಿಶ್ವಾಮಿತ್ರರು ನನ್ನನ್ನು ಕೊಲ್ಲಲು ಬರುತ್ತಿರುವರೆಂದು" ತಿಳಿದು, ಅವರು ಕೋಪಿಷ್ಠರಾಗಿದ್ದಾರೆಂದು ಹೆದರಿ ಓಡಿದನು.

**ತತಶ್ಚಾಶಕ್ಯಮಿತ್ಯೇವ ದೇವೇಂದ್ರಾಯ ನ್ಯವೇದಯತ್ ।**
**ಪುನಃ ಸಭಾಂ ಪ್ರವಿಷ್ಟೋಽಸೌ ಚಿಂತಾವ್ಯಾಕುಲಮಾನಸಃ ॥ ೪೫ ॥**
**ಪ್ರಾಹ ಕೇನ ತಪೋವಿಘ್ನೋ ಭವೇದಸ್ಯ ಮಹಾತ್ಮನಃ ।**
**ದುಃಖೇನೈವೋದಿತೇ ಶಕ್ರೇ ಪ್ರಾಹ ದೇವೇಂದ್ರಮುರ್ವಶೀ ॥ ೪೬ ॥**

ದೇವೇಂದ್ರನ ಬಳಿಗೆ ಹೋಗಿ "ವಿಶ್ವಾಮಿತ್ರರ ತಪಸ್ಸನ್ನು ಭಂಗಪಡಿಸುವುದು ನನ್ನಿಂದ ಸಾಧ್ಯವಿಲ್ಲ"ವೆಂದು ಮನ್ಮಥನು ನುಡಿದನು. ಇಂದ್ರನಿಗೆ ತುಂಬ ಚಿಂತೆಯಾಯಿತು. ಪುನಃ ಸಭೆಯನ್ನು ಸೇರಿಸಿ ದುಃಖದಿಂದ "ವಿಶ್ವಾಮಿತ್ರರ ತಪಸ್ಸನ್ನು ನಿರರ್ಥಕಮಾಡುವವರು ಯಾರಿದ್ದಾರೆ ?" ಎಂದು ಹೇಳಲು, ದೇವೇಂದ್ರನನ್ನು ಕುರಿತು ಊರ್ವಶಿಯು ಹೇಳಿದಳು—

**ಶೃಣು ಶಕ್ರ ಪ್ರವಕ್ಷ್ಯಾಮಿ ತ್ಯಜ ದುಃಖಂ ಸುಖಂ ಸ್ವಯಮ್ ।**
**ಜಯಾಮೀಮಂ ಮುನಿಂ ತಂ ತು ಕಾಪಟ್ಯೇನೈವ ಯೋಷಿತಾಮ್ ॥ ೪೭ ॥**

"ಇಂದ್ರನೇ, ನಾನು ಹೇಳುವುದನ್ನು ಕೇಳು; ದುಃಖವನ್ನು ಬಿಡು, ಸುಖದಿಂದಿರು, ಸ್ತ್ರೀಯರ ಕಪಟವಿದ್ಯೆಯನ್ನು ಉಪಯೋಗಿಸಿ ಈ ಋಷಿಯನ್ನು ನಾನು ಗೆಲ್ಲುತ್ತೇನೆ.

**ಮದ್ವಾಕ್ಯಂ ಕುರು ಶಕ್ರ ತ್ವಂ ತ್ಯಜ ಸಂದೇಹಮಂಜಸಾ ।**
**ಮಹಾಂತೋಽಪಿ ವಿಮುಹ್ಯಂತಿ ಮಾಯಯಾ ಯೋಷಿತಾಂ ಧ್ರುವಮ್ ॥**

ನಾನು ಹೇಳಿದಂತೆ ಮಾಡು, ಸಂದೇಹವನ್ನು ಬಿಡು. ಎಂತಹ ಮಹಾತ್ಮರಾದರೂ ಸ್ತ್ರೀಯರ ಮಾಯೆಯಿಂದ ಮೋಹಗೊಳ್ಳುತ್ತಾರೆ, ಇದು ನಿಶ್ಚಯ.

**ಪುರೂರವಾ ಮುನೀಂದ್ರಶ್ಚ ಮೈತ್ರಾವರುಣಸಂಜ್ಞಕಃ ।**
**ರುಕ್ಮಾಂಗದಃ ಶಂತನುಶ್ಚ ಮನುಜಾಃ ಕಿಮುತಾಪರೇ ॥ ೪೯ ॥**

"ಪುರೂರವರಾಜ, ಮೈತ್ರಾವರುಣರೆಂಬ ಋಷಿ, ರುಕ್ಮಾಂಗದ, ಶಂತನುರಾಜ ಇವರೆಲ್ಲರೂ ಮೋಹಗೊಂಡರೆಂದಮೇಲೆ ಇತರರ ಪಾಡೇನು ?"

**ಸೂರ್ಯಚಂದ್ರೌ ಸಮಾಹೂಯ ರಾಜಾನೌ ಭವತಂ ತ್ವಿತಿ ।**
**ಆಜ್ಞಾಪಯ ಮಹಾಬಾಹೋ ದ್ವೇ ಪುರ್ಯೌ ಕುರುತಂ ತ್ವಿತಿ ॥**
**ಕುರುತಾಂ ತೌ ಪ್ರಜಾಪೀಡಾಂ ಪರಸ್ಪರಜಯೇಚ್ಛಯಾ ॥ ೫೦ ॥**

"ಸೂರ್ಯಚಂದ್ರರನ್ನು ಹೇಳಿಕಳುಹಿಸು. ಎರಡು ನಗರಗಳನ್ನು ನಿರ್ಮಿಸಿ ಒಂದೊಂದಕ್ಕೆ ಒಬ್ಬನು ರಾಜನಾಗಲಿ. ಅವರಿಬ್ಬರೂ ಜಯ ಬೇಕೆಂಬ ಆಸೆಯಿಂದ ಪರಸ್ಪರ ಯುದ್ಧಮಾಡಲಿ, ಜನರಿಗೆ ಹಿಂಸೆಯಾಗಲಿ."

**ವಿದ್ರವಂತಿ ಪ್ರಜಾಃ ಸರ್ವಾ ರಾಜವಿಡ್ವರತಸ್ತದಾ ।**
**ಸಾಧ್ವೀರೂಪಂ ಸಮಾಸ್ಥಾಯ ಸಹ ತೈಶ್ಚ ಪಲಾಯಿತಾ ॥ ೫೧ ॥**
**ತದಾಶ್ರಮಂ ಚ ಸಾಯಾಹ್ನೇ ಯಾಸ್ಯೇವಾತೀವಸುಂದರೀ ।**
**ತದ್ವೈವ ಪತಿಪುತ್ರಾದೇಃ ಸ್ಯಾಮಹಂ ವಿರಹಾತುರಾ ॥ ೫೨ ॥**

"ಈ ಹಿಂಸಾರೂಪಕ ಯುದ್ಧದಿಂದ ಜನರು ಬೇಸತ್ತು ತಮ್ಮ ತಮ್ಮ ಮನೆಮಠಗಳನ್ನು ತ್ಯಜಿಸಿ ಓಡುತ್ತಾರೆ. ಆ ಕಾಲದಲ್ಲಿ ನಾನು ಪತಿವ್ರತೆಯ ರೂಪವನ್ನು ತಾಳಿ, ಸಾಯಂಕಾಲದ ವೇಳೆಯಲ್ಲಿ ವಿಶ್ವಾಮಿತ್ರರ ಆಶ್ರಮಕ್ಕೆ ಹೋಗುತ್ತೇನೆ. ನಾನು ಅತ್ಯಂತ ಸುಂದರಿಯಾಗಿರುವೆ. ನನ್ನ ಪತಿ ಪುತ್ರರು ಎಲ್ಲಿಯೋ ಹೋಗಿರುವರೆಂದೂ, ಅವರ ವಿರಹದಿಂದ ದುಃಖ ಹೊಂದಿದವಳಂತೆಯೂ ನಟಿಸುತ್ತೇನೆ."

**ತದಾ ಚಾತಿಥಿಕಾಲೇ ತು ಸಾಯಾಹ್ನೇ ಗೃಹಮಾಗತೇ ।**
**ಶೋಚಂತೀ ಪತಿಪುತ್ರಾದೀನ್ ಯಾಯಾಂ ತಸ್ಯಾಂತಿಕಂ ಶನೈಃ ॥ ೫೩ ॥**

"ಆಗ ಸಾಯಂಕಾಲ ಅತಿಥಿಸತ್ಕಾರದ ಸಮಯ. ಪತಿ, ಪುತ್ರರು ಬಂಧುಗಳನ್ನು ನೆನೆಸಿಕೊಂಡು ವಿಶ್ವಾಮಿತ್ರರ ಬಳಿಗೆ ಹೋಗುವೆನು."

**ತದಾ ಚಾತಿಥಿಕಾಲತ್ವಾತ್ ದೀನಾಂ ಮಾಂ ಚ ಶುಚಾತುರಾಮ್ ।**
**ಕೃಪಯಾ ವಿದ್ಧಚಿತ್ತಃ ಸನ್ ಆತಿಥ್ಯಂ ಮೇ ಕರಿಷ್ಯತಿ ॥ ೫೪ ॥**
**ತದಾಹಂ ತಂ ಪ್ರವಕ್ಷ್ಯಾಮಿ ಚ್ಯುತಮಾರ್ಗಾsಬಲಾ ನಿಶಿ ।**
**ಕ್ವ ಯಾಸ್ಯಾಮ್ಯದ್ಯ ಮಾಂ ರಕ್ಷ ಪ್ರಾತರ್ಗಚ್ಛಾಮಿ ಮಾರ್ಗಯನ್ ॥ ೫೫ ॥**

ಅತಿಥಿಸತ್ಕಾರ ಕಾಲವಾದ ಕಾರಣ ದೀನಳಾದ, ದುಃಖಿತಳಾದ ನನಗೆ ಋಷಿಗಳು ಅನುಕಂಪದಿಂದ ಸತ್ಕರಿಸುತ್ತಾರೆ. ಆಗ ನಾನು ಅವರಿಗೆ ಈ ರೀತಿ ಹೇಳುವೆನು—ನಾನು ಸ್ತ್ರೀ, ರಾತ್ರಿಯಲ್ಲಿ ದಾರಿತಪ್ಪಿ ಇಲ್ಲಿಗೆ ಬಂದೆ, ಈಗ ಎಲ್ಲಿಗೆ ಹೋಗಲಿ? ರಾತ್ರಿಯಲ್ಲಿ ನನ್ನನ್ನು ರಕ್ಷಿಸಿರಿ, ಪ್ರಾತಃಕಾಲದಲ್ಲಿ ಪತಿ ಪುತ್ರರನ್ನು ಹುಡುಕುತ್ತಾ ಹೊರಟುಹೋಗುತ್ತೇನೆ.

**ಪತಿಭ್ರಾತೃಸುತಾದೀಂಶ್ಚ ಚರಂತೀ ಪತಿಪದ್ಧತಿಮ್ ।**
**ಆರ್ತಾನಾಂ ಗತಿಹೀನಾನಾಂ ಅಂಗನಾನಾಂ ತು ಸಾ ಗತಿಃ ॥ ೫೬ ॥**

**ಸದ್ರಾಜಾ ಚ ಮಹಾಂತೋऽಪಿ ಏವಂ ಶಾಸ್ತ್ರವಿನಿರ್ಣಯಃ ।**
**ತಸ್ಮಾನ್ಮಾಮದ್ಯ ಸಂರಕ್ಷ ತಮೇವಂ ವಿಪ್ರಲಂಭಯೇ ॥ ೫೭ ॥**

ದುಃಖದಿಂದ ನರಳುತ್ತಿರುವ ನಿರ್ಗತಿಕರಾದ ಸ್ತ್ರೀಯರಿಗೆ ಗುಣವಂತನಾದ ರಾಜನೂ ಹಾಗೂ ತಮ್ಮಂತಹ ಮಹಾತ್ಮರೇ ರಕ್ಷಕರೆಂದು ಶಾಸ್ತ್ರ ಹೇಳುತ್ತದೆ. ಆದುದರಿಂದ ಈ ರಾತ್ರಿ ನನ್ನನ್ನು ಕಾಪಾಡಿ—ಹೀಗೆ ಮೋಹಕಮಾತುಗಳಿಂದ ಆ ವಿಶ್ವಾಮಿತ್ರರು ಮೋಸಹೋಗುವಂತೆ ಮಾಡುತ್ತೇನೆ.

**ರಾತ್ರೌ ಕಾಮೋ ಮುನೀಂದ್ರೇ ತು ಸುಪ್ತೇ ಬಾಣಪ್ರಸಾರಣಮ್ ।**
**ಕರೋತು ತೇನ ವಿದ್ಧಃ ಸನ್ ಸದ್ಯೋ ಮಾಮೇತಿ ನಿಶ್ಚಯಮ್ ॥ ೫೮ ॥**

**ಆಜ್ಞಾಪಯ ತತಃ ಶೀಘ್ರಂ ಕೃತ್ವಾ ಕಾರ್ಯಂ ಪುನರ್ವ್ರಜೇ ।**
**ಸಾರಮೇಯಸ್ವರೂಪೇಣ ವಿರಹಂ ಮೇऽಸಹಿಷ್ಣುನಾ ॥ ೫೯ ॥**

**ಸಹ ವಾ ತೇನ ಮುನಿನಾ ಪುನರ್ಯಾಮಿ ತವಾಂತಿಕಮ್ ।**
**ತ್ವಮುಪ್ಯಾಶ್ರಮಾದಾಶ್ರಮಸ್ಯ ರಾಜಾ ಭೂತ್ವಾ ಭುವಂ ವ್ರಜ ॥ ೬೦ ॥**

ರಾತ್ರಿಯಲ್ಲಿ ಋಷಿಗಳು ನಿದ್ರಿಸುವಾಗ ಮನ್ಮಥನು ಅವರ ಮೇಲೆ ತನ್ನ ಬಾಣಗಳನ್ನು ಪ್ರಯೋಗಿಸಲಿ. ಆಗ ಕಾಮಾತುರತೆಯಿಂದ ಋಷಿಗಳು ನನ್ನ ಬಳಿಗೆ ಬರುವುದು ನಿಶ್ಚಯ. ಕೂಡಲೇ ನಾನು ಹೇಳಿದಂತೆ ಆಜ್ಞೆಮಾಡು. ನನ್ನ ವಿರಹ ವನ್ನು ಸಹಿಸಲಾರದೇ ಇರುವ ವಿಶ್ವಾಮಿತ್ರರನ್ನು ನಾಯಿಯ ರೂಪದಿಂದ ಕರೆದು ಕೊಂಡು ಬರುತ್ತೇನೆ. ಅಥವಾ ಅವರ ನಿಜರೂಪದಿಂದಲೇ ನಿನ್ನ ಬಳಿಗೆ ಕರೆತರು ತ್ತೇನೆ. ನೀನೂ ಸಹ ಆಶ್ರಮದ ಬಳಿ ರಾಜನಂತೆ ಇರು, ಭೂಲೋಕಕ್ಕೆ ತೆರಳು.

**ಸಭಾಯಾಂ ತೇ ತು ಪಶ್ಯಂತು ವಸಿಷ್ಠಾದ್ಯಾ ಮುನಿಂ ಚ ತಮ್ ।**
**ಇತಿ ತಸ್ಯಾ ವಚಃ ಶ್ರುತ್ವಾ ಶಕ್ರಃ ಕೌತೂಹಲಾಕುಲಃ ॥ ೬೧ ॥**

**ಆಹೂಯ ವಿಶ್ವಕರ್ಮಾಣಂ ಪುರೀನಿರ್ಮಾಣಹೇತವೇ ।**
**ಮಮ ಚೇಂದ್ರೋಃ ಪತಂಗಸ್ಯ ಪುರಸ್ತಿಸ್ರೋ ಗುಹಾಕರಾಃ ॥ ೬೨ ॥**

**ಕುರು ಶೀಘ್ರಂ ಭುವಂ ಗತ್ವಾ ತಮಿತ್ಯಾಜ್ಞಾಪಯತ್ಪ್ರಭುಃ ।**
**ಸೋsಪಿ ಭೂಮಿಂ ಸಮಾಸಾದ್ಯ ಪುರಿಸ್ತ್ರಿಸ್ರೋ ವಿನಿರ್ಮಮೇ ॥ ೬೩ ॥**

ಸಭೆಯಲ್ಲಿ ವಸಿಷ್ಠರೇ ಮೊದಲಾದ ಋಷಿಗಳು ಆ ವಿಶ್ವಾಮಿತ್ರರನ್ನು ನೋಡಲಿ—ಹೀಗೆಂಬ ಊರ್ವಶಿಯ ಮಾತುಗಳನ್ನು ಕೇಳಿದ ಇಂದ್ರನು ಕುತೂಹಲ ದಿಂದ ಯುಕ್ತನಾಗಿ ಪಟ್ಟಣಗಳನ್ನು ನಿರ್ಮಿಸಲು ವಿಶ್ವಕರ್ಮನಿಗೆ ಆಜ್ಞೆಮಾಡಿದನು "ನನಗೆ, ಚಂದ್ರನಿಗೆ, ಸೂರ್ಯನಿಗೆ ಹೀಗೆ ಮೂರು ನಗರಗಳನ್ನು ಭೂಲೋಕದಲ್ಲಿ ನಿರ್ಮಿಸು. ಅವುಗಳಲ್ಲಿ ಎಲ್ಲ ಬಗೆಯ ಸುಖಸಾಧನಸಂಪತ್ತಿರಲಿ. ಶೀಘ್ರವಾಗಿ ಭೂಲೋಕಕ್ಕೆ ಹೊರಡು." ವಿಶ್ವಕರ್ಮನೂ ಭೂಲೋಕಕ್ಕೆ ಬಂದು ಮೂರು ನಗರಗಳನ್ನು ನಿರ್ಮಿಸಿದನು.

**ತಟಯೋರುಭಯೋರ್ನದ್ಯಾಃ ಕೃಷ್ಣಾವೇಣ್ಯಾ ಮಹಾಬಲಃ ।**
**ಸೋಮಶೀಲಾಂ ಸೂರ್ಯಶೀಲಾಂ ತಥಾ ರಾಜಶಿಲಾಮಪಿ ॥ ೬೪ ॥**

ಕೃಷ್ಣವೇಣೀ ನದಿಯ ಎರಡೂ ದಡಗಳಲ್ಲಿ ನಿರ್ಮಿತವಾದ ನಗರಗಳ ಹೆಸರುಗಳು ಸೋಮಶೀಲಾ, ಸೂರ್ಯಶೀಲಾ ಮತ್ತು ರಾಜಶಿಲಾ.

**ಸೋಮಸೂರ್ಯೌ ನೃಪೌ ಭೂತ್ವಾ ಸ್ವಾನಾಮಾಹ್ವಾಂ ಪುರೀಂ ಗತೌ ।**
**ವಿವಾದಂ ಚಕ್ರತುಸ್ತತ್ರ ಕ್ರುದ್ಧಾವಿವ ಪರಸ್ಪರಮ್ ॥ ೬೫ ॥**
**ಶಕ್ರೋ ರಾಜಶಿಲಾಂ ಪ್ರಾಪ್ಯ ಸುಖಮಾಸೀನ್ನಿರಾಕುಲಃ ।**
**ಮಾಯಾಯುದ್ಧಮಭೂತ್ತತ್ರ ತದಾ ವೈ ಚಂದ್ರಸೂರ್ಯಯೋಃ ॥ ೬೬ ॥**

ಚಂದ್ರ ಸೂರ್ಯರು ರಾಜರಾಗಿ ತಮ್ಮ ತಮ್ಮ ಹೆಸರಿನ ನಗರಗಳಲ್ಲಿ ನೆಲಸಿದರು. ಕೋಪಗೊಂಡವರಂತೆ ನಟಿಸುತ್ತಾ ತಮ್ಮ ತಮ್ಮಲ್ಲಿ ವಿವಾದವನ್ನು ಪ್ರಾರಂಭಿಸಿದರು. ಇಂದ್ರನು ರಾಜಶಿಲಾ ನಗರದಲ್ಲಿ ರಾಜನಾಗಿ ನಿರಾತಂಕ ನಾಗಿದ್ದನು. ಸೂರ್ಯಚಂದ್ರರಲ್ಲಿ ಕ್ರಮೇಣ ಮಾಯಾಯುದ್ಧವು ಸಂಭವಿಸಿತು.

**ಯದಾ ತಯೋರ್ಜಿಗಮಿಷ್ವೋಸ್ತದಾ ದೇಶಾಂತರಂ ಚ ತೇ ।**
**ದುದ್ರುವುಶ್ಚ ಯಥಾಕಾಮಂ ರಾಜವಿಡ್ವರತೋ ಜನಾಃ ॥ ೬೭ ॥**

ತಾನೇ ಜಯಿಸಬೇಕೆಂಬ ಘೋರಯುದ್ಧವು ನಡೆಯಲು ಪ್ರಜೆಗಳು ಭಯಗ್ರಸ್ತರಾಗಿ ತಮ್ಮ ಮನಬಂದಂತೆ ದೇಶಾಂತರಕ್ಕೆ ಓಡಿದರು.

**ಕಾಚಿತ್ಪತಿಂ ಸುತಂ ಕಾಚಿತ್ ಕಾಚಿತ್ ಬಂಧೂನ್ ವಿಹಾಯ ಚ ।**
**ಉರ್ವಶೀ ತು ತದಾಗತ್ಯ ಸಾಧ್ವೀರೂಪಮುಪೇಯುಷೀ ॥ ೬೮ ॥**

**ಮಾರ್ಗಭ್ರಷ್ಟೇವ ಸಾ ಖಿನ್ನಾ ರುದಂತೀವ ಶನೈರ್ಭಯಾತ್ ।**
**ಸ್ಮರಂತೀ ಪತಿಪುತ್ರಾದೀನ್ ಪಶ್ಯಂತೀವ ದಿಶೋ ದಶ ॥ ೬೯ ॥**
**ಕ್ವಚಿತ್ಸಾ ನಾಹ್ವಯಾಂಚಕ್ರೇ ಸದ್ಯೋ ಲೋಕವಶಂಕರೀ ।**
**ಶನೈಸ್ತದಾಶ್ರಮಂ ಪ್ರಾಪ್ಯ ಸಾಯಾಹ್ನೇ ಸ್ವಾಶ್ರಮಂ ಗತಾ ॥ ೭೦ ॥**

ಪ್ರಜೆಗಳಲ್ಲಿ ಕೆಲವರು ಪತಿಯನ್ನು, ಕೆಲವರು ಮಕ್ಕಳನ್ನು, ಕೆಲವರು ಬಂಧುಗಳನ್ನು ಬಿಟ್ಟು ಓಡಿದರು. ಊರ್ವಶಿಯಾದರೋ ಆಗ ಅಲ್ಲಿಗೆ ಬಂದು, ಪತಿವ್ರತೆಯ ರೂಪವನ್ನು ಧರಿಸಿ, ದಾರಿತಪ್ಪಿದವಳಂತೆ ನಟಿಸುತ್ತಾ, ದುಃಖ-ಭಯದಿಂದ ಯುಕ್ತಳಾದವಳಂತೆ ಕಾಣಿಸಿಕೊಳ್ಳುತ್ತಾ, ಪತಿಪುತ್ರರನ್ನು ಹುಡುಕುವವಳಂತೆ ದಿಕ್ಕು ದಿಕ್ಕುಗಳನ್ನು ನೋಡುತ್ತಾ ಲೋಕವನ್ನೇ ತನ್ನ ವಶಮಾಡಿಕೊಳ್ಳುವಂಥ ಸಾಮರ್ಥ್ಯವುಳ್ಳವಳಾಗಿ ಸ್ವಲ್ಪಕಾಲ ಯಾರನ್ನೂ ಕರೆಯದೇ, ನಿಧಾನವಾಗಿ ಸಾಯಂಕಾಲದ ವೇಳೆಯಲ್ಲಿ ವಿಶ್ವಾಮಿತ್ರರ ಆಶ್ರಮಕ್ಕೆ ಬಂದಳು.

**ರುದಂತೀ ಸ್ವಾಬಲಾ ಖಿನ್ನಾ ಗೃಣಂತೀ ನಾಮತಃ ಸ್ವಕಾನ್ ।**
**ತಾಂ ದೃಷ್ಟ್ವಾ ಕೃಪಯಾವಿಷ್ಟೋ ವಿಶ್ವಾಮಿತ್ರೋ ಮುನೀಶ್ವರಃ ॥ ೭೧ ॥**
**ಪಪ್ರಚ್ಛ ಕುಶಲಂ ಕಾಸಿ ಕಸ್ಯ ಪುತ್ರೀ ಪತಿಶ್ಚ ಕಃ ।**
**ಕಸ್ಮಾತ್ ರುದಸಿ ತ್ವಂ ಬಾಲೇ ಕುತಶ್ಚೇತಃ ಸಮಾಗತಾ ॥ ೭೨ ॥**

ಖಿನ್ನಳಾಗಿ ಅಳುತ್ತಾ, ತನ್ನ ಸ್ವಂತಜನರ ಹೆಸರುಗಳನ್ನು ಕೂಗುತ್ತಾ ಇರುವ ಈ ಸ್ತ್ರೀಯನ್ನು ವಿಶ್ವಾಮಿತ್ರ ಋಷಿಗಳು ಕೃಪೆಯಿಂದ ಸಮೀಪಿಸಿ ಅವಳ ಕುಶಲವನ್ನು ವಿಚಾರಿಸಿದರು—ಬಾಲೆಯೇ, ನೀನು ಯಾರು, ಯಾರ ಮಗಳು, ನಿನ್ನ ಪತಿ ಯಾರು, ಯಾತಕ್ಕೆ ಅಳುತ್ತಿ, ಇಲ್ಲಿಗೆ ಬಂದ ಕಾರಣವೇನು ?

**ಇತಿ ತಸ್ಯ ವಚಃ ಶ್ರುತ್ವಾ ಸಾ ನಾರೀ ವಾಕ್ಯಮಬ್ರವೀತ್ ।**
**ನಾರಾಯಣಸ್ಯ ಕನ್ಯಾಹಂ ನಾಮ್ನಾ ಕಾಂತಾಲಕೇತಿ ಚ ॥ ೭೩ ॥**
**ಯಾಯಜೂಕಸ್ಯ ಪತ್ನೀ ಚ ವಿದ್ಧಿ ನಿಸ್ಪೃಹ ಮಾಂ ಮುನೇ ।**
**ಅದೃಷ್ಟ್ವಾ ಪತಿಪುತ್ರಾದೀನ್ ರುದಂತೀ ಕರುಣಸ್ವರಾ ॥ ೭೪ ॥**

ಋಷಿಗಳ ಮಾತನ್ನು ಕೇಳಿದ ಸ್ತ್ರೀಯು ಹೇಳಿದಳು—ನಾರಾಯಣ ಎಂಬುವರ ಮಗಳು ನಾನು, ನನ್ನ ಹೆಸರು ಕಾಂತಾಲಕಾ, ನನ್ನ ಪತಿಯ ಹೆಸರು ಯಾಯಜೂಕ, ಪತಿ-ಪುತ್ರರನ್ನು ಕಾಣದೇ ಅಳುತ್ತಿದ್ದೇನೆ, ನಿರಪೇಕ್ಷಿಗಳಾದ ಮುನಿಗಳೇ ಕೇಳಿರಿ.

**ರಾಜವಿಡ್ವರತೋ ಭೀತಾ ಜನಾಃ ಸರ್ವೇ ಪಲಾಯಿತಾಃ ।**
**ಅಕಸ್ಮಾತ್ ದುದ್ರುವೇ ಚಾಹಂ ವಿಹಾಯಾಸ್ಮಜ್ಜನಾನಿಹ ॥ ೭೫ ॥**

**ನಿಗೃಹ್ಯ ದುರ್ಜನಾ ಬಾಲಾಮಟಂತೀಂ ರಕ್ಷಕಂ ವಿನಾ ।**
**ಭೋಕ್ಷ್ಯಂತೀತ್ಯೇವ ನಿಶ್ಚಿತ್ಯ ಶಂಕಯಾಹಂ ತವಾಂತಿಕಮ್ ॥ ೭೬**

ರಾಜರಲ್ಲಿ ಉಂಟಾದ ಕಲಹದಿಂದ ಜನರೆಲ್ಲರೂ ಓಡಿಹೋದರು. ಸಹ ಓಡುತ್ತಾ, ನನ್ನ ಜನರನ್ನೆಲ್ಲ ಬಿಟ್ಟು, ಅಕಸ್ಮಾತ್ ಇಲ್ಲಿಗೆ ಬಂದಿ ಕಾಡಿನಲ್ಲಿ ತಿರುಗುತ್ತಿದ್ದರೆ ಅಬಲೆಯಾದ, ರಕ್ಷಕರಿಲ್ಲದ ನನ್ನನ್ನು ದುಃ ಭೋಗಿಸುವರೆಂಬ ಸಂದೇಹದಿಂದ ತಮ್ಮ ಬಳಿಗೆ ಬಂದೆ.

**ಸಾಯಾಹ್ನೇ ಚಾಗತಾ ಧೀರಾ ಜ್ಞಾತ್ವಾ ತ್ವಾಂ ಚ ತಪೋನಿಧಿಮ್**
**ಸಾಧ್ವೀನಾಂ ಚೈವ ಸಂರಕ್ಷ್ಯಂ ಪಾತಿವ್ರತ್ಯಂ ಸದರ್ಚಿಷಾ ॥ ೭೭ ॥**
**ಮುನೇ ಚಾಶ್ವಸಿತುಂ ಯೋಗ್ಯಃ ತ್ವಂ ಸಾಧೂನಾಂ ನ ಸಂಶಯಃ ।**
**ಶ್ವಃ ಶ್ರುತ್ವಾ ಬಾಂಧವಾಃ ಸರ್ವೇ ವಿಶ್ವಸಂತಿ ನ ಸಂಶಯಃ ॥ ೭೮ ॥**

ಭಯಗ್ರಸ್ತಳಾದ ನಾನು ಸಾಯಂಕಾಲವಾಗಲು ತಪೋನಿಧಿಗಳಾದ ಬಳಿಗೆ ಬಂದೆ. ಪತಿವ್ರತಾ ಸ್ತ್ರೀಯರು ಎಂತಹ ಕಾಲದಲ್ಲಿಯೂ ತಮ್ಮ ಪ್ರಾ ವನ್ನು ರಕ್ಷಿಸಿಕೊಳ್ಳಬೇಕು. ಸಾಧುಗಳಲ್ಲಿ ತಾವು ಬಹಳ ಯೋಗ್ಯರು, ಸಂಶ ತಮ್ಮಲ್ಲಿ ನಂಬಿಕೆಯನ್ನಿಡಬಹುದು. ನಾಳೆ ನನ್ನ ಬಾಂಧವರು ಇಲ್ಲಿ ನೋಡಿದಾಗ ಪೂರ್ಣ ವಿಶ್ವಾಸವಿಡುವರು, ಸಂದೇಹವಿಲ್ಲ.

**ತಸ್ಮಾನ್ಮಾಮದ್ಯ ರಕ್ಷ ತ್ವಂ ಕುರು ಚಾತಿಥ್ಯಮೇವ ಚ ।**
**ಇತಿ ತಸ್ಯಾಃ ವಚಃ ಶ್ರುತ್ವಾ ವಿಪ್ರಲಬ್ಧೋ ಮುನೀಶ್ವರಃ ॥ ೭೯ ॥**
**ಓಮಿತ್ಯುಕ್ತ್ವಾಽಕರೋತ್ತಸ್ಯೈ ಚಾತಿಥ್ಯಂ ಚ ಫಲಾದಿಭಿಃ ।**
**ಗುಹಾಯಾಂ ತಾಂ ವಿನಿಕ್ಷಿಪ್ಯ ಸ್ವಯಂ ದ್ವಾರಿ ಸ್ಥಿತೋ ಮುನಿಃ ॥**

ಆದುದರಿಂದ ಈ ರಾತ್ರಿ ನನಗೆ ಆತಿಥ್ಯವನ್ನು ಮಾಡಿ ರಕ್ಷಿಸಿರಿ ಎಂಬ ಮಾತನ್ನು ಕೇಳಿ ವಿಶ್ವಾಮಿತ್ರರು ಮೋಸಹೋದರು. ಆಗಲಿ ಎಂಬುದಾಗಿ ಅವಳಿಗೆ ಹಣ್ಣು ಮುಂತಾದವುಗಳನ್ನು ನೀಡಿ ಸತ್ಕರಿಸಿ, ಗುಹೆಯಲ್ಲಿ ಮ ಅವಳಿಗೆ ಸ್ಥಳ ಕೊಟ್ಟು ತಾವು ಗುಹೆಯ ಬಾಗಿಲಿನಲ್ಲಿ ನಿಂತುಕೊಂಡರು.

**ಕ್ಷಣಂ ನಿದ್ರಾಂ ಚಕಾರಾಸೌ ತನ್ಮಧ್ಯೇ ಕಾಮುಪುಲ್ಬಣೈಃ ।**
**ಶರೈರ್ವಿವ್ಯಾಧ ತಂ ವಿಪ್ರಂ ತೇನಾಸೌ ಜ್ವಲಿತೋಽಭವತ್ ॥ ೮೧ ॥**

ಸ್ವಲ್ಪಕಾಲ ವಿಶ್ವಾಮಿತ್ರರು ನಿದ್ರಿಸಿದರು. ಆಗ ಮನ್ಮಥನ ಬಾಣ ಹೊಡೆಯಲ್ಪಟ್ಟವರಾಗಿ ಅದರ ಫಲದಿಂದ ಅವರಿಗೆ ಕಾಮೋದ್ರೇಕವಾಯಿತು.

**ನಿಂದಯನ್ಮನಸ್ಯಾತ್ಮಾನಂ ಬಹುಧಾಪಿ ಮುನೀಶ್ವರಃ ।**
**ಆಹೃತ್ಯಾಹೃತ್ಯ ಚ ಮುನಿಃ ಮನಸ್ತಸ್ಮಾದ್ದುರಾಗ್ರಹಾತ್ ।**
**ಶತವಾರಂ ಮುನೀಂದ್ರೋಽಸೌ ಪ್ರತ್ಯಾಗತ್ಯ ಧೃತವ್ರತಃ ॥ ೮೨ ॥**

ಋಷಿಗಳು ತಮ್ಮನ್ನು ತಾವೇ ಅನೇಕ ಬಾರಿ ನಿಂದಿಸಿಕೊಂಡರು. ಊರ್ವಶಿಯ ಕಡೆಗೆ ಹೋಗುತ್ತಿದ್ದ ತಮ್ಮ ಮನಸ್ಸನ್ನು ಕಷ್ಟದಿಂದ ತಡೆಹಿಡಿಯುತ್ತಿದ್ದರು. ಹೀಗೆ ದೃಢನಿಶ್ಚಯರಾದ ಅವರು ನೂರು ಬಾರಿಯಾದರೂ ಮನಸ್ಸನ್ನು ತಮ್ಮ ಹತೋಟಿಯಲ್ಲಿಟ್ಟುಕೊಂಡರು.

**ತಥಾಪಿ ನ ಶಶಾಕಾಸೌ ಮನೋನಿಗ್ರಹಣೇ ಮುನಿಃ ।**
**ಕೃಶೋದರೀಂ ಆಲಿಲಿಂಗ ಕಾಮಾಂಧೋ ಬಹು ನಿದ್ರಿತಾಮ್ ॥ ೮೩ ॥**

ಹೀಗಿದ್ದೂ ತಮ್ಮ ಮನಸ್ಸನ್ನು ಪೂರ್ಣವಾಗಿ ನಿಗ್ರಹಿಸಲಾರದೇಹೋದ ವಿಶ್ವಾಮಿತ್ರರು ಕಾಮಾಂಧರಾಗಿ, ನಿದ್ರಿಸುತ್ತಿದ್ದ ಸೂಕ್ಷ್ಮವುದರಿಯಾದ ಆ ಊರ್ವಶಿಯನ್ನು ಆಲಿಂಗಿಸಿದರು.

**ಸಾ ಬುದ್ಧ್ವಾ ಪ್ರಾಲಪಚ್ಚಿತ್ರಂ ಸಾಧ್ವೀವಾನ್ಯವಶಂ ಗತಾ ।**
**ಕಿಂ ಕರೋಷಿ ಮುನೇ ಚಿತ್ರಂ ತ್ವಾಂ ವಿಶ್ವಸ್ತಾ ಸಮಾಶ್ರಿತಾ ॥ ೮೪ ॥**

ಕೂಡಲೇ ಅವಳು ಎಚ್ಚೆತ್ತು ಪತಿವ್ರತಾ ಸ್ತ್ರೀಯು ಪರಪುರುಷನ ವಶವಾದರೆ ಹೇಗೋ ಹಾಗೆ ವಿಧವಿಧವಾಗಿ ದುಃಖಿಸಿದಳು. ಮುನಿಗಳೇ, ನಿಮ್ಮಲ್ಲಿ ನಂಬಿಕೆಯನ್ನಿಟ್ಟು ಆಶ್ರಯಕ್ಕಾಗಿ ಬಂದವಳೊಡನೆ ಇದೇನು ಮಾಡುತ್ತಿರುವಿರಿ!

**ಅವಿಚಾರ್ಯಾಗತಾಯಾ ಮೇ ಗತಿಃ ಕಾ ವಾ ಭವಿಷ್ಯತಿ ।**
**ಧರ್ಮಸೇತುಶ್ಚ ಭಗ್ನೋಽದ್ಯ ಮುನಿನಾನೇನ ನಿಶ್ಚಯಮ್ ॥ ೮೫ ॥**

ಏನೂ ವಿಚಾರಮಾಡದೇ ಬಂದ ನನಗೆ ಮುಂದೇನು ಗತಿ? ಈ ದಿನ ಈ ಋಷಿಗಳಿಂದ ಧರ್ಮದ ಮರ್ಯಾದೆಯು ಕತ್ತರಿಸಿಹೋಗುತ್ತದೆ, ನಿಶ್ಚಯ.

**ವಿಲಪಂತೀವ ಚ ತಥಾ ಮುನೇರಸ್ಯ ವಶಂ ಗತಾ ।**
**ಯಥಾ ಭ್ರಷ್ಟಾಂ ವಿಹಾಯಾನ್ಯಾಂ ಪತಿಃ ಪರಿಣಯಿಷ್ಯತಿ ॥ ೮೬ ॥**
**ಲೋಕಭೀತ್ಯಾ ಸ್ವಭಾವಾದ್ವಾ ಮನೋ ನಿರ್ವರ್ತ್ಯ ಸ್ವಂ ಮುನೇ ।**
**ಕೃತ್ವಾ ತ್ವಂ ದೂಷಿತಾಂ ಲೋಕೇ ಮಾಂ ವಿಹಾಯ ಗಮಿಷ್ಯಸಿ ॥ ೮೭ ॥**
**ಅಹಮೇಕಾ ತದಾ ನಷ್ಟಾ ತ್ಯಜ ಮಾಂ ಮೂಢಧೀಸ್ತತಃ ।**
**ಇತಿ ನಿರ್ಭರ್ತ್ಸ್ಯ ತಂ ಬಾಲಾ ನಿರ್ಯಯೌ ಚ ಗುಹಾಮುಖಾತ್ ॥ ೮೮ ॥**

ಋಷಿಗಳಿಗೆ ವಶಳಾದ ಅವಳು ದುಃಖಿಸುತ್ತಾ ನುಡಿದಳು: "
ಪತ್ನಿಯನ್ನು ತ್ಯಜಿಸಿ ಪುರುಷನು ಮತ್ತೊಬ್ಬಳನ್ನು ವಿವಾಹವಾಗುತ್ತಾ
ಭ್ರಷ್ಟಸ್ತ್ರೀಯ ಗತಿಯೇನು? ಲೋಕದ ಭಯದಿಂದಲಾಗಲೀ ಅಥವಾ
ದಿಂದಲೇ ಆಗಲಿ ಮನಸ್ಸನ್ನು ಬದಲಾಯಿಸಿರಿ. ನೀವು ನನ್ನನ್ನು ಕೆಡಿ
ಳನ್ನಾಗಿ ಮಾಡಿ ಹೊರಟುಹೋಗುವಿರಿ. ನಾನು ಕೆಟ್ಟು ಒಬ್ಬಳೇ
ದುರ್ಬುದ್ಧಿಯ ಋಷಿಗಳೇ, ನನ್ನನ್ನು ಬಿಟ್ಟುಬಿಡಿ." ಹೀಗೆ ಋಷಿಗಳ
ಅವಳು ಗುಹೆಯ ಬಾಗಿಲಿನ ಮೂಲಕ ಹೊರಗೆ ಹೋದಳು.

**ಪುನರ್ನಿಗೃಹ್ಯ ತಾಂ ಬಾಲಾಂ ಬಲಾತ್ಕಾರಾನ್ಮುನೀಶ್ವರಃ ।**
**ಪ್ರಾಣತ್ಯಾಗೇ ಮತಿಂ ಚಕ್ರೇ ಗಲಂ ಬದ್ಧ್ವಾ ಕುಮಾರಿಕಾ ॥ ೮**

ವಿಶ್ವಾಮಿತ್ರರು ಅವಳನ್ನು ಪುನಃ ಬಲಾತ್ಕಾರವಾಗಿ ಹಿಡಿದುಕೊಂ
ಅವಳು ತನ್ನ ಪ್ರಾಣತ್ಯಾಗಮಾಡಲು ತನ್ನ ಕುತ್ತಿಗೆಯನ್ನು ಹಿಸುಗಿ

**ತದಾ ತಾಂ ಸಾಂತ್ವಯಾಮಾಸ ಬಹುಧೈವ ಪ್ರತಿಶ್ರುತೈಃ ।**
**ವಿಶ್ವಸ್ತಾ ಸಾ ಪ್ರತಿಶ್ರುತ್ಯ ಮುನಿಂ ವಾಕ್ಯಮಥಾಬ್ರವೀತ್ ॥ ೯೦**

ವಿಶ್ವಾಮಿತ್ರನು ಅವಳನ್ನು ನಾನಾ ಮಾತುಗಳಿಂದ ಸಮಾಧಾನ
ಅದನ್ನು ಕೇಳಿ ಊರ್ವಶಿಯು ಹೇಳಿದಳು.

**ನ ತ್ಯಾಜ್ಯಾಹಂ ತ್ವಯಾ ಕ್ವಾಪಿ ತ್ವನ್ನಿಷೇಧೇ ಮಮಾಪಿ ಚ ।**
**ಸ್ವೇಚ್ಛಯಾ ಗಮನೇ ವಿಪ್ರ ಧರ್ಮಃ ಸಾಕ್ಷೀತಿ ತ್ವಂ ವದ ॥ ೯೧**

ಎಂತಹ ಕಠಿಣಪ್ರಸಂಗ ಬಂದರೂ ನೀವು ನನ್ನನ್ನು ತ್ಯಜಿಸ
ಯಾವಾಗ ನೀವು ಇಲ್ಲದಂತೆಯಾಗುವಿರೋ, ಆಗ ನಾನೂ ಸಹ ಇಲ್ಲದಂತೆ
ನಿಮ್ಮ ಮನಸ್ಸಿಗೆ ಬಂದಂತೆ ನಡೆಯುವುದು ಸರಿಯಲ್ಲ. ಈ ಪ್ರತಿಜ್ಞೆಗೆ
ಸಾಕ್ಷಿ ಎಂದು ಹೇಳಿರಿ.

**ಓಮಿತ್ಯುಕ್ತ್ವಾ ತಯಾ ರೇಮೇ ಷಷ್ಟಿವರ್ಷಸಹಸ್ರಕಮ್ ।**
**ನಿತ್ಯಕರ್ಮಾದಿಕಂ ಸರ್ವಂ ತ್ಯಕ್ತವಾನ್ ಕಾಮುಕೋ ಮುನಿಃ ॥**

ಹಾಗೆಯೇ ಆಗಲೆಂದು ಹೇಳಿ ವಿಶ್ವಾಮಿತ್ರರು ಆ ಸ್ತ್ರೀಯೊಡನೆ
ಸಹಸ್ರ ವರ್ಷಗಳ ಕಾಲ ರಮಿಸಿದರು. ಈ ಕಾಲದಲ್ಲಿ ನಿತ್ಯಕರ್ಮಗಳನ್
ಕೇವಲ ಕಾಮುಕರಾದರು.

**ತೇನ ದೋಷೇಣ ತಸ್ಯಾಪಿ ಕುಷ್ಠೋऽಭೂತ್ಸಾರ್ವದೈಹಿಕಃ ।**
**ಗಂತುಂ ವಿಹಾಯ ತಂ ನಾರೀ ಶನೈಃ ಸಾ ಚೋಪಚಕ್ರಮೇ ॥ ೯೩ ॥**

ಈ ದೋಷದಿಂದ ವಿಶ್ವಾಮಿತ್ರರ ದೇಹಕ್ಕೆಲ್ಲ ಕುಷ್ಠ ರೋಗ ಬಂದಿತು. ಇದನ್ನು ನೋಡಿ ಆ ಸ್ತ್ರೀಯು ಇವರನ್ನು ಬಿಟ್ಟು ಹೋಗಲು ಮೆಲ್ಲನೆ ಪ್ರಯತ್ನಿಸಿದಳು.

**ವಿಶ್ವಾಮಿತ್ರಂ ತದಾ ಪ್ರಾಹ ಮುನೇ ದೂರೇऽಸ್ತಿ ಬಾಂಧವಃ ।**
**ಮಾತುಲೇಯಶ್ಚ ತಂ ದ್ರಷ್ಟುಮಿಚ್ಛಾ ಮೇ ಜಾಯತೇ ಭೃಶಮ್ ॥**
**ತತೋ ಗಚ್ಛಾಮಿ ತ್ವಂ ತಿಷ್ಠ ಪುನರ್ಯಾಮಿ ನ ಸಂಶಯಃ ॥ ೯೪ ॥**

ವಿಶ್ವಾಮಿತ್ರರಿಗೆ ಹೇಳಿದಳು : " ಋಷಿಗಳೇ ! ದೂರದಲ್ಲಿ ನನ್ನ ಬಂಧುವು ಇರುತ್ತಾನೆ, ಸೋದರಮಾವನೂ ಇದ್ದಾನೆ, ಅವರನ್ನು ನೋಡಬೇಕೆಂಬ ಇಚ್ಛೆ ಹುಟ್ಟಿದೆ, ನಾನು ಹೋಗುತ್ತೇನೆ, ನೀವು ಇಲ್ಲಿಯೇ ಇರಿ, ನಾನು ಪುನಃ ಇಲ್ಲಿಗೆ ವಾಪಸ್ಸು ಬರುತ್ತೇನೆ ಸಂಶಯವಿಲ್ಲ."

**ಇತಿ ತಸ್ಯಾಃ ವಚಃ ಶ್ರುತ್ವಾ ವಿರಹಾಕುಲಮಾನಸಃ ।**
**ತ್ವಯೈವ ಸಹ ಚಾಯಾಮಿ ತ್ವಾಂ ವಿನಾ ನೋತ್ಸಹೇ ಕ್ಷಣಮ್ ॥ ೯೫ ॥**

ಅವಳ ಮಾತನ್ನು ಕೇಳಿದ ಋಷಿಗಳು ತಮಗೆ ಅವಳಿಂದ ವಿರಹವಾಗುವುದೆಂಬ ದುಃಖದಿಂದ ಹೇಳಿದರು : " ನಿನ್ನನ್ನು ಬಿಟ್ಟು ಒಂದು ಕ್ಷಣ ಕಾಲವೂ ಇರಲಾರೆ, ನಿನ್ನ ಸಂಗಡ ನಾನೂ ಸಹ ಬರುತ್ತೇನೆ."

**ಇತಿ ತದ್ವಚನಂ ಶ್ರುತ್ವಾ ಮುನಿಂ ವಾಕ್ಯಮುವಾಚ ಹ ।**
**ಜಾರಂ ತು ತ್ವಾಂ ಸ ವಿಜ್ಞಾಯ ಮಾತುಲೇಯೋ ಹನಿಷ್ಯತಿ ॥ ೯೬ ॥**
**ಮಾಂ ಚ ತತ್ರ ನ ಸಂದೇಹಸ್ತತಃ ಶಂಕೇ ತ್ವಯಾ ಸಹ ।**
**ಗಂತುಂ ನ ಚೋತ್ಸಹೇ ತಿಷ್ಠ ಶೀಘ್ರಂ ಯಾಮಿ ಪುನರ್ಮುನೇ ॥ ೯೭ ॥**

ಋಷಿಗಳ ಮಾತನ್ನು ಕೇಳಿ ಸ್ತ್ರೀಯು ನುಡಿದಳು : " ನೀವೂ ನನ್ನ ಸಂಗಡ ಬಂದರೆ ನೀವು ಜಾರರೆಂದು ತಿಳಿದು ನನ್ನ ಸೋದರಮಾವನ ಮಗನು ನಿಮ್ಮನ್ನೂ ನನ್ನನ್ನೂ ಸಂಹರಿಸುವನು, ಸಂಶಯವಿಲ್ಲ. ನಿಮ್ಮನ್ನು ನನ್ನ ಸಂಗಡ ಕರೆದುಕೊಂಡು ಹೋಗಲು ನನಗೆ ಇಷ್ಟವಿಲ್ಲ. ನೀವು ಇಲ್ಲಿಯೇ ಇರಿ. ನಾನು ಬೇಗನೆ ವಾಪಸ್ಸು ಬರುತ್ತೇನೆ."

**ಪುನಸ್ತಸ್ಯಾ ವಚಃ ಶ್ರುತ್ವಾ ಮುನಿರ್ವಾಕ್ಯಮುವಾಚ ಹ ।**
**ಪ್ರಾಪ್ಸ್ಯಾಹಂ ಸಾರನೇಯತ್ವಂ ತ್ವಯಾ ಸಾಕಂ ವ್ರಜಾಮಿ ಚ ॥ ೯೮ ॥**
**ತ್ವತ್ಪ್ರೋಷಿತಂ ಚ ಜಾನಂತಿ ನಾವಯೋರ್ವಿರಹೋ ಭವೇತ್ ।**

ಅವಳ ಮಾತನ್ನು ಕೇಳಿದ ವಿಶ್ವಾಮಿತ್ರರು ಪುನಃ ಹೇಳಿದರು—"ನಾನು ನಾಯಿಯ ರೂಪದಿಂದ ನಿನ್ನೊಡನೆ ಬರುತ್ತೇನೆ. ನೀನು ಸಾಕಿರುವ ನಾಯಿಯೆಂದು ಅವರೆಲ್ಲ ತಿಳಿಯುತ್ತಾರೆ. ನನಗೆ ನಿನ್ನನ್ನು ಬಿಟ್ಟು ದುಃಖವಿರುವುದಿಲ್ಲ."

ಊರೀಕೃತ್ಯ ಚ ತಸ್ಯೇದಂ ಸಾರಮೇಯಸ್ವರೂಪಿಣಾ ॥ ೯೯ ॥
ಸಾರ್ಧಂ ತೇನ ಮುನೀಂದ್ರೇಣ ಯಯೌ ರಾಜಶಿಲಾಂ ಪುರೀಮ್ ।
ದೇವೇಂದ್ರಸ್ಯ ಸಭಾಮಧ್ಯೇ ಸ್ಥಿತೇಯಂ ದೇವರೂಪಿಣೀ ॥ ೧೦೦ ॥

ಈ ಮಾತಿಗೆ ಒಪ್ಪಿದ ಊರ್ವಶಿಯು ನಾಯಿಯರೂಪದಲ್ಲಿದ್ದ ವಿಶ್ವಾಮಿತ್ರರನ್ನು ಕರೆದುಕೊಂಡು ರಾಜಶಿಲಾ ನಗರಕ್ಕೆ ಬಂದಳು. ಅಲ್ಲಿ ದೇವೇಂದ್ರನ ಸಭೆಯಲ್ಲಿ ತನ್ನ ನಿಜವಾದ ಸುಂದರರೂಪದಿಂದ ಕುಳಿತುಕೊಂಡಳು.

ವಿಶ್ವಾಮಿತ್ರಂ ವಸಿಷ್ಠಸ್ತು ಕಿಮೇತದಿತಿ ಚಾಬ್ರವೀತ್ ।
ಆತ್ಮಾನಂ ಚ ಆತ್ಮನಾ ನಿಂದನ್ ವ್ರೀಡಯಾಽವನತೋಽಭವತ್ ॥ ೧೦೧ ॥

ಈ ದೃಶ್ಯವನ್ನು ನೋಡಿದ ವಸಿಷ್ಠರು ವಿಶ್ವಾಮಿತ್ರರನ್ನು ಕುರಿತು "ಇದೇನು ?" ಎಂಬುದಾಗಿ ಕೇಳಲು ವಿಶ್ವಾಮಿತ್ರರು ತಮ್ಮನ್ನು ತಾವೇ ಮನಸ್ಸಿನಲ್ಲಿ ನಿಂದಿಸಿಕೊಳ್ಳುತ್ತಾ ನಾಚಿಕೆಯಿಂದ ತಲೆತಗ್ಗಿಸಿದರು.

ವಿಶ್ವಾಮಿತ್ರಂ ನಿರೀಕ್ಷ್ಯಾಥ ದೇವೇಂದ್ರೋ ವಾಕ್ಯಮಬ್ರವೀತ್ ।
ತಥ್ಯಂ ವದಾಮಿ ನಾತಥ್ಯಂ ಹಿತಂ ಬುದ್ಧ್ವಾ ಸುಖಂ ವ್ರಜ ॥ ೧೦೨ ॥
ಮಹದತಿಕ್ರಮಣಂ ಪುಂಸಾಂ ಅನರ್ಥಾಯ ಭವೇದ್ಧ್ರುವಮ್ ।
ವಸಿಷ್ಠದ್ರೋಹಸಂಭೂತಾ ವಿಪದಶ್ಚ ತವಾಗತಾಃ ॥ ೧೦೩ ॥

ವಿಶ್ವಾಮಿತ್ರರನ್ನು ನೋಡಿ ದೇವೇಂದ್ರನು ಮಾತನಾಡಿದನು—"ಋಷಿಗಳೇ, ನಾನು ಸತ್ಯವನ್ನೇ ನುಡಿಯುತ್ತೇನೆ, ಸುಳ್ಳು ಹೇಳುವುದಿಲ್ಲ; ಇದರಿಂದ ನಿಮ್ಮ ಹಿತವನ್ನು ತಿಳಿದುಕೊಂಡು ಸುಖವಾಗಿ ಆಶ್ರಮಕ್ಕೆ ಹೋಗಿ. ಜ್ಞಾನಿಗಳಿಗೆ ಅವಮಾನ ಮಾಡುವುದು ಅನರ್ಥಕ್ಕೆ ಕಾರಣವಾಗುತ್ತದೆ, ಇದು ನಿಶ್ಚಯ. ವಸಿಷ್ಠರಿಗೆ ದ್ರೋಹ ಮಾಡುವಂತಹ ಕಾರ್ಯದಿಂದ ನಿಮಗೆ ಇಂತಹ ದುರ್ದಶೆಯು ಬಂದಿದೆ.

ತಸ್ಮಾತ್ತ್ವಂ ತು ಪ್ರಸಾದ್ಯೈವ ಸುಖಂ ತಿಷ್ಠ ಮುನೀಶ್ವರ ।
ಇತೀರಿತಂ ಹರೇಃ ಶ್ರುತ್ವಾ ಪಶ್ಚಾತ್ತಾಪಮುಪೇಯಿವಾನ್ ॥ ೧೦೪ ॥
ವಸಿಷ್ಠಂ ಪ್ರಾರ್ಥಯಾಮಾಸ ಕ್ಷಮಸ್ವೇತಿ ಪುನರ್ವದನ್ ।
ನಿರ್ವಿಣ್ಣಂ ತಂ ತತೋ ದೃಷ್ಟ್ವಾ ವಸಿಷ್ಠೋಽಪಿ ದಯಾನ್ವಿತಃ ॥ ೧೦೫ ॥

**ದದೌ ಸ್ವಸಾಮ್ಯಮತುಲಂ ವಿಶ್ವಾಮಿತ್ರಾಯ ಧೀಮತೇ ।**
**ಉಪದಿಶ್ಯ ತಥಾ ಕುಷ್ಠನಿವೃತ್ತ್ಯರ್ಥಂ ಮುನೀಶ್ವರಃ ॥ ೧೦೩ ॥**
**ಮಾಘಸ್ನಾನಂ ಹರೇಃ ಪೂಜಾಂ ಗಾಯತ್ರ್ಯಾ ಜಪಮೇವ ಚ ।**
**ವಸಿಷ್ಠೋ ಹರಿಣಾ ಸಾರ್ಧಂ ತತ್ರೈವಾಂತರಧೀಯತ ॥ ೧೦೭ ॥**

ಆದುದರಿಂದ ನೀವು ವಸಿಷ್ಠರನ್ನು ಪ್ರಸನ್ನೀಕರಿಸಿಕೊಂಡು ಸುಖದಿಂದಿರಿ" ಎಂಬ ಇಂದ್ರನ ಮಾತನ್ನು ಕೇಳಿದ ವಿಶ್ವಾಮಿತ್ರರು ಪಶ್ಚಾತ್ತಾಪದಿಂದ ವಸಿಷ್ಠರನ್ನು "ನನ್ನನ್ನು ಕ್ಷಮಿಸಿರಿ" ಎಂದು ಪುನಃ ಪುನಃ ಕೇಳಿಕೊಂಡರು. ಕಾಂತಿಹೀನರಾಗಿದ್ದ ವಿಶ್ವಾಮಿತ್ರರನ್ನು ದಯಾವಂತರಾದ ವಸಿಷ್ಠರು ನೋಡಿ ತಮ್ಮ ಸಮಾನ ಸ್ಥಾನವನ್ನು ಕೊಟ್ಟರು. ಕುಷ್ಠರೋಗದಿಂದ ಬಿಡುಗಡೆಹೊಂದಲು ಜ್ಞಾನಿಗಳಾದ ವಿಶ್ವಾಮಿತ್ರರಿಗೆ ಮಾಘಸ್ನಾನ ಮಾಡಿ, ಶ್ರೀಹರಿಯ ಪೂಜೆಯನ್ನು ಭಕ್ತಿಯಿಂದ ಆಚರಿಸಿ, ಗಾಯತ್ರಿಮಂತ್ರವನ್ನು ಜಪಿಸಲು ಉಪದೇಶಿಸಿದರು. ನಂತರ ವಸಿಷ್ಠರು ಇಂದ್ರನೊಡನೆ ಅಲ್ಲಿಯೇ ಅದೃಶ್ಯರಾದರು.

**ಸಾಪಿ ನಾರೀ ಯಯೌ ಸ್ವರ್ಗಂ ಮುನಿಶ್ಚ ತಪಸೇ ಯಯೌ ।**
**ಮಾಘಸ್ನಾನಂ ತಥಾ ಕೃತ್ವಾ ಕೃತ್ವಾ ವಿಷ್ಣೋಶ್ಚ ಪೂಜನಮ್ ॥ ೧೦೮ ॥**
**ಜಪಂ ಕೃತ್ವಾ ಚ ಗಾಯತ್ರ್ಯಾ ಮುಕ್ತಃ ಕುಷ್ಠಾತ್ತತೋಽಭವತ್ ।**
**ತಸ್ಮಾನ್ನ ಮಾಘಸದೃಶಃ ಪರೋ ಧರ್ಮೋಽಸ್ತಿ ಕಶ್ಚನ ॥**
**ತಸ್ಮಾತ್ಸೇವ್ಯಃ ಸದಾ ಪುಂಸಾ ಪುರುಷಾರ್ಥಾನಾಂ ಚ ಸಿದ್ಧಯೇ ॥ ೧೦೯ ॥**

ಊರ್ವಶಿಯು ಸ್ವರ್ಗಕ್ಕೆ ತೆರಳಿದಳು. ವಿಶ್ವಾಮಿತ್ರರು ತಪಸ್ಸಿಗಾಗಿ ಹೊರಟುಹೋದರು. ಮಾಘಸ್ನಾನ ಮಾಡಿ, ಶ್ರೀವಿಷ್ಣುವಿನ ಪೂಜೆಯನ್ನು ಮಾಡಿ, ಗಾಯತ್ರೀಮಂತ್ರವನ್ನು ಜಪಿಸಿ ಕುಷ್ಠರೋಗದಿಂದ ಪಾರಾದರು. ಆದುದರಿಂದ ಮಾಘಕ್ಕೆ ಸದೃಶವಾದ ಇನ್ನೊಂದು ಉತ್ತಮ ಧರ್ಮವಿಲ್ಲ. ಜನರು ಪುರುಷಾರ್ಥ ಪ್ರಾಪ್ತಿಗಾಗಿ ಮಾಘಮಾಸದ ಧರ್ಮಗಳನ್ನು ಅನುಸರಿಸಬೇಕು.

ಇತಿ ಶ್ರೀ ವಾಯುಪುರಾಣೇ ಮಾಘಮಾಸಮಾಹಾತ್ಮ್ಯೇ
ಸಪ್ತವಿಂಶೋಽಧ್ಯಾಯಃ

ಶ್ರೀವಾಯುಪುರಾಣಾಂತರ್ಗತ ಮಾಘಮಾಸ ಮಾಹಾತ್ಮ್ಯೆಯಲ್ಲಿ
ಇಪ್ಪತ್ತೇಳನೇ ಅಧ್ಯಾಯವು ಸಮಾಪ್ತಿಯಾಯಿತು.

*

**ಗಾಲವ ಉವಾಚ—**

**ಪ್ರಾತರ್ಮಾಘೇ ನದೀಸ್ನಾನಂ ತಥಾ ಮಾಧವಪೂಜನಮ್ ।**
**ಗೀತಾಪಾಠಶ್ಚ ಸತತಂ ನಾಲ್ಪಸ್ಯ ತಪಸಃ ಫಲಮ್ ॥ ೧ ॥**

ಗಾಲವರು ಹೇಳಿದರು :

ಮಾಘಮಾಸದಲ್ಲಿ ಪ್ರಾತಃಕಾಲದಲ್ಲಿ ನದಿಯಲ್ಲಿ ಸ್ನಾನಮಾಡಿ, ಶ್ರೀಹರಿಯ ಪೂಜೆಮಾಡಿ ನಿರಂತರ ಗೀತಾ ಪಾಠ ಪ್ರವಚನದಲ್ಲಿ ತೊಡಗಿರುವುದು ಅಲ್ಪ ತಪಸ್ಸಿನ ಫಲವಲ್ಲ.

**ಯೋ ದದ್ಯಾನ್ಮಾಘಮಾಸೇ ತು ಮಾಧವಪ್ರತಿಮಾಂ ದ್ವಿಜಃ ।**
**ಸ ಸರ್ವಕುಲಮುದ್ಧೃತ್ಯ ವಿಷ್ಣುಲೋಕೇ ಮಹೀಯತೇ ॥ ೨ ॥**

ಯಾವ ಬ್ರಾಹ್ಮಣನು ಮಾಘಮಾಸದಲ್ಲಿ ಮಾಧವಪ್ರತಿಮೆಯನ್ನು ದಾನ ಮಾಡುವನೋ ಅವನು ಸಮಸ್ತ ಕುಲದವರನ್ನು ಉದ್ಧರಿಸಿ ವಿಷ್ಣುಲೋಕದಲ್ಲಿ ಸಂತೋಷದಿಂದ ಇರುವನು.

**ಯೋ ಮಾಘೇ ಗುರುಮುದ್ದಿಶ್ಯ ಸ್ನಾನಮೇಕಂ ಕರಿಷ್ಯತಿ ।**
**ಅಜ್ಞಾನತಿಮಿರಂ ಹತ್ವಾ ಭಿತ್ವಾ ವೈ ಸೂರ್ಯಮಂಡಲಮ್ ॥ ೩ ॥**
**ಸಾಯುಜ್ಯಂ ಸಮವಾಪ್ನೋತಿ ವಿಷ್ಣುನಾ ಪ್ರಭವಿಷ್ಣುನಾ ।**

ಯಾರು ಮಾಘದಲ್ಲಿ ಗುರುಗಳಿಗೋಸ್ಕರ ಒಂದು ವಿಶೇಷಸ್ನಾನ ಮಾಡುವನೋ ಅವನು ಅಜ್ಞಾನವೆಂಬ ಕತ್ತಲೆಯನ್ನು ನಾಶಪಡಿಸಿಕೊಂಡು, ಸೂರ್ಯಮಂಡಲವನ್ನು ಭೇದಿಸಿ ವಿಷ್ಣುಸಾಯುಜ್ಯ ಹೊಂದುವನು.

**ಯೋ ಮಾಘ್ಯಾಂ ಕುರುತೇ ಶ್ರಾದ್ಧಂ ಪಿತೄನುದ್ದಿಶ್ಯ ಮಾನವಃ ॥ ೪ ॥**
**ಗಯಾಶ್ರಾದ್ಧಶತಂ ತೇನ ಕೃತಮೇವ ನ ಸಂಶಯಃ ।**

ಯಾರು ಮಾಘದಲ್ಲಿ ಪಿತೃಗಳಿಗೋಸ್ಕರ ಶ್ರಾದ್ಧಮಾಡುವನೋ, ಅವನು ಗಯಾ ಕ್ಷೇತ್ರದಲ್ಲಿ ನೂರು ಶ್ರಾದ್ಧ ಮಾಡಿದಂತೆಯಾಗುತ್ತದೆ, ಸಂಶಯವಿಲ್ಲ.

**ಯೋ ಮಾಘ್ಯಾಂ ವೃಷಭಂ ನೀಲಂ ಪಿತೄನುದ್ದಿಶ್ಯ ಚೋತ್ಸೃಜೇತ್ ॥ ೫ ॥**
**ಪಿತರಶ್ಚೋದ್ಧೃತಾಸ್ತೇನ ಗಯಾಶ್ರಾದ್ಧಶತಂ ಕೃತಮ್ ।**

ಮಾಘಮಾಸದಲ್ಲಿ ಯಾರು ಪಿತೃಗಳಿಗೋಸ್ಕರ ನೀಲವರ್ಣದ ವೃಷಭವನ್ನು ದಾನಮಾಡಿ ಹೊರಕ್ಕೆ ಬಿಟ್ಟುಬಿಡುತ್ತಾರೆಯೋ ಅವರ ಪಿತೃಗಳು ಸದ್ಗತಿಯನ್ನು ಪಡೆಯುತ್ತಾರೆ. ಗಯಾದಲ್ಲಿ ನೂರು ಶ್ರಾದ್ಧಮಾಡಿದಂತಾಗುತ್ತದೆ.

**ಯೋ ಮಾಘ್ಯಾಂ ಭೋಜಯೇದ್ವಿಪ್ರಂ ಶಾಂತಂ ನಿಷ್ಕಲ್ಮಷಂ ಶುಚಿಮ್ ॥೬॥**
**ತೇನ ಸಖ್ಯಂ ಕರೋತ್ಯದ್ಧಾ ಭಗವನ್ ವಿಷ್ಣುರವ್ಯಯಃ ।**

ಮಾಘದಲ್ಲಿ ಯಾರು ನಿರ್ಮಲಚಿತ್ತನಾದ, ಶಾಂತನಾದ ಬ್ರಾಹ್ಮಣನಿಗೆ ಭೋಜನ ಮಾಡಿಸುವರೋ ಅಂತಹವರಿಗೆ ಷಡ್ಗುಣೈಶ್ವರ್ಯಪೂರ್ಣನಾದ, ನಾಶರಹಿತನಾದ ವಿಷ್ಣುವು ಮಿತ್ರನಾಗಿರುವನು.

**ಯೋ ದದ್ಯಾದ್ದೀಪಮಾಲಾಂ ತು ಪ್ರಯತೋ ವಿಷ್ಣುಮಂದಿರೇ ॥ ೭ ॥**
**ಪ್ರಕಾಶಯನ್ ದಿಶಃ ಸರ್ವಾ ದ್ವಿತೀಯ ಇವ ಭಾಸ್ಕರಃ ।**
**ವಿಷ್ಣೋಃ ಸಾಯುಜ್ಯಮಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ॥ ೮ ॥**

ಯಾರು ಶ್ರೀಹರಿಯ ದೇವಸ್ಥಾನದ ಉಪಯೋಗಕ್ಕಾಗಿ ದೀಪದ ಸಾಲುಗಳನ್ನು ದಾನಮಾಡುವರೋ, ಅವರು ಸ್ವತಃ ದಿಕ್ಕುದಿಕ್ಕುಗಳಲ್ಲಿಯೂ ಪ್ರಕಾಶವನ್ನು ಹರಡಿ ಎರಡನೆಯ ಸೂರ್ಯನಂತೆ ಇರುತ್ತಾರೆ; ವಿಷ್ಣುಲೋಕದಲ್ಲಿ ಸಾಯುಜ್ಯಮೋಕ್ಷ ಪಡೆಯುತ್ತಾರೆ, ಸಂಶಯವಿಲ್ಲ.

**ಗೋದಾನಂ ಮಾಘಮಾಸಸ್ಯ ಪೌರ್ಣಮ್ಯಾಂ ಕುರುತೇ ನರಃ ।**
**ತಸ್ಯ ಪುಣ್ಯಫಲಸ್ಯಾಸ್ಯ ಸಂಖ್ಯಾ ನೈವೋಪಜಾಯತೇ ॥ ೯ ॥**

ಮಾಘದಲ್ಲಿ ಹುಣ್ಣಿಮೆಯ ದಿನ ಗೋದಾನಮಾಡಿದವರಿಗೆ ದೊರೆಯುವ ಪುಣ್ಯವನ್ನು ಸಂಖ್ಯೆಗಳಿಂದ ವರ್ಣಿಸಲು ಸಾಧ್ಯವೇ ಇಲ್ಲ.

**ದೀಪದಾಃ ಕಾರ್ತಿಕೇ ಮಾಸಿ ಮಾಘೇ ಮಾಸಿ ಚ ವಸ್ತ್ರದಾಃ ।**
**ವೈಶಾಖೇ ಚಾನ್ನದಾಶ್ಚೈವ ನಾಪ್ನುವಂತಿ ಪುನರ್ಭವಮ್ ॥ ೧೦ ॥**

ಕಾರ್ತಿಕದಲ್ಲಿ ದೀಪದಾನಮಾಡುವವರಿಗೆ, ಮಾಘದಲ್ಲಿ ವಸ್ತ್ರದಾನಮಾಡುವವರಿಗೆ, ವೈಶಾಖದಲ್ಲಿ ಅನ್ನದಾನ ಮಾಡುವವರಿಗೆ ಪುನರ್ಜನ್ಮವಿಲ್ಲ.

**ಯೋ ದದ್ಯಾತ್ ಕಪಿಲಾಂ ಮಾಘೇ ಪೌರ್ಣಮ್ಯಾಂ ವಿಷ್ಣುತತ್ಪರಃ ।**
**ಸಾಕಂ ಪಿತೃಗಣೈಶ್ಚೈವ ವಿಷ್ಣೋಃ ಸಾಯುಜ್ಯಮಾಪ್ನುಯಾತ್ ॥ ೧೧ ॥**

ಮಾಘಶುದ್ಧ ಪೌರ್ಣಿಮೆಯಲ್ಲಿ ಯಾರು ವಿಷ್ಣುಭಕ್ತಿಯುತನಾಗಿ ಕಪ್ಪು ಬಣ್ಣದ ಹಸುವನ್ನು ದಾನಮಾಡುವನೋ ಅವನು ತನ್ನ ಪಿತೃಗಳಿಂದ ಸಹಿತನಾಗಿ ಸಾಯುಜ್ಯಮೋಕ್ಷವನ್ನು ಹೊಂದುತ್ತಾನೆ.

**ಗೋಃ ಕ್ಷೀರೇಣ ಚ ಯಃ ಕುರ್ಯಾತ್ ಸ್ನಾನಂ ವಿಷ್ಣೋರ್ಮಹಾತ್ಮನಃ ।**
**ಪ್ರೀಣಂತಿ ಪಿತರಃ ಸರ್ವೇ ನಾತ್ರ ಕಾರ್ಯಾ ವಿಚಾರಣಾ ॥ ೧೨ ॥**

ಗೋಕ್ಷೀರದಿಂದ ವಿಷ್ಣುವಿಗೆ ಅಭಿಷೇಕ ಮಾಡಿದರೆ ಪಿತೃಗಳೆಲ್ಲ ಸಂತುಷ್ಟ ರಾಗುತ್ತಾರೆ, ಸಂದೇಹವಿಲ್ಲ.

**ಸಹಸ್ರನಾಮಸ್ತವನಂ ಪಠೇನ್ ಮಾಘೇ ಜಲಪ್ಲುತಃ ।**
**ಸಂಪೂಜ್ಯ ಮಾಧವಂ ದೇವಂ ವಿಷ್ಣೋಃ ಸಾಯುಜ್ಯಮಾಪ್ನುಯಾತ್ ॥**

ಮಾಘಮಾಸದಲ್ಲಿ ಬಹಿರ್ಜಲದಲ್ಲಿ ಸ್ನಾನಮಾಡಿ, ವಿಷ್ಣುವನ್ನು ಪೂಜಿಸಿ, ಸಹಸ್ರನಾಮಸ್ತೋತ್ರವನ್ನು ಪಠಿಸಿದರೆ ವಿಷ್ಣುಸಾಯುಜ್ಯ ಮೋಕ್ಷ ಲಭಿಸುತ್ತದೆ.

**ಯೋ ಮಾಘ್ಯಾಂ ಚ ಗೃಹೇ ಸ್ನಾಯಾತ್ ಮಾನವಸ್ತು ದೃಢಾಂಗಕಃ ।**
**ಸ ಜೀವನ್ನೇವ ಚಾಂಡಾಲಃ ಸರ್ವಕರ್ಮಸು ಗರ್ಹಿತಃ ॥ ೧೪ ॥**

ಮಾಘಮಾಸದಲ್ಲಿ ಯಾರು ದೃಢಕಾಯನಾಗಿದ್ದರೂ ಮನೆಯಲ್ಲಿಯೇ ಸ್ನಾನ ಮಾಡುತ್ತಾನೆಯೋ ಅವನು ಬದುಕಿದ್ದಾಗಲೂ ಚಾಂಡಾಲಸಮನೇ, ಸರ್ವಕರ್ಮ ಗಳಲ್ಲಿ ಬಹಿಷ್ಕೃತನೇ.

**ಯಾ ನಾರೀ ಕುರುತೇ ಶೂರ್ಪಯುಗ್ಮಸ್ಯೋಪಾಯನಂ ಶುಚಿಃ ।**
**ಮಾಘಶುಕ್ಲತ್ರಯೋದಶ್ಯಾಂ ಗೌರೀಮುದ್ದಿಶ್ಯ ಸಾದರಮ್ ॥ ೧೫ ॥**
**ಏತಸ್ಯಾಃ ಕಂಠಸೂತ್ರಸ್ಯ ಬಾಧಾ ನೈವೋಪಜಾಯತೇ ।**

ಮಾಘಶುಕ್ಲ ತ್ರಯೋದಶಿಯಂದು ಯಾವ ಸ್ತ್ರೀಯು ಭಕ್ತಿಯಿಂದ, ಗೌರಿಯ ಪ್ರೀತ್ಯರ್ಥವಾಗಿ ಮೊರದಬಾಗಿನವನ್ನು ದಾನ ಮಾಡುವಳೋ ಅವಳ ಮಂಗಳ ಸೂತ್ರಕ್ಕೆ ಯಾವ ಬಾಧಕವೂ ಆಗುವುದಿಲ್ಲ.

**ಸ್ವರ್ಚಿತಂ ಮಾಧವಂ ದೃಷ್ಟ್ವಾಪ್ರಾತಃಸ್ನಾಯೀ ದ್ವಿಜೋತ್ತಮಃ ॥ ೧೬ ॥**
**ತಾವನ್ಮಾತ್ರೇಣ ಮುಕ್ತಃ ಸನ್ ವಿಷ್ಣುಲೋಕೇ ಮಹೀಯತೇ ।**

ಬ್ರಾಹ್ಮಣೋತ್ತಮನು ಮಾಘಮಾಸದಲ್ಲಿ ಸ್ನಾನಮಾಡಿ, ಅರ್ಚಿಸಿ ಅಲಂಕಾರ ಮಾಡಲ್ಪಟ್ಟ ಶ್ರೀ ಮಾಧವನ ಮೂರ್ತಿಯನ್ನು ದರ್ಶನಮಾಡಿದರೆ, ಅಷ್ಟುಮಾತ್ರ

ದಿಂದಲೇ ಸಕಲಪಾಪಗಳನ್ನೂ ಕಳೆದುಕೊಂಡು ವಿಷ್ಣುಲೋಕದಲ್ಲಿ ಆನಂದದಿಂದ ಇರುವನು.

**ಯೋ ದದ್ಯಾತ್ ಚಂದನಂ ವಿಷ್ಣೋಃ ಧೂಪಂ ವಾಪಿ ಮಹಾತ್ಮನಃ ॥ ೧೭ ॥**
**ತಸ್ಯೇಷ್ಟಾನ್ ಸಕಲಾನ್ ಕಾಮಾನ್ ದಾತಾ ವಿಷ್ಣುರ್ನ ಸಂಶಯಃ ।**
**ಅವ್ರತೇನ ನಯೇದ್ಯಸ್ತು ಮಾಸಮೇನಂ ನರಾಧಮಃ ॥**
**ಸ ರೌರವಂ ಸಮಾಸಾದ್ಯ ತಿಷ್ಠತ್ಯಾಭೂತಸಂಪ್ಲವಮ್ ॥ ೧೮ ॥**

ಸರ್ವೇಶ್ವರನಾದ ಶ್ರೀಹರಿಗೆ ಗಂಧವನ್ನಾಗಲೀ, ಧೂಪವನ್ನಾಗಲೀ ಸಮರ್ಪಣ ಮಾಡುವುದರಿಂದ, ಶ್ರೀಹರಿಯು ಅಂತಹವನ ಸಕಲ ಇಷ್ಟಾರ್ಥಗಳನ್ನೂ ನೀಡುವನು, ಸಂದೇಹವಿಲ್ಲ. ಮಾಘಮಾಸವನ್ನು ಯಾರು ಯಾವ ಬಗೆಯ ವ್ರತವನ್ನೂ ಮಾಡದೇ ಕಳೆಯುವನೋ, ಅವನು ರೌರವ ನರಕದಲ್ಲಿ ಜಗತ್ತಿನ ಪ್ರಳಯಕಾಲದವರೆಗೂ ಇರುತ್ತಾನೆ.

**ಕನ್ಯಾದಾನಶತಂ ಯಸ್ತು ದದನ್ಯತ್ಫಲಮಾಪ್ನುಯಾತ್ ।**
**ತತ್ಫಲಂ ಸಮವಾಪ್ನೋತಿ ಮಾಘ್ಯಾಂ ಕಾಂಸ್ಯಪ್ರದಾನತಃ ॥ ೧೯ ॥**

ನೂರು ಕನ್ಯಾದಾನ ಮಾಡಿದ ಫಲವನ್ನು ಮಾಘಮಾಸದಲ್ಲಿ ಕಂಚಿನಪಾತ್ರೆಯನ್ನು ದಾನಮಾಡುವುದರಿಂದ ಹೊಂದುವನು.

**ಘೃತಪೂರ್ಣಂ ಕಾಂಸ್ಯಪಾತ್ರಂ ಯೋ ದದ್ಯಾತ್ ವರ್ತಿಸಂಯುತಮ್ ।**
**ನ ವೈಧವ್ಯಮವಾಪ್ನೋತಿ ಮಾಂಗಲ್ಯಂ ಚಾಧಿಗಚ್ಛತಿ ॥ ೨೦ ॥**

ತುಪ್ಪದಿಂದ ತುಂಬಿದ ಕಂಚಿನ ಪಾತ್ರೆಯನ್ನು ಬತ್ತಿಯಸಹಿತ ದಾನಮಾಡಿದ ಸ್ತ್ರೀಯು ವೈಧವ್ಯವನ್ನು ಹೊಂದುವುದಿಲ್ಲ, ಎಲ್ಲ ಮಂಗಳ ಫಲಗಳನ್ನೂ ಪಡೆಯುತ್ತಾಳೆ.

**ಪಂಚಗವ್ಯಾನ್ಮಹಾವಿಷ್ಣುಂ ಯಃ ಸ್ನಾಪಯತಿ ಕೇಶವಮ್ ।**
**ರಾಜಸೂಯಸಹಸ್ರಸ್ಯ ಫಲಂ ಪ್ರಾಪ್ನೋತ್ಯಸಂಶಯಮ್ ॥ ೨೧ ॥**

ಶ್ರೀಹರಿಗೆ ಯಾರು ಪಂಚಗವ್ಯದಿಂದ ಅಭಿಷೇಕ ಮಾಡುವರೋ ಅವರು ಸಹಸ್ರ ರಾಜಸೂಯಯಾಗದ ಫಲವನ್ನು ಹೊಂದುವರು, ಸಂಶಯವಿಲ್ಲ.

**ಕ್ಷೀರಾನ್ನಂ ಶರ್ಕರಾಯುಕ್ತಂ ಸಘೃತಂ ವಿಷ್ಣವೇऽರ್ಪಯೇತ್ ।**
**ಸಾರ್ವಭೌಮೋ ಭವೇದ್ರಾಜಾ ಸಪ್ತಸ್ವಪಿ ಚ ಜನ್ಮಸು ॥ ೨೨ ॥**

ಯಾರು ಸಕ್ಕರೆ-ತುಪ್ಪದಿಂದ ಯುಕ್ತವಾದ ಕ್ಷೀರಾನ್ನವನ್ನು ವಿಷ್ಣುವಿಗೆ ಅರ್ಪಣೆಮಾಡುವರೋ, ಅವರು ಏಳು ಜನ್ಮಗಳಲ್ಲಿ ಸಾರ್ವಭೌಮನಾಗಿರುವರು.

**ಯಃ ಕ್ಷೀರಾನ್ನಂ ಪೌರ್ಣಮಾಸ್ಯಾಂ ವಿಷ್ಣವೇ ಪರಮಾತ್ಮನೇ ।**
**ಸೋಽಶ್ವಮೇಧಸಹಸ್ರಾಣಾಂ ಫಲಂ ಪ್ರಾಪ್ನೋತ್ಯಸಂಶಯಃ ॥ ೨೩ ॥**

ಪೌರ್ಣಿಮೆಯಲ್ಲಿ ಶ್ರೀಹರಿಗೆ ಕ್ಷೀರಾನ್ನವನ್ನು ಯಾವನು ಸಮರ್ಪಿಸುವನೋ ಅಂತಹವನು ಸಹಸ್ರ ಅಶ್ವಮೇಧಯಾಗದ ಫಲ ಹೊಂದುವನು, ಸಂಶಯವಿಲ್ಲ.

**ಯೋಽಶ್ವಂ ದದ್ಯಾತ್ ಪೌರ್ಣಮಾಸ್ಯಾಂ ಮಾಘೇ ಮಾಸಿ ದ್ವಿಜಾತಯೇ ।**
**ಗುರುತಲ್ಪಕೃತಾತ್ ಪಾಪಾತ್ ಮುಚ್ಯತೇ ನಾತ್ರ ಸಂಶಯಃ ॥ ೨೪ ॥**

ಯಾರು ಮಾಘಶುದ್ಧ ಹುಣ್ಣಿಮೆಯದಿನ ಬ್ರಾಹ್ಮಣನಿಗೆ ಕುದುರೆಯನ್ನು, ದಾನಮಾಡುವನೋ ಅವನು ಗುರುತಲ್ಪದ ಪಾಪದಿಂದ ಮುಕ್ತನಾಗುತ್ತಾನೆ, ಸಂಶಯವಿಲ್ಲ.

**ಪುರಾ ತು ಚಂದ್ರಮಾ ರಾಜಾ ಸಪ್ತದ್ವೀಪವತೀಂ ಮಹೀಮ್ ।**
**ಪ್ರಶಶಾಸ ಮಹಾವೀರ್ಯಃ ಕರದೀಕೃತಭೂಮಿಪಃ ॥ ೨೫ ॥**

ಹಿಂದೆ ಸಪ್ತದ್ವೀಪಗಳಿಂದ ಕೂಡಿದ ಭೂಭಾಗಕ್ಕೆ ಚಂದ್ರಮಾ ಎಂಬ ರಾಜನಿದ್ದನು. ಅವನು ಮಹಾಪರಾಕ್ರಮಶಾಲಿ, ಇತರ ರಾಜರುಗಳಿಂದ ಕಪ್ಪವನ್ನು ತೆಗೆದುಕೊಂಡು ರಾಜ್ಯವನ್ನು ಆಳುತ್ತಿದ್ದನು.

**ಪುರೋಹಿತಸ್ತು ತಸ್ಯಾಸೀತ್ ಧಿಷಣೋ ಭಗವಾನ್ಮುನಿಃ ।**
**ಸ ಕದಾಚಿತ್ ನವಮ್ಯಾಂ ತು ಮಾಸಸ್ಯಾಶ್ವಿನಸಂಜ್ಞಿನಃ ॥ ೨೬ ॥**
**ಉತ್ಸವಂ ಕಾರಯಾಮಾಸ ಮಹಾಲಕ್ಷ್ಮ್ಯಾ ಮಹಾವ್ರತಃ ।**
**ರಾಜ್ಞಾ ತೇನೇಂದುನಾ ಪುಣ್ಯಂ ಸರ್ವಸಂಪದ್ವಿವರ್ಧನಮ್ ॥ ೨೭ ॥**

ಆ ರಾಜನಿಗೆ ಜ್ಞಾನಿಯಾದ ಧಿಷಣನೆಂಬ ಪುರೋಹಿತನಿದ್ದನು. ಒಂದು ಆಶ್ವಯುಜಮಾಸದ ನವಮಿಯಂದು ರಾಜನು ಮಹಾಲಕ್ಷ್ಮಿಯ ಪೂಜಾಖ್ಯ ಉತ್ಸವವನ್ನು ಆಚರಿಸಿದನು. ಆ ಪುಣ್ಯದಿಂದ ತನ್ನ ಸರ್ವ ಸಂಪತ್ತೂ ಅಭಿವೃದ್ಧಿ ಯಾಗಬೇಕೆಂಬ ಇಚ್ಛೆ ಅವನಿಗಿತ್ತು.

**ರಾಜ್ಞೀಭಿಃ ನಿರ್ಯಯೌ ಸಾಕಂ ಭಾರ್ಯಾ ತಸ್ಯ ಬೃಹಸ್ಪತೇಃ ।**
**ಗಜಾಶ್ವಾದಿವಿಭೂತೀನಾಂ ಆರ್ತಿಕ್ಯಂ ಕರ್ತುಮುದ್ಯತಾ ॥ ೨೮ ॥**

ಬೃಹಸ್ಪತ್ಯಾಚಾರ್ಯರ ಪತ್ನಿಯೂ ಸಹ ರಾಜನ ಪತ್ನಿಯರೊಡನೆ ಕೂಡಿಕೊಂಡು ಆನೆ, ಕುದುರೆ ಮುಂತಾದ ಐಶ್ವರ್ಯಕ್ಕೆ ಆರತಿ ಮಾಡಲು ಬಂದಳು.

**ನಾರೀಮಧ್ಯೇ ತು ಸಾ ತಾರಾ ಬ್ರಹ್ಮಾಣೀನಾಯಿಕಾಯುತೇ ।**
**ತಾಂ ದೃಷ್ಟ್ವಾ ಮೋಹಿತೋ ರಾಜಾ ಪುನರಂತಃಪುರೀಂ ಗತಾಮ್ ॥ ೨೯ ॥**

ಆ ಸ್ತ್ರೀಯರ ಮಧ್ಯೆ ತಾರಾದೇವಿಯು ಅತ್ಯಂತ ಸುಂದರಳಾಗಿ ಕಂಡಳು. ಅವಳನ್ನು ರಾಜನು ಮೋಹಿಸಿದ. ಆರ್ತಿಕ್ಯವಾದ ನಂತರ ಅವಳು ಅಂತಃಪುರಕ್ಕೆ ಹೋದಳು.

**ನಿರುಧ್ಯ ಬುಭುಜೇ ಬ್ರಹ್ಮಜಾಯಾಂ ಕಾಮವಶಂ ಗತಃ ।**
**ಯಯಾಚೇ ಧಿಷಣೋ ಭೂಪಂ ಭಾರ್ಯಾಂ ದೇಹೀತಿ ನಿಶ್ಚಯಮ್ ॥**

ಉತ್ಕಟಕಾಮವಶನಾಗಿದ್ದ ರಾಜನು ಅವಳನ್ನು ಬಲಾತ್ಕಾರದಿಂದ ಹಿಡಿದು ಭೋಗಿಸಿದನು. ಧಿಷಣನು ರಾಜನಿಗೆ ಬೃಹಸ್ಪತಿಯ ಪತ್ನಿಯನ್ನು ಕೊಟ್ಟುಬಿಡೆಂದು ಪ್ರಾರ್ಥಿಸಿಕೊಂಡನು. ಬೃಹಸ್ಪತಿಯೂ ಸಹ ತನ್ನ ಹೆಂಡತಿಯನ್ನು 'ಕೊಡು' ಎಂಬುದಾಗಿ ಕೇಳಲು 'ಬರುವುದು ನಿಶ್ಚಯ'ವೆಂದು ಧಿಷಣನು ನುಡಿದನು.

**ಸೋಮಂ ಸಂಬೋಧಯಾಮಾಸ ನೋಚಿತಂ ಚ ಮಹಾತ್ಮನಃ ।**
**ಬ್ರಹ್ಮಜಾಯಾ ಮಹಾಘೋರಾ ಕ್ಷತ್ರಾಣಾಂ ಮಾತೃಸಂಮಿತಾ ॥ ೩೦ ॥**

ಹಿಂದೆ ಚಂದ್ರನನ್ನು ಕುರಿತು ಬೃಹಸ್ಪತಿಯು ಹೇಳಿದುದನ್ನು ಧಿಷಣನು ಜ್ಞಾಪಿಸಿದನು—ಮಹಾತ್ಮರಿಗೆ ಇಂತಹ ಕಾರ್ಯವು ಸರಿಯಲ್ಲ. ಬ್ರಾಹ್ಮಣಸ್ತ್ರೀ ಬಹಳ ಘೋರಳು. ಕ್ಷತ್ರಿಯರಿಗೆ ಬ್ರಾಹ್ಮಣಸ್ತ್ರೀಯು ತಾಯಿಯ ಸಮಾನ.

**ಆಯುಷ್ಯಂ ಚ ತಥಾ ವಿತ್ತಂ ಮಾನಂ ಸೌಭಾಗ್ಯಮೇವ ಚ ।**
**ಸಂತತಿಂ ಸಂಪದಶ್ಚಾಪಿ ಸರ್ವಂ ಹಂತಿ ಕುಲಾಂಗನಾ ॥ ೩೧ ॥**

ಕುಲಸ್ತ್ರೀಯು ಆಯುಸ್ಸು, ದ್ರವ್ಯ, ಮರ್ಯಾದೆ, ಸೌಭಾಗ್ಯ, ಸಂತತಿ, ಐಶ್ವರ್ಯ ಇವೆಲ್ಲವನ್ನು ನಾಶಮಾಡಲು ಸಮರ್ಥಳು.

**ಚತುರಂಗಬಲೈರ್ಯುಕ್ತಮಪಿ ತ್ವಾಂ ಚ ಮದೋದ್ಧತಮ್ ।**
**ಶಕ್ತಿರ್ಮೇ ಭೂಯಸೀ ಭೂಪ ಹಂತುಂ ನಾತ್ರ ವಿಚಾರಣಾ ॥ ೩೨ ॥**

ಚತುರಂಗಸೈನ್ಯದಿಂದ ಕೂಡಿದವನಾಗಿದ್ದರೂ ಸಹ ಮದೋನ್ಮತ್ತನಾದ ನಿನ್ನನ್ನು ಸಂಹರಿಸುವ ಶಕ್ತಿ ನನಗೆ ಬೇಕಾದಷ್ಟಿದೆ, ಇದರಲ್ಲಿ ಸಂಶಯವಿಲ್ಲ.

**ನಾನಾಮಂತ್ರಪ್ರವೀಣೋಽಹಂ ಸರ್ವಶಸ್ತ್ರಾಸ್ತ್ರಕೋವಿದಃ ।**
**ನ ಮಯಾ ಸದೃಶಃ ಕೋಽಪಿ ಧನುರ್ವಿದ್ಯಾವಿಶಾರದಃ ॥ ೩೪ ॥**

ನಾನು ಅನೇಕ ಮಂತ್ರಗಳಲ್ಲಿ ಪ್ರವೀಣನು, ಸಮಸ್ತ ಶಾಸ್ತ್ರಗಳಲ್ಲಿ ಪಂಡಿತನು, ಧನುರ್ವಿದ್ಯೆಯಲ್ಲಿ ನನಗೆ ಸದೃಶರಾದವರು ಯಾರೂ ಇಲ್ಲ.

**ಮಾವಮಂಸ್ಥಾ ದುರಾತ್ಮಾ ತ್ವಂ ಆತ್ಮಶಂಸಾಪರಾಯಣಃ ।**
**ವಿಜ್ಞಪ್ತಮಪಿ ವಕ್ತವ್ಯಂ ಅವಿಜ್ಞಾತೇ ದುರಾತ್ಮನಿ ॥ ೩೫ ॥**

ದುರಾತ್ಮನಾದ ನೀನು ನನ್ನನ್ನು 'ಆತ್ಮಪ್ರಶಂಸೆಮಾಡಿಕೊಳ್ಳುತ್ತಿರುವವನು' ಎಂಬುದಾಗಿ ಹೇಳಬಹುದು. ಆದರೆ ಜ್ಞಾನಿಯಾದವನಿಗೂ ಸಹ ಅಜ್ಞಾನ ಬಂದಾಗ ಬುದ್ಧಿ ಹೇಳಬೇಕಾದುದು ಸರಿಯಾದುದೇ.

**ಇತಿ ತ್ವಂ ಬೋಧಿತೋ ರಾಜನ್ ನೋಚಿತಂ ತಾಂ ತ್ಯಜ ಸ್ತ್ರಿಯಮ್ ।**
**ಬ್ರಾಹ್ಮಣಾರ್ಥೇ ಗವಾಮರ್ಥೇ ಮಹಾವಿಪದಿ ಭೂಮಿಪ ॥ ೩೬ ॥**
**ಯೋದ್ಧವ್ಯಂ ಬ್ರಾಹ್ಮಣೇನಾಪಿ ಸ್ವಯಮರ್ಥೇ ನ ಸಂಶಯಃ ।**
**ವಿಪದೇವಾಪಿ ಮಹತೀ ಭಾರ್ಯಾ ಹಾನಿಸ್ಸ್ವರೂಪಿಣೀ ॥ ೩೭ ॥**

ರಾಜನೇ, ಹೀಗೆ ನಾನು ನಿನಗೆ ಬುದ್ಧಿ ಹೇಳಿದ್ದೇನೆ. ಈ ಕಾರ್ಯವು ನಿನಗೆ ಯೋಗ್ಯವಲ್ಲ. ಆ ಸ್ತ್ರೀಯನ್ನು ಬಿಟ್ಟುಬಿಡು. ಬ್ರಾಹ್ಮಣರಿಗಾಗಲೀ, ಗೋವುಗಳಿಗಾಗಲೀ ಆಪತ್ತು ಬಂದಾಗ, ರಾಜನೇ ಅಥವ ತನ್ನನ್ನೇ ರಕ್ಷಿಸಿಕೊಳ್ಳಬೇಕಾದ ಪ್ರಸಂಗ ಬಂದಾಗ, ಇನ್ನೊಬ್ಬ ಬ್ರಾಹ್ಮಣನ ಎದುರಾಗಿಯಾದರೂ ಯುದ್ಧ ಮಾಡಬೇಕು. ಎಂತಹ ಸಂಕಟಕಾಲದಲ್ಲಿಯೂ ಪರಪುರುಷನ ಪತ್ನಿಯು ಸರ್ವಸ್ವವನ್ನೂ ನಾಶಮಾಡುವವಳೇ.

**ಮಮ ಸಂವಿದಿತಂ ಪೂರ್ವಂ ಭಾರ್ಯಾ ಭುಕ್ತಾ ತ್ವಯಾ ಬಲಾತ್ ।**
**ಇತಃಪರಂ ಕ್ಷಾತ್ರಧರ್ಮೇ ನೈಷಾ ಶುದ್ಧಿರ್ಭವಿಷ್ಯತಿ ॥ ೩೮ ॥**

ನನ್ನ ಪತ್ನಿಯನ್ನು ಬಲಾತ್ಕಾರದಿಂದ ನೀನು ಭೋಗಿಸುವಿಯೆಂದು ನನಗೆ ಮೊದಲೇ ತಿಳಿದಿತ್ತು. ಇನ್ನು ಮುಂದೆ ಕ್ಷತ್ರಿಯಧರ್ಮದಲ್ಲಿ ಇವಳು ಶುದ್ಧಳಾಗಿರುವುದಿಲ್ಲ.

**ಬ್ರಾಹ್ಮಣ್ಯಸ್ಯಾಪಿ ವಿಚ್ಛೇದೋಽಭ್ಯಧಿಕಂ ಚಾಪದೇಷ್ಯತಿ ।**
**ವೇದಾಧ್ಯಯನಸಂಪನ್ನೇ ಕುಲೀನೇಽಪಿ ಮಹಾತ್ಮನಿ ॥ ೩೯ ॥**
**ವಿನಾ ವಿಪತ್ತಿಂ ಸಂಜಾತೇ ಬ್ರಾಹ್ಮಣೇ ಶಸ್ತ್ರಧಾರಿಣಿ ।**
**ಗತಬ್ರಹ್ಮಕುಲೋ ಭೂತ್ವಾ ನರಕಾನೇವ ಗಚ್ಛತಿ ॥ ೪೦ ॥**

ಬ್ರಾಹ್ಮಣನಿಗೆ ವಿಚ್ಛೇದವಾದರೂ ಇದಕ್ಕಿಂತ ಹೆಚ್ಚು ಆಪತ್ತಿಲ್ಲ. ವೇದಾಧ್ಯಯನ ಮಾಡಿರುವ, ಸತ್ಕುಲಸಂಜಾತನಾದ, ಜ್ಞಾನಿಯಾದ ಬ್ರಾಹ್ಮಣನು ಮಹಾವಿಪತ್ತು ಇಲ್ಲದಿದ್ದಾಗ ಶಸ್ತ್ರಗಳನ್ನು ಹಿಡಿದು ಯುದ್ಧಾದಿಗಳನ್ನು ಮಾಡಿದರೆ, ಅವನ ಬ್ರಾಹ್ಮಣ್ಯ ನಾಶವಾಗಿ ನರಕದಲ್ಲಿ ಬೀಳುತ್ತಾನೆ.

**ಪೂರ್ಣಕಾಮಸ್ಯ ವಿಪ್ರಸ್ಯ ಕುಲೀನಸ್ಯ ಮಹಾತ್ಮನಃ ।**
**ನಿಷ್ಣಾತಸ್ಯಾಪಿ ವಿದ್ಯಾಸು ಹಲಾಂತಂ ಬ್ರಹ್ಮವರ್ಚಸಮ್ ॥ ೪೧ ॥**
**ಆಪದ್ಧರ್ಮಾ ಋಷಿಪ್ರೋಕ್ತಾಃ ಸಂತಿ ಶಾಸ್ತ್ರೇಷ್ವನೇಕಧಾ ।**
**ವೃತ್ತಿಹೀನಸ್ಯ ವಿಪ್ರಸ್ಯ ವೃತ್ತ್ಯರ್ಥಂ ಚೋದಿತಾ ಇಮೇ ॥ ೪೨ ॥**

ಸರ್ವ ಮನೋರಥಗಳಿಂದಲೂ ಪೂರ್ಣನಾದ, ಸತ್ಕುಲದಲ್ಲಿ ಜನ್ಮತಾಳಿದ, ಎಲ್ಲ ಬ್ರಹ್ಮವಿದ್ಯೆಗಳಲ್ಲಿಯೂ ಪ್ರವೀಣನಾದ, ಶ್ರೇಷ್ಠವಾದ ಬ್ರಹ್ಮವರ್ಚಸ್ಸನ್ನು ಹೊಂದಿದ ಬ್ರಾಹ್ಮಣನಿಗೆ ಆಪತ್ತು ಬಂದಾಗ ಅನುಸರಿಸಬೇಕಾದ ಧರ್ಮಗಳು ಬಹಳ ಇವೆ. ಅವೆಲ್ಲವನ್ನೂ ಋಷಿಗಳು ಸ್ಪಷ್ಟವಾಗಿ ಹೇಳಿರುತ್ತಾರೆ. ಜೀವನೋಪಾಯ ರಹಿತನಾದ ಬ್ರಾಹ್ಮಣನಿಗಾಗಿ ಜೀವನಮಾಡುವ ಕ್ರಮವನ್ನು ಹೇಳುವುದಕ್ಕೆ ಈ ಆಪದ್ಧರ್ಮಗಳು ಹೊರಟಿವೆ.

**ನೋಪಾಸ್ಯಃ ಕ್ಷತ್ರಧರ್ಮೋ ಹಿ ಪ್ರಾಗ್ವಿಪತ್ತೇಃ ದ್ವಿಜೋತ್ತಮೈಃ ।**
**ಪ್ರಾಪ್ತಾಪದಾ ದ್ವಿಜೇನೈವ ಕ್ಷತ್ರವೃತ್ತಿಃ ಕಥಂಚನ ॥ ೪೩ ॥**

ತುಂಬಾ ಆಪತ್ತು ಬಂದಾಗ ಮಾತ್ರವೇ ಬ್ರಾಹ್ಮಣನು ಕ್ಷತ್ರಿಯಧರ್ಮಗಳನ್ನು ಅನುಸರಿಸಬೇಕು. ಮಹಾ ಆಪತ್ತು ಇಲ್ಲದಾಗ ಆಚರಿಸಬಾರದು.

**ಹಿಂಸಾರೂಪಾ ಕ್ಷಾತ್ರವೃತ್ತಿಃ ಜ್ಞಾನಿನಾ ಚ ದ್ವಿಜನ್ಮನಾ ।**
**ನೋಪಾಸ್ಯಾ ಸಾ ಸದಾ ಕ್ವಾಪೀತ್ಯೇವಂ ಪ್ರಾಹ ಜನಾರ್ದನಃ ॥ ೪೪ ॥**

ಆದರೂ ಹಿಂಸಾರೂಪದ ಕ್ಷತ್ರಿಯಧರ್ಮವನ್ನು ಜ್ಞಾನಿಯಾದ ಬ್ರಾಹ್ಮಣರು ಸ್ವೀಕರಿಸಬಾರದೆಂದು ಶ್ರೀಹರಿಯು ನುಡಿದಿರುತ್ತಾನೆ.

**ಯೋಽಗ್ನಿಂ ನೋಪಚರೇತ್ ವಿದ್ವಾನ್ ದ್ವಿಜನ್ಮಾ ವೈ ಗೃಹಾಶ್ರಮೀ ।**
**ವರ್ಷಾದೂರ್ಧ್ವಂ ಸ ಚಾಂಡಾಲೋ ಬ್ರಾಹ್ಮಣ್ಯಾದ್ಧಿ ವಿಹೀಯತೇ ॥ ೪೫ ॥**

ಗೃಹಸ್ಥಾಶ್ರಮಿಯಾದ ಬ್ರಾಹ್ಮಣನು ಅಗ್ನಿಹೋತ್ರಾದಿಗಳನ್ನು ಮಾಡದೇ ಇದ್ದರೆ ಒಂದು ವರ್ಷದ ನಂತರ ಅವನು ಬ್ರಾಹ್ಮಣ್ಯವನ್ನು ಕಳೆದುಕೊಂಡು ಚಂಡಾಲನಿಗೆ ಸಮನಾಗುತ್ತಾನೆ.

**ತೈಲಯಂತ್ರಂ ಚೇಕ್ಷುಯಂತ್ರಂ ತ್ರಿವರ್ಷಂ ಯಃ ಕರೋತಿ ಚ ।**
**ಬ್ರಹ್ಮಹಾ ಸ ತು ವಿಜ್ಞೇಯೋ ಬ್ರಾಹ್ಮಣ್ಯಾಚ್ಚ ವಿಹೀಯತೇ ॥ ೪೬ ॥**

ಯಂತ್ರಗಳಿಂದ ತೈಲ, ಕಬ್ಬಿನರಸ ಇವುಗಳನ್ನು ತೆಗೆಯುವ ಕರ್ಮವನ್ನು ಮೂರು ವರ್ಷಗಳು ಬ್ರಾಹ್ಮಣನು ಮಾಡಿದರೆ, ಬ್ರಹ್ಮಹತ್ಯಾ ದೋಷಕ್ಕೆ ಪಾತ್ರನಾಗಿ ಬ್ರಾಹ್ಮಣ್ಯವನ್ನು ಕಳೆದುಕೊಳ್ಳುವನು.

**ಅಜ್ಞಾನಾತ್ ಬ್ರಾಹ್ಮಣೋ ವಿದ್ವಾನ್ ಯೋ ರಿಕ್ತಾನ್ ಭಕ್ಷಯೇತ್ತಿಲಾನ್।**
**ದ್ವಿಜಾಧಮಃ ಸ ಪಾಪೀಯಾನ್ ಬ್ರಾಹ್ಮಣ್ಯಾದ್ಧಿ ವಿಹೀಯತೇ ॥ ೪೭ ॥**

ವಿದ್ವಾಂಸನಾದ ಬ್ರಾಹ್ಮಣನು ಯಾಚಿಸಿ ತಂದ ಎಳ್ಳನ್ನು ತಿಂದರೆ ಅವನು ನೀಚನೆಂದೂ, ಪಾಪಿಯೆಂದೂ, ಪರಿಗಣಿಸಲ್ಪಡುತ್ತಾನೆ, ಹಾಗೂ ಅವನ ಬ್ರಾಹ್ಮಣ್ಯವು ನಾಶವಾಗುತ್ತದೆ.

**ಬ್ರಾಹ್ಮಣ್ಯಂ ಸರ್ವದಾ ರಕ್ಷ್ಯಂ ಸರ್ವಯೋನಿಷು ದುರ್ಲಭಮ್ ।**
**ದ್ವ್ಯಧಿಕಾಶೀತಿ ಭೇದೇಷು ಕ್ರಮಾಜ್ಜಾತಸ್ತು ಯೋನಿಷು ॥ ೪೮ ॥**

ಬ್ರಾಹ್ಮಣ್ಯವನ್ನು ಸರ್ವದಾ ರಕ್ಷಿಸಿಕೊಳ್ಳಬೇಕು. ಎಲ್ಲ ಯೋನಿಗಳಲ್ಲಿಯೂ ಬ್ರಾಹ್ಮಣಯೋನಿಯು ದುರ್ಲಭ. ಎಂಭತ್ತೆರಡು ಯೋನಿಗಳಲ್ಲಿ ಸುತ್ತಿ ಸುತ್ತಿ ನಂತರ ಬ್ರಾಹ್ಮಣ ಜನ್ಮ ಲಭ್ಯ.

**ಬಹುಪುಣ್ಯವಶಾತ್ ಜೀವೋ ಬ್ರಾಹ್ಮಣೀಂ ಯೋನಿಮಾವ್ರಜೇತ್ ।**
**ಕಿಂಚಿತ್ ವಕ್ಷ್ಯಾಮಿ ರಾಜರ್ಷೇ ತ್ವಯಿ ಶಾಂತಿವಿಧಾಯಿನಿ ॥ ೪೯ ॥**

ಉತ್ಕಟ ಪುಣ್ಯಫಲದಿಂದ ಬ್ರಾಹ್ಮಣಯೋನಿಯಲ್ಲಿ ಜನ್ಮ ಬರುತ್ತದೆ. ರಾಜನೇ, ನಿನಗೆ ಸಮಾಧಾನವಾಗಲೆಂದು ಸ್ವಲ್ಪ ಹೇಳುತ್ತೇನೆ.

**ಕೋಟಿಶೂದ್ರವಧಾತ್ಸಾಮ್ಯಂ ಸ್ತ್ರೀವಧಸ್ಯ ವಿದೋ ವಿದುಃ ।**
**ಕೋಟಿಸ್ತ್ರೀವಧತುಲ್ಯಂ ತು ಗೋವಧಂ ತು ಮನೀಷಿಣಃ ॥ ೫೦ ॥**

ಕೋಟಿ ಶೂದ್ರರನ್ನು ಸಂಹರಿಸಿದರೆ ಬರುವ ಪಾಪವು ಒಂದು ಸ್ತ್ರೀಹತ್ಯ ಪಾಪಕ್ಕೆ ಸಮ. ಕೋಟಿ ಸ್ತ್ರೀವಧದ ಪಾಪವು ಒಂದು ಗೋಹತ್ಯ ಪಾಪಕ್ಕೆ ಸಮ.

**ಕೋಟಿಗೋವಧತುಲ್ಯಂ ತು ಜನಾ ಬ್ರಹ್ಮವಧಂ ವಿದುಃ ।**
**ಪಟ್ಟಾಭಿಷಿಕ್ತಭೂಪಸ್ಯ ಕೋಟಿಬ್ರಹ್ಮವಧಾಧಿಕಃ ॥ ೫೧ ॥**

ಕೋಟಿ ಗೋಹತ್ಯ ಪಾಪವು ಒಂದು ಬ್ರಹ್ಮಹತ್ಯೆ ಪಾಪಕ್ಕೆ ಸಮ. ರಾಜನನ್ನು ಸಂಹರಿಸಿದರೆ ಒಂದು ಕೋಟಿ ಬ್ರಹ್ಮಹತ್ಯೆ ಮಾಡಿದ್ದಕ್ಕೂ ಹೆಚ್ಚು ಪಾಪ.

**ದುಷ್ಟಾನಾಂ ಶಿಕ್ಷಣಂ ಚೈವ ಶಿಷ್ಟಾನಾಂ ಪರಿಪಾಲನಮ್ ।**
**ಉಭೌ ಕ್ಷತ್ರಿಯಧರ್ಮೌ ತು ನ ವಿಪ್ರಸ್ಯ ಕದಾಚನ ॥ ೫೨ ॥**

ದುರ್ಜನರನ್ನು ಶಿಕ್ಷಿಸುವುದೂ, ಸಜ್ಜನರನ್ನು ರಕ್ಷಿಸುವುದೂ ಕ್ಷತ್ರಿಯರ ಕರ್ತವ್ಯವೇ ವಿನಹ ಬ್ರಾಹ್ಮಣನ ಧರ್ಮವಲ್ಲ.

**ಬ್ರಾಹ್ಮಣಾಃ ಕುಪಿತಾ ಹನ್ಯುಃ ಲೋಕಾನ್ ಲೋಕೇಶಸಂಯುತಾನ್ ।**
**ಕಿಮು ತತ್ರ ವಿಶಿಷ್ಟಾಶ್ಚ ಬ್ರಾಹ್ಮಣಾ ಬ್ರಹ್ಮವಾದಿನಃ ॥ ೫೩ ॥**

ಕುಪಿತರಾದ ಬ್ರಾಹ್ಮಣರು ಲೋಕಾಧಿಪತಿಗಳಿಂದ ಸಹಿತವಾದ ಲೋಕಗಳನ್ನೇ ನಾಶಮಾಡಲು ಸಮರ್ಥರು. ಅಂದಮೇಲೆ ಬ್ರಹ್ಮಜ್ಞಾನಿಗಳಾದ ಬ್ರಾಹ್ಮಣರ ಸಾಮರ್ಥ್ಯವನ್ನು ಹೇಳಬೇಕೆ!

**ಕಾರ್ಯೋಽತ್ರ ನೈ ನ ಮೇ ದಂಡೋ ವಿಹಿತಸ್ತೇ ಯತಸ್ತತಃ ।**
**ತ್ಯಜೈನಾಂ ಬ್ರಾಹ್ಮಣೀಂ ಘೋರಾಂ ಗುರುಪತ್ನೀಂ ಕುಲಾಧಮ ॥ ೫೪ ॥**

ಈ ಸಮಯದಲ್ಲಿ ನಿನ್ನನ್ನು ನಾನು ದಂಡಿಸಬೇಕಾದ ಅಗತ್ಯವಿಲ್ಲ. ರಾಜಕುಲದಲ್ಲಿ ನೀಚನೇ, ಘೋರಳಾದ ಈ ಗುರುಪತ್ನಿಯನ್ನು ಬಿಡು.

**ಬ್ರಾಹ್ಮಣ್ಯಧರ್ಮನಿಷ್ಣಾತೋ ಗುರುಸ್ತಸ್ಮಾದ್ವಿನಿರ್ಯಯೌ ।**
**ಸಪ್ತರ್ಷೀನ್ ಪ್ರತಿಪದ್ಯಾಥ ರಾಜ್ಞೋ ದೋಷಂ ನ್ಯವೇದಯೇತ್ ॥ ೫೫ ॥**

ಬ್ರಾಹ್ಮಣಧರ್ಮವನ್ನು ರಕ್ಷಿಸುವುದರಲ್ಲಿ ಆಸಕ್ತರಾದ ಬೃಹಸ್ಪತ್ಯಾಚಾರ್ಯರು ಅಲ್ಲಿಂದ ಹೊರಟು ಸಪ್ತಋಷಿಗಳಿಗೆ ತಮಗಾದ ವ್ಯಥೆಯನ್ನು ಹೇಳಿದರು.

**ಶೃಣುಧ್ವಂ ಋಷಯಃ ಸರ್ವೇ ಮದ್ವ್ಯಥಾಮಿಂದುನಾರ್ಪಿತಾಮ್ ।**
**ಸೃಷ್ಟ್ವೇಮಾನ್ ಸಕಲಾನ್ ಲೋಕಾನ್ ಭಗವಾನ್ ವಿಷ್ಣುರವ್ಯಯಃ ॥**
**ಸಾಮ್ರಾಜ್ಯೇ ಸ್ಥಾಪಯಾಮಾಸ ಬ್ರಹ್ಮಾಣಂ ಚ ಚತುರ್ಮುಖಮ್ ।**
**ಯುವರಾಜ್ಯೇ ಮಹಾಬಾಹುಂ ಬಲರೂಪಂ ಸಮೀರಣಮ್ ॥ ೫೭ ॥**

ಋಷಿಗಳೇ, ಚಂದ್ರನಿಂದ ಸನಗಾಗಿರುವ ವ್ಯಥೆಯನ್ನು ನಿಮ್ಮ ಮುಂದೆ ಹೇಳುತ್ತೇನೆ, ಕೇಳಿ: "ಷಡ್ಗುಣೈಶ್ವರ್ಯಪೂರ್ಣನಾದ, ನಾಶರಹಿತನಾದ ವಿಷ್ಣುವು ಲೋಕಗಳನ್ನೆಲ್ಲ ಸೃಷ್ಟಿಸಿ ಅದಕ್ಕೆ ಚತುರ್ಮುಖಬ್ರಹ್ಮನನ್ನು ನಿಯಮಿಸಿ, ಯುವರಾಜನನ್ನಾಗಿ ಬಲಿಷ್ಠರಾದ ವಾಯುದೇವರನ್ನು ನಿಯಮಿಸಿದನು.

**ಗೋಪ್ತಾರಂ ತಸ್ಯ ರಾಷ್ಟ್ರಸ್ಯ ಮಹಾರುದ್ರಂ ಬಲೋತ್ಕಟಮ್ ।**
**ಅಮಾತ್ಯತ್ವೇ ತಥೈವೇಂದ್ರಂ ದೇವಾನ್ ರಾಜ್ಯಾಂಗಕರ್ಮಣಿ ॥ ೫೮ ॥**

**ಪ್ರಜೇಶಾನ್ನವಸಂಖ್ಯಾಕಾನ್ ಪತ್ರಲೇಖ್ಯಾದಿಕರ್ಮಸು ।**
**ಮನೂನ್ ದೇಶಾಧಿಕಾರಿತ್ವೇ ಋಷೀನ್ ಧರ್ಮವಿನಿರ್ಣಯೇ ॥ ೫೯ ॥**

ರಾಷ್ಟ್ರರಕ್ಷಣೆಗಾಗಿ ಬಲಿಷ್ಠರಾದ ರುದ್ರದೇವರನ್ನೂ, ಸಚಿವಸ್ಥಾನದಲ್ಲಿ ಇಂದ್ರನನ್ನೂ, ಇತರ ರಾಜಕಾರ್ಯಗಳಿಗೆ ದೇವತೆಗಳನ್ನೂ, ಪತ್ರಬರೆಯುವುದೇ ಮುಂತಾದ ಕಾರ್ಯನಿರ್ವಹಿಸಲು ಒಂಭತ್ತು ಮಂದಿ ಪ್ರಜೇಶರನ್ನೂ, ರಾಷ್ಟ್ರದ ಸಣ್ಣ ಸಣ್ಣ ಭಾಗಗಳಿಗೆ ಮನುಗಳನ್ನೂ, ಧರ್ಮತೀರ್ಮಾನಕ್ಕೆ ಋಷಿಗಳನ್ನೂ ಶ್ರೀಹರಿಯು ಸ್ಥಾಪಿಸಿದನು.

**ತಥಾಧಿಕೃತಮಾನುಷ್ಯೇ ಚಂದ್ರಸೂರ್ಯಗ್ರಹೌ ಬಲೌ ।**
**ಕಾರಾಗೃಹಾಧಿಕಾರೇ ತು ಯಮಂ ಲೋಕಸ್ಯ ಕಂಟಕಮ್ ॥ ೬೦ ॥**

**ದುರಾಚಾರೇ ಸದಾಚಾರೇ ಸದಾ ವೇದೋಕ್ತಕರ್ಮಣಿ ।**
**ನವಗ್ರಹಾನ್ ಮಹಾಕ್ರೂರಾನ್ ಗೂಢಾಚಾರಾನ್ವಸೂನಥ ॥ ೬೧ ॥**

ಮನುಷ್ಯರಮೇಲೆ ಅಧಿಕಾರಮಾಡಲು ಬಲಾಢ್ಯರಾದ ಚಂದ್ರಸೂರ್ಯ ಗ್ರಹಗಳನ್ನೂ, ತಪ್ಪಿತಸ್ಥರನ್ನು ಕಾರಾಗೃಹದಲ್ಲಿ ಹಾಕಬೇಕಾದ ಅಧಿಕಾರಕ್ಕೆ ಲೋಕಭಯಂಕರನಾದ ಯಮನನ್ನೂ, ವೇದೋಕ್ತವಾದ ಸದಾಚಾರ-ದುರಾಚಾರಗಳ ಮೇಲ್ವಿಚಾರಣೆಗಾಗಿ ಕ್ರೂರರಾದ ನವಗ್ರಹಗಳನ್ನೂ, ಗೂಢಚಾರರಾದ ವಸುಗಳನ್ನೂ ಶ್ರೀಹರಿಯು ಸ್ಥಾಪಿಸಿದನು.

**ಏಕೋನಪಂಚಾಶತ್ಸಂಖ್ಯಾಕಾನ್ ಮರುತಃ ಕಶ್ಯಪಾತ್ಮಜಾನ್ ।**
**ಸೌವಿದಲ್ಲಾನ್ ಮಹಾವಿಷ್ಣುಃ ಗಂಧರ್ವಾಪ್ಸರಸಸ್ತಥಾ ॥ ೬೨ ॥**

**ಗೀತನೃತ್ಯಾದಿಕೃತ್ಯೇಷು ಕಿನ್ನರಾನ್ ಸ್ತುತಿಪಾಠಕಾನ್ ।**
**ವಿದ್ಯಾಧರಾನ್ ಬಂದಿನೋಗ್ನಿಂ ದೀಪಧಾರಣಕರ್ಮಣಿ ॥ ೬೩ ॥**

ಅಂತಃಪುರಗಳ ರಕ್ಷಣೆಗಾಗಿ ಕಶ್ಯಪರ ಮಕ್ಕಳಾದ ನಲವತ್ತೊಂಭತ್ತು ಜನ ಮರುತ್ತರನ್ನೂ, ಗಾಯನ-ನೃತ್ಯಾದಿ ಕೆಲಸಗಳಿಗಾಗಿ ಗಂಧರ್ವ-ಅಪ್ಸರೆಯನ್ನೂ,

ಸ್ತುತಿಪಾಠಕ ಕೆಲಸಕ್ಕೆ ಕಿನ್ನರರನ್ನೂ, ವಿದ್ಯಾಧರರನ್ನೂ, ದೀಪಗಳ ವ್ಯವಸ್ಥೆಗಾಗಿ ಅಗ್ನಿಯನ್ನೂ ನಿಯಮಿಸಿದನು.

**ಗ್ರಾಮಗ್ರಾಮಾಧಿಪಾನ್ ಭೂಪಾನ್ ತತ್ತಲ್ಲೋಕಪತೀಂಸ್ತಥಾ ।**
**ನಿಷಾದಾನ್ ರಾಕ್ಷಸಾಂಶ್ಚಕ್ರೇ ಭಗವಾನ್ ವಿಷ್ಣುರವ್ಯಯಃ ॥ ೬೪ ॥**

ಗ್ರಾಮಗಳನ್ನು ಆಳಲು ಗ್ರಾಮಾಧಿಪರನ್ನೂ, ಇತರ ರಾಜರುಗಳನ್ನೂ, ಆಯಾ ಲೋಕಗಳನ್ನು ಆಳಲು ಬೇಕಾದ ಲೋಕಾಧಿಪತಿಗಳನ್ನೂ, ನಿಷಾದರನ್ನೂ, ರಾಕ್ಷಸರನ್ನೂ, ಶ್ರೀಹರಿಯು ಸೃಜಿಸಿ ಸ್ಥಾಪಿಸಿದನು.

**ದೇವಾಂಶ್ಚ ಪರಿಚಾರತ್ವೇ ಹ್ಯನ್ಯಾನ್ ಜಂತೂಂಶ್ಚ ಪೋಷಕಾನ್ ।**
**ಸಾರ್ವಭೌಮಃ ಸ್ವಯಂ ವಿಷ್ಣುಃ ಸರ್ವಲೋಕೈಕನಾಯಕಃ ॥ ೬೫ ॥**

ಪರಿಚರ್ಯಾದಿ ಕಾರ್ಯಗಳಿಗೆ ಬೇಕಾದ ದೇವತೆಗಳನ್ನೂ, ಪೋಷಕವರ್ಗಕ್ಕೆ ಸೇರಿದ ಅನ್ಯ ಪ್ರಾಣಿಗಳನ್ನೂ ಸೃಷ್ಟಿಸಿದನು. ಈ ಎಲ್ಲಕ್ಕೂ ಸಾರ್ವಭೌಮನೆಂದೂ, ಎಲ್ಲದಕ್ಕೂ ನಾಯಕನೆಂದೂ ಸ್ವಯಂ ವಿಷ್ಣುವೇ ಕರೆಸಿಕೊಳ್ಳಲ್ಪಟ್ಟನು.

**ಧರ್ಮಸಂಸ್ಥಾಪನಾರ್ಥಾಯ ಜಗದೇವಂ ವಿನಿರ್ಮಮೇ ।**
**ಆಶು ಭೂಪಂ ಬೋಧಯಧ್ವಂ ಯೂಯಂ ಧರ್ಮಾಧಿಕಾರಿಣಃ ॥ ೬೬ ॥**

ಧರ್ಮರಕ್ಷಣೆಗಾಗಿ ಶ್ರೀಹರಿಯು ಜಗತ್ತಿನಲ್ಲಿ ಇಂತಹ ವ್ಯವಸ್ಥೆಯನ್ನು ಮಾಡಿರುತ್ತಾನೆ. ತಾವು ಧರ್ಮಾಧಿಕಾರಿಗಳು, ಈ ರಾಜನಿಗೆ ಹಿತವನ್ನು ಬೋಧಿಸಿರಿ".

**ಸಪ್ತರ್ಷಯೋ ಮಹಾತ್ಮಾನೋ ಗುರುಣಾ ಪ್ರಾರ್ಥಿತಾ ಇಮೇ ।**
**ಬೋಧಯಾಮಾಸುರಭ್ಯೇತ್ಯ ಸೋಮಂ ರಾಜಾನಮಂಜಸಾ ॥ ೬೭ ॥**

ಮಹಾತ್ಮರಾದ ಸಪ್ತರ್ಷಿಗಳು ಬೃಹಸ್ಪತಿಯಿಂದ ಪ್ರಾರ್ಥಿತರಾಗಿ ರಾಜನಾದ ಚಂದ್ರನಬಳಿಗೆ ಬಂದು ಹೇಳಿದರು.

**ಶೃಣು ಭೂಪ ಹಿತಂ ವಾಕ್ಯಂ ವರ್ಣಾನಾಂ ಬ್ರಾಹ್ಮಣೋ ಗುರುಃ ।**
**ಅಯಂ ಪುರೋಹಿತೋ ವಿದ್ವಾನ್ ಗುರುಷ್ವಭ್ಯಧಿಕೋ ಗುರುಃ ॥ ೬೮ ॥**

ರಾಜನೇ ನಿನಗೆ ಹಿತವನ್ನು ಹೇಳುತ್ತೇವೆ ಕೇಳು "ಎಲ್ಲ ವರ್ಣಗಳಿಗೂ ಬ್ರಾಹ್ಮಣನೇ ಗುರು, ಈ ಬೃಹಸ್ಪತಿಯು ವಿದ್ವಾಂಸನು, ಪುರೋಹಿತನು, ಗುರುಗಳಲ್ಲಿ ಶ್ರೇಷ್ಠನು.

**ತತ್ಪತ್ನೀ ತವ ಮಾತೇಯಂ ಮಾಲಿನೀ ಲೋಕಸುಂದರೀ ।**
**ಹೇತೋರಲ್ಪಸ್ಯ ಭೂಕಾಂತ ಬಹುಹಾನಿಂ ತ್ವಮಿಚ್ಛಸಿ ॥ ೬೯ ॥**

ಲೋಕಸುಂದರಿಯಾದ, ಬೃಹಸ್ಪತಿಯ ಪತ್ನಿಯಾದ, ಮಾಲಿನಿಯು ನಿನಗೆ ತಾಯಿಯಂತೆ, ಅಲ್ಪ ಸುಖಕ್ಕಾಗಿ ಬಹಳ ದುರವಸ್ಥೆಯನ್ನು ಬರಮಾಡಿಕೊಳ್ಳುತ್ತಿರುವೆ.

**ಅನೇನ ಕರ್ಮಣಾ ಭೂಯಾತ್ ಬಹುದುಃಖಂ ನ ಸಂಶಯಃ ।**
**ಇತಿ ತೈರ್ಬೋಧಿತೋ ರಾಜಾ ನ ತತ್ಯಾಜ ಗುರೋಃ ಸತೀಮ್ ॥ ೭೦ ॥**

ಇದರಿಂದ ನಿನಗೆ ಬಹಳ ದುಃಖ ಬರುತ್ತದೆ, ಸಂಶಯವಿಲ್ಲ" ಎಂಬುದಾಗಿ ಸಪ್ತರ್ಷಿಗಳು ಹೇಳಿದರೂ ಚಂದ್ರನು ಗುರುಪತ್ನಿಯನ್ನು ಬಿಡಲಿಲ್ಲ.

**ಗೀಷ್ಪತಿಂ ತೇ ತತಃ ಖಿನ್ನಾಃ ಪ್ರೋಚುಃ ಸಪ್ತರ್ಷಯೋಽಪಿ ತೇ ।**
**ನಾಸ್ಮಾಭಿಃ ಬೋಧಿತುಂ ಶಕ್ಯೋ ರಾಜಾ ಚಾಯಂ ದುರಾಗ್ರಹೀ ॥ ೭೧ ॥**

ಖಿನ್ನರಾದ ಸಪ್ತರ್ಷಿಗಳು ಬೃಹಸ್ಪತಿಗೆ ಹೇಳಿದರು. "ಈ ರಾಜನು ಹಟವಾದಿಯು ; ಇವನಿಗೆ ಇನ್ನು ಹೆಚ್ಚು ಹೇಳಲು ನಾವು ಸಮರ್ಥರಲ್ಲ".

**ವಯಂ ಧರ್ಮಸ್ಯ ವಕ್ತಾರೋ ನ ವಯಂ ಶಿಕ್ಷಕಾ ಭುವಿ ।**
**ಮನೂನಿಂದ್ರಾನ್ನಿವೇದ್ಯೈವ ತತ್ಕಾರ್ಯಂ ಕುರು ಮಾನದ ॥ ೭೨ ॥**

"ನಾವು ಧರ್ಮವನ್ನು ಹೇಳುವವರೇ ಹೊರತು ಶಿಕ್ಷಕರಲ್ಲ. ಮನುಗಳಿಗೂ, ಇಂದ್ರನಿಗೂ ತಿಳಿಸಿ ನಿನ್ನ ಕಾರ್ಯವನ್ನು ಮಾಡಿಕೊ".

**ತೇಭ್ಯಃ ಖಿನ್ನೋ ಗುರುಃ ಪಶ್ಚಾತ್ ದೇವೇಂದ್ರಸದನಂ ಯಯೌ ।**
**ಸೋಮರಾಜಸ್ಯ ದೌರಾತ್ಮ್ಯಂ ದೇವೇಂದ್ರಾಯ ನ್ಯವೇದಯತ್ ॥ ೭೩ ॥**

ಸಪ್ತರ್ಷಿಗಳ ಮಾತಿನಿಂದ ನಿರಾಶೆಗೊಂಡ ಬೃಹಸ್ಪತಿಯು ದೇವೇಂದ್ರನ ಸಭೆಗೆ ಹೋಗಿ ಚಂದ್ರನು ಮಾಡಿರುವ ದುರ್ವ್ಯಾಪಾರವನ್ನು ಹೇಳಿದನು.

**ಸಭ್ಯೇಭ್ಯಶ್ಚೈವ ದೇವೇಭ್ಯಃ ಪ್ರಜೇಶೇಭ್ಯೋ ನಿವೇದ್ಯತ ।**
**ಮನುಭ್ಯಶ್ಚ ವಸುಭ್ಯಶ್ಚ ರುದ್ರೇಭ್ಯಶ್ಚ ಮಹಾಮತಿಃ ॥ ೭೪ ॥**

ಸಭೆಯಲ್ಲಿರುವ ದೇವತೆಗಳಿಗೂ, ಪ್ರಜೇಶರಿಗೂ, ಮನುಗಳಿಗೂ, ವಸುಗಳಿಗೂ, ಏಕಾದಶ ರುದ್ರರಿಗೂ ತಿಳಿಸಿದನು.

**ದೇವಾಚಾರ್ಯಂ ತತಃ ಪ್ರೋಚುಃ ದೇವಾ ಇಂದ್ರಪುರೋಗಮಾಃ ।**
**ನಾಸ್ಮಾಭಿರ್ಜನ್ಯತೇ ರಾಜಾ ಶಶಾಂಕೋsಯಂ ಬಲೋತ್ಕಟಃ ॥ ೭೫ ॥**

ಇಂದ್ರನೇ ಮೊದಲಾದ ದೇವತೆಗಳು ಬೃಹಸ್ಪತಿಗೆ ಹೇಳಿದರು—ರಾಜನಾದ ಚಂದ್ರನು ಬಹಳ ಬಲಿಷ್ಟ, ಆದುದರಿಂದ ನಾವು ಅವನನ್ನು ಜಯಿಸಲಾರೆವು.

**ಮಹೇಶವರದರ್ಪೇಣ ಜಯಿಷ್ಣುರ್ದೇವತಾ ಅಪಿ ।**
**ಸಮುದ್ರಮಥನೇ ಪೀತ್ವಾ ವಿಷಂ ಲೋಕೈಕಕಂಟಕಮ್ ॥ ೭೬ ॥**

**ವಿಷಜ್ವಾಲೋಪಶಾಂತ್ಯರ್ಥಂ ದಧೌ ಚಂದ್ರಕಲಾಂ ಹರಃ ।**
**ತದಾ ವರಂ ದದೌ ತಸ್ಮೈ ಯದಾ ರಾಜಾ ಭವಿಷ್ಯಸಿ ॥ ೭೭ ॥**

**ತದಾ ಸರ್ವೈಶ್ಚ ಭೂಪಾಲೈಃ ದೇವೈಶ್ಚ ಮನುಜೈಸ್ತಥಾ ।**
**ರಾಕ್ಷಸೈಃ ಉರಗೈಃ ದೈತ್ಯೈಃ ಅವಧ್ಯೋ ಭವ ಸಂಗರೇ ॥ ೭೮ ॥**

ಸಮುದ್ರಮಥನಕಾಲದಲ್ಲಿ ಲೋಕಕ್ಕೆಲ್ಲ ಕಂಟಕವಾದ ಹಾಲಹಲವೆಂಬ ವಿಷವು ಉತ್ಪತ್ತಿಯಾಯಿತು. ಅದನ್ನು ರುದ್ರದೇವರು ಪಾನಮಾಡಿದರು. ವಿಷಜ್ವಾಲೆಯ ಉಪಶಮನಾರ್ಥವಾಗಿ ತಮ್ಮ ಶಿರಸ್ಸಿನಲ್ಲಿ ಚಂದ್ರನ ಕಲೆಯನ್ನು ಧರಿಸಿದರು. ಆಗ ಅವರು ಚಂದ್ರನಿಗೆ ವರ ಕೊಟ್ಟರು—ಏನೆಂದರೆ “ನೀನು ರಾಜನಾಗಿರುವಾಗ ಇತರ ರಾಜರುಗಳಿಂದಾಗಲೀ, ದೇವತೆಗಳಿಂದಾಗಲೀ, ಮನುಷ್ಯರಿಂದಾಗಲೀ, ರಾಕ್ಷಸರಿಂದಾಗಲೀ, ಸರ್ಪಗಳಿಂದಲಾಗಲೀ, ದೈತ್ಯರಿಂದ ಲಾಗಲೀ, ಯಾವವಿಧವಾದ ಭಯ ಇಲ್ಲದೇ ಯುದ್ಧದಲ್ಲಿ ಅವಧ್ಯನಾಗು”.

**ತಸ್ಮಾದ್ದೇವಗಣೈಃ ಸರ್ವೈಃ ನ ದಂಡ್ಯೋ ಮೃಗಲಾಂಛನಃ ।**
**ಕಿಂಚಾಸ್ಮಾಭಿಃ ದತ್ತವರಃ ತಥಾ ದತ್ತರಥಾಯುಧಃ ॥ ೭೯ ॥**

ಈ ಕಾರಣದಿಂದ ಚಂದ್ರನನ್ನು ಜಯಿಸಲು ನಾವು ಯಾರೂ ಸಮರ್ಥರಲ್ಲ. ಅಲ್ಲದೇ ನಾವು ಅವನಿಗೆ ವರ ಕೊಟ್ಟರುತ್ತೇವೆ; ರಥ, ಆಯುಧಗಳನ್ನೂ ಕೊಟ್ಟದ್ದೇವೆ.

**ಅಭಿಷಿಕ್ತಶ್ಚ ಸಾಮ್ರಾಜ್ಯೇ ತತೋ ಹಂತುಮಸಾಂಪ್ರತಮ್ ।**
**ವಿಷಾತ್ಮಕೋsಪಿ ನ ಚ್ಛೇದ್ಯೋ ವೃಕ್ಷಸ್ತೇನ ಕದಾಚನ ॥ ೮೦ ॥**

ಸಾಮ್ರಾಜ್ಯದಲ್ಲಿ ನಾವೇ ಅವನಿಗೆ ಅಭಿಷೇಕ ಮಾಡಿರುತ್ತೇವೆ. ಆದಕಾರಣ ಈಗ ನಾವು ಅವನನ್ನು ಶಿಕ್ಷಿಸಲು ಆಗುವುದಿಲ್ಲ. ನಾವೇ ಹಾಕಿದ ಗಿಡವು ಮುಂದೆ ವಿಷವನ್ನು ನೀಡಿದರೂ ಅಂತಹ ಗಿಡವನ್ನು ನಾವೇ ಕತ್ತರಿಸಲು ಸಾಧ್ಯವೇ?

**ತಸ್ಮಾತ್ ನ ದಂಡ್ಯೋ ಭೂಪೋಽಯಂ ಯಥಾರುಚಿ ತಥಾ ಕುರು ।**
**ನಿರಾಕೃತಃ ತತಃ ತೈಸ್ತು ಗುರುಃ ದುಃಖಾಕುಲೋಽಭವತ್ ॥ ೮೧ ॥**

ನಾವು ಅವನನ್ನು ದಂಡಿಸಲು ಸಾಧ್ಯವಿಲ್ಲ, ಇನ್ನು ನಿನ್ನ ಇಷ್ಟಬಂದಂತೆ ಮಾಡು—ಎನ್ನಲು ಇವರಿಂದ ನಿರಾಕೃತನಾದ ಬೃಹಸ್ಪತಿಗೆ ದುಃಖವಾಯಿತು.

**ತತೋ ದೇವಾನುವಾಚೇದಂ ಕೋಪಾಟೋಪೇನ ಗೀಷ್ಪತಿಃ ।**
**ವಿಷ್ಣುನಾಧಿಕೃತಾ ಯೂಯಂ ಲೋಕೇ ಧರ್ಮಸ್ಯ ಗುಪ್ತಯೇ ॥ ೮೨ ॥**

ಕೋಪಗೊಂಡ ಬೃಹಸ್ಪತಿಯು ದೇವತೆಗಳಿಗೆ ಹೇಳಿದನು—ಧರ್ಮ ರಕ್ಷಣಾರ್ಥವಾಗಿ ವಿಷ್ಣುವು ನಿಮಗೆ ಅಧಿಕಾರಕೊಟ್ಟಿರುತ್ತಾನೆ.

**ನ ವಿಚಾರೋ ಹಿ ಭವತಾಂ ಪ್ರಾಪ್ತೇ ಧರ್ಮಸ್ಯ ವಿಪ್ಲವೇ ।**
**ಸ್ವಾಧಿಕಾರೇ ನಿಯುಕ್ತಾ ಯೇ ಪ್ರಭುಣಾ ಪ್ರಭವಿಷ್ಣುನಾ ॥ ೮೩ ॥**
**ತೈಃ ಪ್ರಾಣಾಃ ಅಪಿ ತ್ಯಕ್ತವ್ಯಾಃ ಸಂಪ್ರಾಪ್ತೇ ಧರ್ಮವಿಪ್ಲವೇ ।**
**ರಾಜಾನೋ ದೇವತಾ ಯೂಯಂ ಅಹಂ ತೇಷಾಂ ಪುರೋಹಿತಃ ॥ ೮೪ ॥**

ಧರ್ಮವು ನಾಶವಾಗುವ ಸಮಯ ಬಂದಾಗ ನೀವು ಏನೂ ವಿಚಾರ ಮಾಡದೇ ಸುಮ್ಮನಿರುವಿರಿ. ಸರ್ವೋತ್ತಮನಾದ ವಿಷ್ಣುವಿನಿಂದ ಅಧಿಕಾರ ಪಡೆದಿರುವ ನೀವು ಧರ್ಮನಾಶವಾಗುತ್ತಿರುವಾಗ ನಿಮ್ಮ ಪ್ರಾಣಗಳನ್ನಾದರೂ ತೆತ್ತು ಧರ್ಮವನ್ನು ರಕ್ಷಿಸಬೇಕು. ನೀವು ದೇವತೆಗಳಲ್ಲಿ ರಾಜರಾಗಿರುವಿರಿ. ನಿಮಗೆಲ್ಲ ನಾನು ಪುರೋಹಿತ.

**ರಾಜ್ಞೋ ರಾಷ್ಟ್ರಕೃತಂ ಪಾಪಂ ರಾಜಪಾಪಂ ಪುರೋಧಸಃ ।**
**ಪತ್ಯುಃ ಭಾರ್ಯಾಕೃತಂ ಪಾಪಂ ಶಿಷ್ಯಪಾಪಂ ಗುರೋರಪಿ ॥ ೮೫ ॥**

ಪ್ರಜೆಗಳ ಪಾಪವೆಲ್ಲ ರಾಜನಿಗೆ, ರಾಜನ ಪಾಪವೆಲ್ಲ ಪುರೋಹಿತನಿಗೆ, ಪತ್ನಿಯರಿಂದ ಮಾಡಲ್ಪಟ್ಟ ಪಾಪವೆಲ್ಲ ತಮ್ಮ ಪತಿಗಳಿಗೆ, ಶಿಷ್ಯರ ಪಾಪವೆಲ್ಲ ಗುರುಗಳಿಗೆ ತಲುಪುತ್ತವೆ.

**ಮಚ್ಛಿಷ್ಯತ್ವಾಚ್ಚ ಭವತಾಂ ಗುರುತ್ವಾದಪಿ ದೇವತಾಃ ।**
**ಭವದ್ಭಿಶ್ಚ ಕೃತಂ ಪಾಪಂ ಮಾಮೇವ ಸಮುಪೇಷ್ಯತಿ ॥ ೮೬ ॥**

ನೀವೆಲ್ಲ ನನಗೆ ಶಿಷ್ಯರಾದುದರಿಂದಲೂ, ನಾನು ನಿಮಗೆ ಗುರುವಾಗಿರುವುದರಿಂದಲೂ ನೀವೆಲ್ಲ ಮಾಡಿದ ಪಾಪವು ನನಗೆ ಬರುತ್ತದೆ.

**ಯಥಾಪರಾಧಂ ದಂಡೋ ಹಿ ತಸ್ಮಾದ್ವಃ ಕ್ರಿಯತೇ ಮಯಾ ।**
**ಬ್ರಾಹ್ಮಣತ್ವಾನ್ನ ಶಕ್ಯಾಭೂತ್ ಹಿಂಸಾ ಮೇ ಭವತಾಮಪಿ ॥ ೮೭ ॥**

ಅಪರಾಧಕ್ಕೆ ತಕ್ಕ ಶಿಕ್ಷೆ ಕೊಡಬೇಕು. ನಿಮಗೆ ನಾನು ದಂಡ ವಿಧಿಸಬೇಕು. ನಾನು ಬ್ರಾಹ್ಮಣನಾಗಿರುವುದರಿಂದ ನಿಮಗೆ ಹಿಂಸೆ ಕೊಡಲು ಸಾಧ್ಯವಿಲ್ಲ.

**ಯುಷ್ಮದ್ವಿಚಾರಹೈನ್ಯೇನ ಯಸ್ಮಾಜ್ಜಾಯಾಪಮಾನಿನಾ ।**
**ಜಾಯಾಪಮಾನಾಪಚಿತಿಃ ಸದೃಶೀ ಭವತಾಮಪಿ ॥ ೮೮ ॥**

**ಭವದ್ದಾರಾಪಮಾನಾರ್ಥಂ ಬಹುರೂಪೀ ಭವಾಮ್ಯಹಮ್ ।**
**ತೈಃ ದೇಹೈಃ ಯುಷ್ಮದಂಗಾನಿ ಪ್ರವಿಶಾಮಿ ನ ಸಂಶಯಃ ॥ ೮೯ ॥**

ನೀವು ಜ್ಞಾನಶೂನ್ಯರಾದುದರಿಂದ ನನ್ನ ಪತ್ನಿಗೆ ಅವಮಾನವಾಗಿದೆ. ನಿಮ್ಮ ಪತ್ನಿಯರಿಗೆ ಅವಮಾನಮಾಡುವ ಇಚ್ಛೆಯಿಂದ ನಾನು ಅನೇಕ ರೂಪಗಳನ್ನು ಹೊಂದಿ ನಿಮ್ಮೆಲ್ಲರ ದೇಹಗಳ ಅವಯವಗಳಲ್ಲಿ ಪ್ರವೇಶ ಮಾಡುತ್ತೇನೆ, ಸಂಶಯವಿಲ್ಲ.

**ಸಹೈವಾನುಭವಿಷ್ಯೇಽಹಂ ಯುಷ್ಮದ್ದಾರಾನ್ ಸ್ವದೇಹಗಃ ।**
**ಇತ್ಯುಕ್ತ್ವಾ ವಿರರಾಮಾಥ ದೇವೇಂದ್ರಾದೀನ್ ಬೃಹಸ್ಪತಿಃ ॥ ೯೦ ॥**

ಹೀಗೆ ಪ್ರವೇಶಿಸಿ ನಿಮ್ಮ ನಿಮ್ಮ ಪತ್ನಿಯರನ್ನು ಅನುಭವಿಸುತ್ತೇನೆ— ಹೀಗೆಂದು ಇಂದ್ರಾದಿಗಳಿಗೆ ತಿಳಿಸಿ ಬೃಹಸ್ಪತಿಯು ಸುಮ್ಮನಾದನು.

**ಕಿಯತ್ಕಾಲಂ ನಿರೀಕ್ಷ್ಯೈವ ನೋಚಿತಂ ತ್ವಿತಿ ತಾನ್ ವದನ್ ।**
**ಸ ಭೂತ್ವಾ ಬಹುರೂಪೋಽಪಿ ದೇವಾಂಗಾನಿ ವಿವೇಶ ಹ ॥ ೯೧ ॥**

ಕೆಲವು ಕಾಲ ಅವಕಾಶ ಕೊಟ್ಟು, ಇದು ನಿಮಗೆ ಸರಿಯಲ್ಲವೆಂದು ಪುನಃ ತಿಳಿಸಿ, ತಾನು ಅನೇಕ ರೂಪಗಳನ್ನು ಧರಿಸಿ ದೇವತೆಗಳ ಅವಯವಗಳನ್ನು ಪ್ರವೇಶಿಸಿದನು.

**ಪಶ್ಯತಾಮೇವ ಸರ್ವೇಷಾಂ ಜಂಭಾರೇಶ್ಚೈವ ಸಂಸದಿ ।**
**ದೃಷ್ಟ್ವೈವ ಪ್ರಾರ್ಥಯಾಂಚಕ್ರುಃ ನಿಷಣ್ಣಾಸ್ತೇ ತದಾ ಸುರಾಃ ॥ ೯೨ ॥**

ಇಂದ್ರಾದಿದೇವತೆಗಳು ನೋಡುತ್ತಿರುವಾಗಲೇ ತಮ್ಮ ತಮ್ಮ ದೇಹಗಳಲ್ಲಿ ಪ್ರವೇಶಮಾಡಿದ ಗುರುವನ್ನು ಕುರಿತು ಖಿನ್ನರಾಗಿ ಹೀಗೆ ಪ್ರಾರ್ಥನೆಯನ್ನು ಮಾಡಿದರು—

*

**ವಯಂ ಬ್ರಹ್ಮಾಣಮೇತ್ಯೈತ್ಯ ಕರಿಷ್ಯಾಮೋಽದ್ಯ ನಿಷ್ಕೃತಿಮ್ ।**
**ತದುಕ್ತ್ವಾ ವರ್ತಮಾನಾಶ್ಚ ತೇ ಭಾರ್ಯಾಯಾ ವಿಮೋಕ್ಷಣಮ್ ॥ ೯೩ ॥**

"ಬೃಹಸ್ಪತಿಯೇ, ನಾವೆಲ್ಲರೂ ಈ ದಿನ ಚತುರ್ಮುಖ ಬ್ರಹ್ಮದೇವರ ಬಳಿ ಹೋಗಿ, ಅವರಿಗೆ ವಿಷಯವನ್ನು ತಿಳಿಸಿ, ಅವರ ಆಜ್ಞೆಯನ್ನು ಪಡೆದು ಅವರ ಆಜ್ಞಾಧಾರಕರಾದ ನಾವು ನಿನ್ನ ಪತ್ನಿಯನ್ನು ಬಿಡಿಸುತ್ತೇವೆ.

**ತಾವತ್ ಕ್ಷಮಸ್ವ ಧಿಷಣ ಮಾ ವಿಷಾದಂ ವೃಥಾ ಕೃಥಾಃ ।**
**ಕಾರಣಂ ಸುಖದುಃಖಾನಾಂ ಭಗವಾನ್ ಹರಿರೀಶ್ವರಃ ॥ ೯೪ ॥**

**ಪೂರ್ವಕರ್ಮಾನುರೋಧೇನ ಭವಿತವ್ಯಂ ದದಾತಿ ಸಃ ।**
**ಸಮಂ ಪಶ್ಯಂತಿ ವೈ ಧೀರಾ ಮಾನಾಮಾನೌ ಜಯಾಜಯೌ ॥ ೯೫ ॥**

ಅಲ್ಲಿಯತನಕ ನಮ್ಮನ್ನು ಕ್ಷಮಿಸು, ವ್ಯರ್ಥವಾಗಿ ದುಃಖಿಸಬೇಡ. ನಮಗೆ ಬರುವ ಸುಖದುಃಖಗಳಿಗೆ ಶ್ರೀಹರಿಯೇ ಕಾರಣನು. ಅವನಾದರೋ ನಮ್ಮ ಪೂರ್ವ ಕರ್ಮಗಳನ್ನು ಅನುಸರಿಸಿ ಏನನ್ನು ಕೊಡಬೇಕೋ ಅದನ್ನು ಕೊಡುತ್ತಾನೆ. ಜ್ಞಾನಿಗಳು ಸುಖದುಃಖಗಳನ್ನೂ, ಮಾನಾಪಮಾನಗಳನ್ನೂ, ಜಯಾಪಜಯಗಳನ್ನೂ ಸಮನಾಗಿ ತಿಳಿಯುತ್ತಾರೆ.

**ಲಾಭಾಲಾಭೌ ಸುಖಂ ದುಃಖಂ ಭಯಂ ಚಾಭಯಮೇವ ಚ ।**
**ಪೂರ್ವಕರ್ಮಾನುರೋಧೇನ ದಾತಾ ವಿಷ್ಣುರ್ನಿವರ್ತಕಃ ॥ ೯೬ ॥**

ಲಾಭ, ನಷ್ಟ, ಸುಖ, ದುಃಖ, ಭಯ, ಅಭಯ ಇವುಗಳನ್ನು ಜನರಿಗೆ ಅವರವರ ಪೂರ್ವಕರ್ಮಾನುಸಾರವಾಗಿ ಶ್ರೀಹರಿಯು ಕೊಡುತ್ತಾನೆ, ಹಾಗೂ ನಾಶಮಾಡುತ್ತಾನೆ.

**ತಸ್ಮಾತ್ ಆವಶ್ಯಕೇ ಕಾರ್ಯೇ ನೋ ವಿಷಾದೋ ಮಹಾತ್ಮನಾಮ್ ।**
**ನಿವೃತ್ತಿಃ ವಿಪದಶ್ಚಾಸ್ಯಾ ಭವಿತಾ ತೇ ನ ಸಂಶಯಃ ॥ ೯೭ ॥**

ಹೀಗೆ ಆಗಲೇಬೇಕಾದ ಕಾರ್ಯಗಳಲ್ಲಿ ಜ್ಞಾನಿಗಳು ದುಃಖಪಡುವುದಿಲ್ಲ. ನಿನ್ನ ದುಃಖನಾಶವೂ ಸಹ ಖಂಡಿತ ಆಗುತ್ತದೆ, ಸಂಶಯವಿಲ್ಲ.

**ನೋಪೇಕ್ಷಾಂ ಕುರುತೇ ಬ್ರಹ್ಮಾ ಲೋಕಾನಾಂ ಚ ಪಿತಾಮಹಃ ।**
**ಗುರುಂ ವಿಶ್ವಸ್ಯ ತೇ ದೇವಾ ಬ್ರಹ್ಮಣಃ ಸದನಂ ಯಯುಃ ॥ ೯೮ ॥**

ಲೋಕಗಳಿಗೆ ಪಿತಾಮಹರಾದ ಬ್ರಹ್ಮದೇವರು ಉಪೇಕ್ಷೆಮಾಡುವುದಿಲ್ಲ. ಹೀಗೆಂದು ಬೃಹಸ್ಪತಿಯಲ್ಲಿ ವಿಶ್ವಾಸ ಹುಟ್ಟಿಸಿ ಆ ದೇವತೆಗಳೆಲ್ಲ ಬ್ರಹ್ಮದೇವರ ಸಭೆಗೆ ಹೋದರು.

**ದೇವಾ ಬ್ರಹ್ಮಸದೋ ಗತ್ವಾ ತಸ್ಮೈ ಸರ್ವಂ ನ್ಯವೇದಯನ್ ।**
**ಶ್ರುತ್ವಾ ಬ್ರಹ್ಮಾಥ ತಾನ್ ಪ್ರಾಹ ದೇವಾನಿಂದ್ರಪುರೋಗಮಾನ್ ॥ ೯೯ ॥**

ಬ್ರಹ್ಮದೇವರ ಸಭೆಯಲ್ಲಿ ಅವರಿಗೆ ಎಲ್ಲ ವಿಷಯಗಳನ್ನು ತಿಳಿಸಿದರು. ಅದನ್ನು ಕೇಳಿದ ಬ್ರಹ್ಮದೇವರು ದೇವೇಂದ್ರನೇ ಮೊದಲಾದ ದೇವತೆಗಳಿಗೆ ಹೇಳಿದರು—

**ಬ್ರಹ್ಮೋವಾಚ—**

**ಪ್ರಾಪ್ತೇ ಶತ್ರುವಿವಾದೇ ತು ಶತ್ರುಣಾ ಶತ್ರುಮುದ್ಧರೇತ್ ।**
**ವಿವಾದೇ ಮಿತ್ರಯೋಃ ಪ್ರಾಪ್ತೇ ಸಾಂತ್ವೇನೈವ ಶಮಂ ನಯೇತ್ ॥ ೧೦೦ ॥**

ಶತ್ರುವಿವಾದ ಬಂದರೆ ಶತ್ರುವಿನಿಂದಲೇ ಶತ್ರುವನ್ನು ಜಯಿಸಬೇಕು; ಮಿತ್ರವಿವಾದ ಬಂದರೆ ಶಾಂತಿಯಿಂದಲೇ ಅದನ್ನು ಪರಿಹರಿಸಬೇಕು.

**ದೇವಬಂಧುಃ ಸದಾ ಸೋಮೋ ಗುರುಶ್ಚಾಪಿ ಮಹಾಮತಿಃ ।**
**ತಸ್ಮಾತ್ ಭಾರ್ಯಾವಿಮೋಕ್ಷಾರ್ಥಂ ದೇವಾಚಾರ್ಯಸ್ಯ ಧೀಮತಃ ॥**
**ಯುಷ್ಮಾಭಿಃ ಸಹ ಗಂತವ್ಯಂ ಮಯಾ ಸೋಮನಿಕೇತನಮ್ ।**
**ಇತ್ಯುಕ್ತ್ವಾ ಪ್ರಯಯೌ ಬ್ರಹ್ಮಾ ದೇವೈಃ ಸೋಮನಿಕೇತನಮ್ ॥ ೧೦೨ ॥**

ಚಂದ್ರನು ದೇವತೆಗಳಿಗೆ ಆಪ್ತನು, ವಿದ್ಯಾವಂತರಾದ ಬೃಹಸ್ಪತಿಯೂ ಸಹ ದೇವತೆಗಳಿಗೆ ಬಂಧುವೇ. ಆದುದರಿಂದ ಬೃಹಸ್ಪತಿಯ ಪತ್ನಿಯನ್ನು ಚಂದ್ರನಿಂದ ಬಿಡಿಸಿಕೊಂಡು ಬರಲು ನಾನು ನಿಮ್ಮೆಲ್ಲರ ಸಂಗಡ ಚಂದ್ರನ ಮನೆಗೆ ಹೋಗಬೇಕಾಗಿದೆ ಎಂದು ಹೇಳಿ ಬ್ರಹ್ಮದೇವರು ದೇವತೆಗಳ ಸಂಗಡ ಚಂದ್ರನಲ್ಲಿಗೆ ಹೋದರು.

**ಬ್ರಹ್ಮಾಣಂ ಚಾಗತಂ ವೀಕ್ಷ್ಯ ದೇವಾನ್ ಮುನಿಗಣಾವೃತಾನ್ ।**
**ವ್ರೀಡಯಾಽವನತೋ ಭೂತ್ವಾ ತ್ರಸ್ತಃ ಸೋಮೋ ವಿನಿರ್ಯಯೌ ॥**

ತನ್ನ ಬಳಿಗೆ ಬಂದ ಬ್ರಹ್ಮದೇವರನ್ನೂ, ದೇವತೆಗಳನ್ನೂ, ಮುನಿಗಳ ಸಮೂಹವನ್ನೂ ನೋಡಿ ಚಂದ್ರನು ನಾಚಿಕೆಯಿಂದ ತಲೆತಗ್ಗಿಸಿ ಎಲ್ಲರನ್ನೂ ಎದುರುಗೊಂಡನು.

**ಪೂಜಯಾಮಾಸ ವಿಧಿವತ್ ದೇವಾನ್ ಬ್ರಹ್ಮಾದಿಕಾಂಸ್ತಥಾ ।**
**ಕಿಂಚಿನ್ನೋವಾಚ ತ್ರಪಯಾ ಸೋಮೋ ರಾಜಾ ಭಯಾಕುಲಃ ॥ ೧೦೪ ॥**

ಬ್ರಹ್ಮದೇವರನ್ನೂ, ಇತರ ದೇವತೆಗಳನ್ನೂ ಯಥೋಚಿತವಾಗಿ ಸತ್ಕರಿಸಿ ಲಜ್ಜೆಯಿಂದ ಯುಕ್ತನಾದ ಚಂದ್ರನು ಯಾವ ಮಾತನ್ನೂ ಆಡಲಿಲ್ಲ. ಅವನಿಗೆ ಭಯವು ಸಹ ಆಗಿತ್ತು.

**ದೇವಾನ್ ವೀಕ್ಷ್ಯ ತತೋ ಬ್ರಹ್ಮಾ ಸೋಮಂ ರಾಜಾನಮಬ್ರವೀತ್ ।**
**ತ್ಯಜೈನಾಂ ತ್ವಂ ಗುರೋಃ ಪತ್ನೀಂ ಮಾತುರಭ್ಯಧಿಕಾಂ ತವ ॥ ೧೦೫ ॥**

ಎಲ್ಲ ದೇವತೆಗಳನ್ನೂ ನೋಡಿ ಬ್ರಹ್ಮದೇವರು ಚಂದ್ರನಿಗೆ ಹೇಳಿದರು— "ತಾಯಿಗಿಂತಲೂ ಶ್ರೇಷ್ಠಳಾದ ಗುರುಪತ್ನಿಯನ್ನು ತ್ಯಜಿಸು.

**ರಾಜ್ಞಾಂ ಚ ಧರ್ಮಶೀಲಾನಾಂ ನಿಂದ್ಯಂ ಕರ್ಮ ನ ಚೋದಿತಮ್ ।**
**ಕಿಂಚ ವಿಷ್ಣುಶ್ಚ ಧರ್ಮಾತ್ಮಾ ಧರ್ಮವಿಘ್ನಕರಾನ್ ಜನಾನ್ ॥ ೧೦೬ ॥**
**ಹನಿಷ್ಯತಿ ನ ಸಂದೇಹೋ ಯತೋ ಧರ್ಮವಪುರ್ಹರಿಃ ।**
**ಯದಾ ಯದಾ ತು ಧರ್ಮಸ್ಯ ಗ್ಲಾನಿರ್ಭವತಿ ಶಾಶ್ವತೀ ॥ ೧೦೭ ॥**
**ತದಾ ತದಾವತಾರೋಽಸ್ಯ ದಯಾಲೋಃ ಪರಮಾತ್ಮನಃ ।**
**ತ್ಯಜ ಶೀಘ್ರಂ ಬ್ರಹ್ಮಜಾಯಾಂ ಮಯಾ ಬಂಧುತಯೋದಿತಮ್ ॥ ೧೦೮ ॥**

ರಾಜರಿಗೂ, ಧರ್ಮಶೀಲರಿಗೂ, ನಿಂದ್ಯ ಕರ್ಮವು ಉಚಿತವಲ್ಲ. ಧರ್ಮ ಸ್ವರೂಪನಾದ ಶ್ರೀವಿಷ್ಣುವು ಧರ್ಮಕ್ಕೆ ಚ್ಯುತಿಯನ್ನುಂಟುಮಾಡುವ ಜನರನ್ನು ಶಿಕ್ಷಿಸುತ್ತಾನೆ, ಸಂಶಯವಿಲ್ಲ. ಯಾವಾಗ ಧರ್ಮಕ್ಕೆ ಹಾನಿ ಬರುವುದೋ ಆಗ ಶ್ರೀಹರಿಯು, ದಯಾಸಮುದ್ರನಾದ ಕಾರಣ, ಅವತಾರಗಳನ್ನು ತೆಗೆದುಕೊಂಡು ಧರ್ಮವನ್ನು ರಕ್ಷಿಸುತ್ತಾನೆ. ನಿನ್ನ ಬಂಧುವಿನಂತೆ ಹೇಳುತ್ತಿದ್ದೇನೆ, ಈ ಬ್ರಾಹ್ಮಣನ ಪತ್ನಿಯನ್ನು ಕೂಡಲೇ ಬಿಟ್ಟುಬಿಡು.

**ನಿಶಮ್ಯ ತದ್ವಚೋ ರಾಜಾ ತತ್ಯಾಜಾತೀವ ವಿಹ್ವಲಃ ।**
**ಪಶ್ಚಾತ್ತಾಪೀ ಬ್ರಹ್ಮಜಾಯಾಂ ರುದನ್ ಸ್ಮೃತ್ವಾ ಸ್ವಕರ್ಮ ಚ ॥೧೦೯॥**

ಬ್ರಹ್ಮದೇವರ ಮಾತನ್ನು ಕೇಳಿದ ಚಂದ್ರನು ತಾನು ಮಾಡಿದ ನಿಂದಿತ ಕರ್ಮ ವನ್ನು ಸ್ಮರಿಸಿ, ಪಶ್ಚಾತ್ತಾಪಗೊಂಡು ಆ ಬ್ರಾಹ್ಮಣಪತ್ನಿಯನ್ನು ಬಿಟ್ಟುಬಿಟ್ಟನು.

**ತತೋ ದೇವಾಃ ಸಮಾಹೂಯ ದೇವಾಚಾರ್ಯಂ ಮಹಾಮತಿಮ್ ।**
**ಜಾಯಾಂ ನಿವೇದಯಾಮಾಸುಃ ತಸ್ಮೈ ಚಿಂತಾಕುಲಾತ್ಮನೇ ॥ ೧೧೦ ॥**

ಚಿಂತೆಯಿಂದ ದುಃಖಿಸುತ್ತಿದ್ದ, ಜ್ಞಾನಿಗಳಾದ ಬೃಹಸ್ಪತ್ಯಾಚಾರ್ಯರನ್ನು ದೇವತೆಗಳೆಲ್ಲರೂ ಕರೆದು ಅವರ ಪತ್ನಿಯನ್ನು ಒಪ್ಪಿಸಿದರು.

**ಸಾ ಸೂತತನಯಂ ತಾವತ್ ಬುಧಂ ಚಂದ್ರಸ್ಯ ವೇಶ್ಮನಿ ।**
**ಅತೀತಾನ್ಯಪಿ ವರ್ಷಾಣಿ ಷಡಯಂ ಪಂಚವಾರ್ಷಿಕಃ ॥ ೧೧೧ ॥**

ಚಂದ್ರನ ಬಳಿಯಲ್ಲಿರುವಾಗ ಬೃಹಸ್ಪತಿಯ ಪತ್ನಿಯು ಬುಧನೆಂಬ ಮಗನಿಗೆ ಜನ್ಮವಿತ್ತಿದ್ದಳು. ಈ ವ್ಯವಹಾರವು ಇತ್ಯರ್ಥವಾಗಲು ಆರು ವರ್ಷಗಳಾದವು. ಅಷ್ಟುಹೊತ್ತಿಗೆ ಬುಧನಿಗೆ ಐದು ವರ್ಷವಾಗಿತ್ತು.

**ಯಯಾಚೇ ಕ್ಷೇತ್ರಜಂ ಬಾಲಂ ಗುರುಃ ಚಂದ್ರಂ ಮಹಾಮತಿಃ ।**
**ಮದ್ವೀರ್ಯಜಃ ಕುಮಾರೋಽಯಂ ನ ತಂ ದಾಸ್ಯಾಮಿ ಚಂದ್ರಮಾಃ ॥**

ಜ್ಞಾನಿಯಾದ ಗುರುವು ತನ್ನ ಪತ್ನಿಯಿಂದ ಜನಿಸಿದ ಬುಧನನ್ನು, ತನಗೆ ಕೊಡಬೇಕೆಂದು ಚಂದ್ರನನ್ನು ಕೇಳಲು, ಚಂದ್ರನು "ಈ ಪುತ್ರನು ನನ್ನ ವೀರ್ಯದಿಂದ ಹುಟ್ಟಿದ್ದಾನೆಯಾದಕಾರಣ ಕೊಡುವುದಿಲ್ಲ" ಎಂದನು.

**ಇತಿ ಪ್ರಾಹ ಕುಮಾರಾರ್ಥೇ ವಿವಾದಃ ಪುನರಪ್ಯಭೂತ್ ।**
**ತತೋ ಬ್ರಹ್ಮಾ ಋಷೀನೂಚೇ ಕಸ್ಯಾಯಮಿತಿ ತದ್ವಿದಃ ॥ ೧೧೩ ॥**

ಈ ಮಗನ ಕಾರಣದಿಂದ ಪುನಹ ವಿವಾದವು ಹುಟ್ಟಿತು. ಬ್ರಹ್ಮದೇವರು ಋಷಿಗಳನ್ನು ಕುರಿತು "ನೀವು ಎಲ್ಲವನ್ನೂ ಬಲ್ಲವರು. ಈ ಪುತ್ರನು ಯಾರಿಗೆ ಸಲ್ಲಬೇಕಾದವನು, ಹೇಳಿರಿ" ಎಂದರು.

**ಋಷಯ ಊಚುಃ—**

**ಕ್ಷೇತ್ರಿಣಾಭ್ಯರ್ಥಿತೋ ಯಸ್ತು ತದೀಯೈರ್ವಾ ಪ್ರಜಾರ್ಥಿಭಿಃ ।**
**ಪರಕ್ಷೇತ್ರೇ ಬೀಜವಾಪೀ ಫಲಂ ನಾಪ್ನೋತಿ ನಿಶ್ಚಯಮ್ ॥ ೧೧೪ ॥**

ಋಷಿಗಳು ಹೇಳಿದರು :

ಸಂತಾನಪ್ರಾಪ್ತಿಗಾಗಿ ಪರಸ್ತ್ರೀಯಳಿಂದ ಪ್ರಾರ್ಥಿತನಾದ ಪುರುಷನು ಅವಳಲ್ಲಿ ಸಂತಾನೋತ್ಪತ್ತಿಯನ್ನು ಮಾಡಿದರೂ, ಆ ಸಂತಾನವು ಆ ಪುರುಷನಿಗೆ ಸೇರತಕ್ಕದ್ದಲ್ಲ, ಇದು ನಿಶ್ಚಯ.

**ಬಲಾತ್ಕಾರಾತ್ ಪರಕ್ಷೇತ್ರೇ ಬೀಜೀ ತು ಫಲಮಶ್ನುತೇ ।**
**ನ ದೋಷಃ ಪ್ರಥಮೋ ಪಕ್ಷೇ ನಾರ್ಯಾ ವಾ ನ ಕುಲಸ್ಯ ಚ ॥ ೧೧೫ ॥**

ಪರಪುರುಷರು ಬಲಾತ್ಕಾರದಿಂದ ಇನ್ನೊಬ್ಬ ಸ್ತ್ರೀ ಸಂಪರ್ಕಮಾಡಿದರೆ, ಅದರಿಂದ ಬರುವ ಫಲವನ್ನು ಅವನೇ ಅನುಭವಿಸಬೇಕು. ಈ ವಿಷಯದಲ್ಲಿ ಸ್ತ್ರೀಗಾಗಲೀ, ಅವಳ ಕುಲಕ್ಕಾಗಲೀ ಯಾವ ದೋಷವೂ ಇರುವುದಿಲ್ಲ.

**ಪಕ್ಷೇ ದ್ವಿತೀಯಕೇ ನಾರೀ ಕುಲಂ ಪಾತಯತೇ ಧ್ರುವಮ್ ।**
**ಮುನಿಭ್ಯಸ್ತು ತದಾ ಬ್ರಹ್ಮಾ ಶ್ರುತ್ವಾ ಧರ್ಮವಿನಿರ್ಣಯಮ್ ॥ ೧೧೬ ॥**
**ನ್ಯವೇದಯತ್ತದಾ ಬ್ರಹ್ಮಾ ಗುರುಚಂದ್ರಮಸೋಸ್ತಥಾ ।**
**ಮದ್ವೀರ್ಯಮಿತಿ ಚಾಚಕ್ಷೇ ಗುರುರಾದೌ ಚ ಸಂಸದಿ ॥ ೧೧೭ ॥**

ಎರಡನೇ ಪಕ್ಷದಲ್ಲಿ ಅಂದರೆ ಸ್ತ್ರೀಯೇ ಪರಪುರುಷನನ್ನು ಬಲಾತ್ಕರಿಸಿ ಸಂಪರ್ಕ ಮಾಡಿದರೆ ಅಂತಹ ಸ್ತ್ರೀ ತನ್ನ ಕುಲವನ್ನೇ ನರಕದಲ್ಲಿ ಕೆಡವುತ್ತಾಳೆ. ಹೀಗೆಂಬ ಮುನಿಗಳ ಧರ್ಮನಿರ್ಣಯವನ್ನು ಕೇಳಿದ ಬ್ರಹ್ಮದೇವರು ಗುರು ಚಂದ್ರರಿಗೆ ಋಷಿಗಳ ನಿರ್ಣಯವನ್ನು ತಿಳಿಸಿದರು. ಆಗ ಆ ಸಭೆಯಲ್ಲಿ ಗುರುವು ಈ ಬಾಲಕನು “ನನ್ನ ವೀರ್ಯದಿಂದ ಜನಿಸಿರುವನು” ಎಂದನು.

**ಮದ್ವೀರ್ಯಮಿತಿ ಚಾಚಕ್ಷೇ ಚಂದ್ರಮಾಸ್ತು ತತಃ ಪರಮ್ ।**
**ತತಃ ಸಂಶಯಮಾಪನ್ನಾ ದೇವಾ ಏವಂ ನ್ಯಮಂತ್ರಯನ್ ॥ ೧೧೮ ॥**
**ಮಾತೈವ ತದ್ವಿಜಾನಾತಿ ಪುತ್ರಜನ್ಮ ನ ಚಾಪರೇ ।**
**ತಸ್ಮಾದೇಷೈವ ಪ್ರಷ್ಟವ್ಯಾ ಇತಿ ನಿಶ್ಚಿತ್ಯ ತೇ ಸುರಾಃ ॥ ೧೧೯ ॥**
**ಬುಧಮಾಹೂಯ ತಂ ಪ್ರೋಚುಃ ಜನನೀಂ ಪೃಚ್ಛ ಬಾಲಕ ।**
**ತ್ವಯಿ ಕಸ್ಮಾಜ್ಜನಿರಭೂತ್ ಇತಿ ಪೃಷ್ಟ್ವಾ ನಿವೇದಯ ॥ ೧೨೦ ॥**

ನಂತರ ಚಂದ್ರನು “ನನ್ನ ವೀರ್ಯದಿಂದ ಉತ್ಪನ್ನನಾಗಿರುವನು” ಎಂದನು. ಇದರಿಂದ ಸಂಶಯಗೊಂಡ ದೇವತೆಗಳು ತಮ್ಮ ತಮ್ಮಲ್ಲಿಯೇ ವಿಚಾರಮಾಡಿ ಪುತ್ರಜನ್ಮಕ್ಕೆ ಕಾರಣ ಯಾರೆಂಬುದು ತಾಯಿಗೆ ಮಾತ್ರವೇ ತಿಳಿದಿರುತ್ತದೆ, ಅನ್ಯರಿಲ್ಲ, ಆದುದರಿಂದ ಅವಳನ್ನೇ ಕೇಳಬೇಕೆಂದು ನಿಶ್ಚಯಿಸಿ, ದೇವತೆಗಳು ಬುಧನನ್ನು ಕರೆದು ಅವನಿಗೆ ಹೇಳಿದರು “ನಿಮ್ಮ ತಾಯಿಯನ್ನು ವಿಚಾರಿಸಿ, ನೀನು ಯಾರ ವೀರ್ಯದಿಂದ ಹುಟ್ಟಿರುವಿ ಎಂಬುದನ್ನು ತಿಳಿದು ಹೇಳು”.

**ಇತಿ ದೇವೈರಥಾಜ್ಞಪ್ತೋ ಬುಧೋಽಪೃಚ್ಛತ್ ಸ್ವಮಾತರಮ್ ।**
**ತ್ವಯಿ ಕಸ್ಮಾತ್ ಜನಿರಭೂತ್ ಮಾತಸ್ತಥ್ಯಂ ನ ಚಾನ್ಯಥಾ ॥ ೧೨೧ ॥**
**ನಾನೃತಾತ್ಪರಮಂ ಪಾಪಂ ದೇವಾನಾಂ ಚೈವ ಸಂಸದಿ ।**
**ಇತಿ ಪೃಷ್ಟಾಽತ್ಮಜೇನಾಥ ಚಂದ್ರಾಜ್ಜನ್ಮೇತಿ ಚಾಬ್ರವೀತ್ ॥ ೧೨೨ ॥**

ಹೀಗೆ ದೇವತೆಗಳಿಂದ ಆಜ್ಞಪ್ತನಾದ ಬುಧನು ತನ್ನ ತಾಯಿಯನ್ನು ಕೇಳಿದನು "ನಿನ್ನಲ್ಲಿ ನಾನು ಯಾರ ವೀರ್ಯದಿಂದ ಜನಿಸಿರುತ್ತೇನೆ ಎಂಬುದನ್ನು ಸತ್ಯವಾಗಿ ಹೇಳು. ದೇವತೆಗಳ ಸಭೆಯಲ್ಲಿ ಸುಳ್ಳು ಹೇಳುವುದಕ್ಕಿಂತಲೂ ದೊಡ್ಡ ಪಾಪವಿಲ್ಲ." ಹೀಗೆ ಪ್ರಶ್ನಿಸಲ್ಪಟ್ಟ ತಾಯಿಯು "ನಿನ್ನ ಜನ್ಮವು ಚಂದ್ರನಿಂದ ಆಗಿದೆ" ಎಂದಳು.

**ತತ್ ಶ್ರುತ್ವಾಥ ಬುಧಃ ಪ್ರಾಹ ದೇವಾನ್ ಬ್ರಹ್ಮಪುರೋಗಮಾನ್ ।**
**ಮಾತಾಽಹ ಮೇ ಜನಿಂ ದೇವಾಶ್ಚಂದ್ರಾದಿತಿ ಚ ಸ್ವೈರಿಣೀ ॥ ೧೨೩ ॥**

ಇದನ್ನು ಕೇಳಿದ ಬುಧನು ಬ್ರಹ್ಮದೇವರೇ ಮೊದಲಾದ ದೇವತೆಗಳಿಗೆ ಹೇಳಿದನು "ವ್ಯಭಿಚಾರಣಿಯಾದ ನನ್ನ ತಾಯಿಯು ನನ್ನ ಜನ್ಮವು ಚಂದ್ರನಿಂದ ಆಗಿದೆಯೆಂದು ತಿಳಿಸಿದಳು."

**ತತ್ ಶ್ರುತ್ವಾ ದೇವತಾ ಊಚುಃ ಗುರುಂ ಪುತ್ರಾಭಿಕಾಂಕ್ಷಿಣಮ್ ।**
**ಚಂದ್ರಂ ತು ಬೀಜಿನಂ ಪ್ರಾಹುಃ ಬಲಾತ್ಕಾರೀಯತೋ ವಿಧುಃ ॥ ೧೨೪ ॥**
**ನ ಪ್ರಾರ್ಥಿತಸ್ತ್ವಯಾ ಪೂರ್ವಂ ಅತಶ್ಚಂದ್ರೋಽರ್ಹತಿ ಧ್ರುವಮ್ ।**
**ಗುರುಃ ದೇವವಚಃ ಶ್ರುತ್ವಾ ಪುತ್ರಂ ಚಂದ್ರಮಸೇಽರ್ಪಯತ್ ॥ ೧೨೫ ॥**

ಇದನ್ನು ಕೇಳಿದ ದೇವತೆಗಳು ಪುತ್ರನನ್ನು ಪಡೆಯಲು ಇಚ್ಛೆಯುಳ್ಳ ಬೃಹಸ್ಪತಿಗೆ ತಿಳಿಸಿದರು—"ಚಂದ್ರನು ಬಲಾತ್ಕರಿಸಿ ನಿನ್ನ ಪತ್ನಿಯ ಸಂಪರ್ಕ ಮಾಡಿದ್ದರಿಂದ ಆ ಪುತ್ರನು ಚಂದ್ರನಿಗೇ ಸಲ್ಲಬೇಕು. ನೀನು ಮೊದಲೇ ಈ ವಿಷಯವನ್ನು ತಿಳಿಸಿರಲಿಲ್ಲವಾದಕಾರಣ, ಮಗುವು ಚಂದ್ರನ ಬಳಿಯಲ್ಲಿಯೇ ಇರುವುದು ನ್ಯಾಯ". ನಂತರ ಬೃಹಸ್ಪತಿಯು ಆ ಹುಡುಗನನ್ನು ಚಂದ್ರನಿಗೆ ಒಪ್ಪಿಸಿದನು.

**ಸಭಾರ್ಯಕೋ ಗುರುಸ್ತಸ್ಥೌ ಸಭಾಮಧ್ಯೇಽಪಿ ವೀಕ್ಷಿತಃ ।**
**ಪ್ರಾದಾದ್ರಾಜ್ಯಂ ಬುಧಾಯಾಸೌ ಪ್ರಜಾಶ್ಚಾಹೂಯ ಚಂದ್ರಮಾಃ ॥**

ಪತ್ನಿಯಿಂದ ಯುಕ್ತನಾದ ಗುರುವನ್ನು ಸಭಿಕರೆಲ್ಲರೂ ಸಭೆಯಲ್ಲಿ ನೋಡಿದರು. ಚಂದ್ರನು ಪ್ರಜೆಗಳನ್ನು ಕರೆದು ಅವರ ಸಮ್ಮುಖದಲ್ಲಿ ಬುಧನಿಗೆ ರಾಜ್ಯವನ್ನು ಅರ್ಪಿಸಿದನು.

**ರಾಜ್ಯಂ ನಿವೇದಿತಂ ಹ್ಯಸ್ಮೈ ಸ ತು ವಃ ಪಾಲಯಿಷ್ಯತಿ ।**
**ಇತ್ಯುಕ್ತೇ ತು ಶಶಾಂಕೇನ ಪ್ರಜಾ ಊಚುಶ್ಚ ಸಂಸದಿ ॥ ೧೨೭ ॥**

"ಬುಧನಿಗೆ ರಾಜ್ಯಭಾರವನ್ನು ವಹಿಸಿರುತ್ತೇನೆ. ನಿಮ್ಮೆಲ್ಲರನ್ನೂ ಅವನು ಮುಂದೆ ರಕ್ಷಿಸುತ್ತಾನೆ" ಎಂಬುದಾಗಿ ಚಂದ್ರನು ನಾಗರಿಕರನ್ನು ಕುರಿತು ಹೇಳಲು, ಅವರು ಚಂದ್ರನಿಗೆ ಹೀಗೆ ನುಡಿದರು—

**ಶೃಣು ಚಂದ್ರ ಪ್ರವಕ್ಷ್ಯಾಮಃ ಕುಂಡಜಸ್ತ್ವಾತ್ತವಾತ್ಮಜಃ ।**
**ರಾಜ್ಯಂ ನಾರ್ಹತಿ ಕುಂಡತ್ವಾತ್ ತಸ್ಯ ಧರ್ಮೇ ಮತಿಃ ಕುತಃ ॥ ೧೨೮ ॥**

ಚಂದ್ರನೇ, ನಮ್ಮ ಮಾತನ್ನು ಕೇಳು ; ಈ ನಿನ್ನ ಬುಧನೆಂಬ ಮಗನು ಕುಂಡ (ಲಗ್ನವಾದ ಸುಮಂಗಲಿಯು ಪರಪುರುಷನಿಂದ ಪಡೆದ ಮಗ). ಆದುದರಿಂದ ಅವನು ರಾಜ್ಯವನ್ನಾಳಲು ಅರ್ಹನಲ್ಲ. ಅಲ್ಲದೇ ಅವನಿಗೆ ಧರ್ಮದಲ್ಲಿ ಬುದ್ಧಿ ಹೇಗಿರುತ್ತದೆ ?

**ಅನೂಚಾನಕುಲೀನಸ್ತು ರಾಜ್ಯಮರ್ಹತಿ ನಾಪರಃ ।**
**ನಾಂಗೀಚಕ್ರುರ್ವಿಶಃ ಸರ್ವೇ ಬುಧಂ ಚಂದ್ರತನೂದ್ಭವಮ್ ॥ ೧೨೯ ॥**

ಒಳ್ಳೆಯ ಕುಲದಲ್ಲಿ ಉತ್ಪನ್ನನಾದವನು, ಸಂಪ್ರದಾಯದಂತೆ ವೇದಾಧ್ಯಯನ ಮಾಡಿದವನು ಮಾತ್ರ ರಾಜನಾಗಲು ಅರ್ಹ, ಇತರರಲ್ಲ. ಹೀಗೆಂದು ನುಡಿದು ವೈಶ್ಯರೆಲ್ಲರೂ ಚಂದ್ರನ ಮಗನಾದ ಬುಧನನ್ನು ರಾಜನನ್ನಾಗಿ ಅಂಗೀಕರಿಸಲಿಲ್ಲ.

**ಗುರುಃ ಪ್ರಾಹ ನಿಜಾಂ ಭಾರ್ಯಾಂ ದುಷ್ಟಾಂ ತ್ವಾಂ ತು ನ ಪಾಲಯೇ ।**
**ನ ಹನಿಷ್ಯಾಮಿ ತ್ವಾಂ ಪಾಪಾಂ ಯಾವದಾಮರಣಾಂತಿಕಮ್ ॥ ೧೩೦ ॥**
**ಕುಡ್ಯಮಧ್ಯೇ ವಿನಿಕ್ಷಿಪ್ಯ ಕಿಂಚಿತ್ತೇ ಜೀವನಂ ದದೇ ।**
**ಗುರೋರ್ವಿಶಾಂ ತದಾ ವಾಕ್ಯಂ ಶ್ರುತ್ವಾ ಮಾತಾ ಕುಮಾರಕಃ ॥ ೧೩೧ ॥**
**ಸಂಸದಂ ತು ಸಮಾಸಾದ್ಯ ಪ್ರೋಚತುರ್ದೇವತಾಮುನೀನ್ ।**
**ಜಾಯಾಂ ಗುರುರ್ಜಹೌ ಪಾಪಾಂ ನಾಂಗೀಕುರ್ವಂತಿ ಮಾಂ ಜನಾಃ ॥**

ಇದನ್ನು ಕೇಳಿದ ಬೃಹಸ್ಪತಿಯು ದುಷ್ಟಳಾದ ತನ್ನ ಪತ್ನಿಗೆ ಹೇಳಿದನು : "ಪಾಪಿಷ್ಠೆಯಾದ ನಿನ್ನನ್ನು ನಾನು ರಕ್ಷಿಸುವುದಿಲ್ಲ, ಸಂಹರಿಸುವುದೂ ಇಲ್ಲ. ನೀನು ಬದುಕಿರುವ ತನಕ ಒಂದು ಮುರುಕು ಮನೆಯಲ್ಲಿಟ್ಟು, ಜೀವನಾಧಾರಕ್ಕೆ ಏನಾದರೂ ಸ್ವಲ್ಪ ನೀಡುತ್ತೇನೆ". ಬೃಹಸ್ಪತಿಯು ಹಾಗೂ ವೈಶ್ಯರ ಮಾತುಗಳನ್ನು ಕೇಳಿದ ತಾಯಿಯೂ ಮಗನಾದ ಬುಧನೂ ಇಂದ್ರನ ಸಭೆಗೆ ಬಂದು ಅಲ್ಲಿದ್ದ ದೇವತೆಗಳಿಗೂ, ಮುನಿಗಳಿಗೂ ಹೇಳಿದರು—ಗುರುವು ಪಾಪಿಷ್ಠಳೆಂದು ಪತ್ನಿಯನ್ನು ತ್ಯಜಿಸಿದರು, ಜನರು ನನ್ನನ್ನು (ಬುಧನನ್ನು) ಅಂಗೀಕರಿಸಲಿಲ್ಲ.

**ನಿಷ್ಕೃತಿಶ್ಚೈನಸೋಽಪ್ಯಸ್ತಿ ಕುರುಧ್ವ ಚಾವಯೋಃ ಸತಃ ।**
**ನಾಸ್ತಿ ಚೇತ್ ಉಪದೇಶೋ ಹಿ ದೇಹನಾಶೋ ದುರಾತ್ಮನಾಮ್ ॥೧೩೩॥**

ನಮ್ಮಿಬ್ಬರ ಈ ಸ್ಥಿತಿಗೆ ಸಜ್ಜನರಾದ ನೀವು ಪ್ರಾಯಶ್ಚಿತ್ತವನ್ನು ಹೇಳಿ, ಮಾಡಿರಿ. ಇಲ್ಲದಿದ್ದರೆ ಈ ದೇಹಗಳ ನಾಶವೇ ಸರಿಯಾದ ಕ್ರಮ.

**ತದ್ವೈವಾನ್ಯತರಂ ಪಕ್ಷಮಸ್ತಿ ನಾಸ್ತಿ ವಿನಿಶ್ಚಯೇ ।**
**ಆವಾಮೇವ ಕರಿಷ್ಯಾವೋ ನಾತ್ರ ಕಾರ್ಯಾ ವಿಚಾರಣಾ ॥ ೧೩೪ ॥**

ಇನ್ನು ಈ ಎರಡಲ್ಲದೇ ಬೇರೆ ಮಾರ್ಗ ಯಾವುದಿದ್ದರೂ ನಾವಿಬ್ಬರೇ ನಿಶ್ಚಯಿಸಿ, ಸೂಕ್ತ ಕಾರ್ಯವನ್ನು ಮಾಡುತ್ತೇವೆ, ಇದರಲ್ಲಿ ಸಂಶಯವಿಲ್ಲ.

**ಇತ್ಯುಕ್ತೇ ಚ ತದಾ ತಾಭ್ಯಾಂ ಮುನೀನ್ ಬ್ರಹ್ಮಾವಲೋಕಯತ್ ।**
**ಬ್ರಹ್ಮಣೋ ಹೃದಯಂ ಜ್ಞಾತ್ವಾ ಸ್ವಮತಂ ತೇ ನ್ಯವೇದಯನ್ ॥ ೧೩೫ ॥**

ತಾಯಿ-ಮಗನ ಮಾತನ್ನು ಕೇಳಿ ಬ್ರಹ್ಮದೇವರು ಋಷಿಗಳ ಕಡೆಗೆ ನೋಡಿದರು. ಬ್ರಹ್ಮದೇವರ ಇಂಗಿತವನ್ನರಿತ ಋಷಿಗಳು ತಮ್ಮ ಅಭಿಪ್ರಾಯವನ್ನು ಹೇಳಿದರು.

**ಪತ್ಯೌ ಜೀವತಿ ಯಾ ನಾರೀ ಮೃತೇ ವಾ ವ್ಯಭಿಚಾರಿಣೀ ।**
**ಚಾಂಡಾಲೀ ಸಾ ತು ವಿಜ್ಞೇಯಾ ಸರ್ವಕರ್ಮಸು ಗರ್ಹಿತಾ ॥ ೧೩೬ ॥**

ಪತಿಯು ಬದುಕಿರುವ ಕಾಲದಲ್ಲಾಗಲೀ, ಮರಣಹೊಂದಿದ ನಂತರವಾಗಲೀ ಯಾವ ಸ್ತ್ರೀಯು ಪರಪುರುಷನ ಸಂಪರ್ಕ ಮಾಡುವಳೋ ಅವಳು ಚಾಂಡಾಲಿ ಎಂದೆನಿಸುವಳು ; ಸಕಲ ಸತ್ಕರ್ಮಗಳಲ್ಲಿಯೂ ನಿಂದಿತಳು.

**ದಾಕ್ಷಿಣ್ಯಾದರ್ಥಲೋಭಾದ್ವಾ ಸಂಸರ್ಗಂ ಯೇ ಪ್ರಕುರ್ವತೇ ।**
**ತೇ ಸರ್ವೇ ನರಕಂ ಯಾಂತಿ ಯಾವದಾಭೂತಸಂಪ್ಲವಮ್ ॥ ೧೩೭ ॥**

ದಾಕ್ಷಿಣ್ಯದಿಂದಲಾಗಲೀ, ಹಣದ ಆಸೆಯಿಂದಲಾಗಲೀ ಯಾರು ಇಂತಹ ಸಂಪರ್ಕ ಮಾಡುವರೋ ಅವರು ಪ್ರಳಯಕಾಲದವರೆವಿಗೂ ನರಕದಲ್ಲಿ ಇರುತ್ತಾರೆ.

**ತೌ ಸುತೌ ಕರ್ಮಚಾಂಡಾಲೌ ದ್ವೌ ಪ್ರೋಕ್ತೌ ಕುಂಡಗೋಲಕೌ ।**
**ಇತ್ಯುಕ್ತೇ ಮುನಿಭಿಃ ಸರ್ವೈಃ ತದಾ ಧರ್ಮಸ್ಯ ನಿರ್ಣಯೇ ॥ ೧೩೮ ॥**
**ತದಾ ನಿರ್ವೇದಮಾಪನ್ನಾ ದೇವಾ ಬ್ರಹ್ಮಾಣಮೂಚಿರೇ ।**
**ಅಸ್ಮಾಕಂ ತು ವೃಥಾ ಜಾತಃ ಪ್ರಯಾಸಃ ಕಮಲಾಸನ ॥ ೧೩೯ ॥**

ಕುಂಡ, ಗೋಲಕರಿಬ್ಬರೂ ಕರ್ಮವಿಷಯದಲ್ಲಿ ಚಾಂಡಾಲರೇ (ಪತಿಯು ಇರುವಾಗ ಪರಪುರುಷನಿಂದ ಹುಟ್ಟಿದವನು ಕುಂಡ, ವಿಧವೆಯಲ್ಲಿ ಪರಪುರುಷನಿಂದ ಉತ್ಪನ್ನನಾದವನು ಗೋಲಕ) ಹೀಗೆಂದು ಮುನಿಗಳು ಧರ್ಮನಿರ್ಣಯವನ್ನು ಹೇಳಲು ಇದನ್ನು ಕೇಳಿ ಖಿನ್ನರಾದ ದೇವತೆಗಳು ಬ್ರಹ್ಮದೇವರಿಗೆ ಹೇಳಿದರು— ನಮ್ಮ ಪ್ರಯಾಸವೆಲ್ಲ ವ್ಯರ್ಥವಾಯಿತು.

**ಸ್ವಾತ್ಮನೇ ವಿಷ್ಣುನಾ ಪ್ರೋಕ್ತಂ ಪ್ರಾಯಶ್ಚಿತ್ತಂ ಪ್ರಚೋದಯ ।**
**ಯುಕ್ತಾನಾಂ ಚೈವ ನಾರೀಣಾಂ ಮಹಾಪಾತಕಕೋಟಿಭಿಃ ॥ ೧೪೦ ॥**

ಕೋಟಿ ಪಾತಕಗಳನ್ನು ಮಾಡಿರುವ ಸ್ತ್ರೀಯರ ಉದ್ಧಾರಕ್ಕಾಗಿ ಶ್ರೀವಿಷ್ಣುವು ನಿಮಗೆ ಹೇಳಿರುವ ಪ್ರಾಯಶ್ಚಿತ್ತದ ಬಗೆಯನ್ನು ತಿಳಿಸಿರಿ.

**ಲಕ್ಷವರ್ತೀವ್ರತಂ ಚೈವ ಮಾಘಸ್ನಾನಂ ತು ನಿಷ್ಕೃತಿಃ ।**
**ಕುಂಡಾನಾಂ ಗೋಲಕಾನಾಂ ಚ ಮಹಾಪಾಪಕೃತಾಮಪಿ ॥ ೧೪೧ ॥**

**ಕಥಾಯಾಃ ಶ್ರವಣಂ ಚೈವ ಮಾಘಸ್ನಾನಂ ತು ನಿಷ್ಕೃತಿಃ ।**
**ಮಾಘ್ಯಾಂ ಸ್ನಾತ್ವಾ ತು ಯೋ ದದ್ಯಾತ್ ಅಶ್ವಂ ಲಕ್ಷಣಸಂಯುತಮ್ ॥**
**ಗುರುತಲ್ಪಾದ್ವಿಮುಕ್ತಃ ಸ್ಯಾತ್ ಏವಮಾಹ ಜನಾರ್ದನಃ ।**
**ತಸ್ಮಾದೇತೈಸ್ತ್ರಿಭಿಃ ಕಾರ್ಯಂ ಏತತ್ ತ್ರಯಮನುತ್ತಮಮ್ ॥ ೧೪೩ ॥**

ಮಾಘಸ್ನಾನ ಮತ್ತು ಲಕ್ಷಬತ್ತೀ ವ್ರತಗಳು ಕುಂಡರ ಹಾಗೂ ಗೋಲಕರ ಎಂತಹ ಅಗಾಧ ಪಾಪಗಳನ್ನಾದರೂ ಪರಿಹರಿಸುತ್ತವೆ. ಮಾಘಸ್ನಾನ ಮಾಡಿ, ಶ್ರೀಹರಿಯ ಮಾಹಾತ್ಮ್ಯೆಯನ್ನು ಶ್ರವಣಮಾಡುವುದರಿಂದ ಪ್ರಾಯಶ್ಚಿತ್ತವಾಗುತ್ತದೆ. ಮಾಘದಲ್ಲಿ ಸ್ನಾನಮಾಡಿ ಒಳ್ಳೆಯ ಲಕ್ಷಣಗಳಿಂದ ಯುಕ್ತವಾದ ಅಶ್ವವನ್ನು ದಾನಮಾಡಿದರೆ ಗುರುತಲ್ಪ ಪಾಪದಿಂದಲೂ ಮುಕ್ತರಾಗುತ್ತಾರೆಂದು ಶ್ರೀಹರಿಯು ನನಗೆ ಹೇಳಿರುತ್ತಾನೆ. ಆದುದರಿಂದ ಎಲ್ಲ ಸ್ತ್ರೀಯರೂ ಈ ಮೂರನ್ನೂ (ಮಾಘಸ್ನಾನ, ಲಕ್ಷಬತ್ತೀವ್ರತ, ಹರಿಕಥಾಶ್ರವಣ) ಆಚರಿಸಬೇಕು. ಅವು ಅತ್ಯುತ್ತಮವಾದ ಸಾಧನೆ.

**ತೇ ಶುದ್ಧಾಃ ತೇ ತು ಪೂಜ್ಯಾಸ್ತು ನಾತ್ರ ಕಾರ್ಯಾ ವಿಚಾರಣಾ ।**
**ಉಪದಿಶ್ಯ ಜನಾನ್ ಸಮ್ಯಕ್ ಗುರುಂ ಚೈವ ಬುಧಂ ತಥಾ ॥ ೧೪೪ ॥**
**ಬ್ರಹ್ಮಾಥ ಕಾರಯಾಮಾಸ ಹರಿಣೋಕ್ತಂ ತ್ರಯಂ ತದಾ ।**
**ಬ್ರಹ್ಮಜಾಯಾ ತದಾ ಲಕ್ಷವರ್ತೀವ್ರತಪ್ರಭಾವತಃ ॥ ೧೪೫ ॥**
**ಸಾಧ್ವೀನಾಮಗ್ರಗಣ್ಯಾऽಭೂತ್ ಸ್ಮೃತಾ ಸರ್ವಾಘನಾಶಿನೀ ।**
**ನಿಃಶಂಕೋ ಜಗೃಹೇ ಭಾರ್ಯಾಂ ವಿಶ್ವಸನ್ ಬ್ರಹ್ಮಣೋದಿತಮ್ ॥ ೧೪೬ ॥**

ಅಂತಹ ಜನರೆಲ್ಲರೂ ಪರಿಶುದ್ಧರಾಗುತ್ತಾರೆ, ಎಲ್ಲರಿಂದಲೂ ಪೂಜ್ಯರಾಗುತ್ತಾರೆ, ವಿಚಾರವಿಲ್ಲ. ಹೀಗೆಂದು ಗುರುವಿಗೆ, ಬುಧನಿಗೆ ಇತರ ಜನರಿಗೆ ಉಪದೇಶಿಸಿ ಬ್ರಹ್ಮದೇವರು ಅವರಿಂದ ಶ್ರೀಹರಿಯು ಹೇಳಿದ ಮೂರು ವ್ರತಗಳನ್ನೂ ಮಾಡಿಸಿದರು. ಗುರುವಿನ ಪತ್ನಿಯು ಲಕ್ಷಬತ್ತೀ ವ್ರತದ ಪ್ರಭಾವದಿಂದ ಪತಿವ್ರತಾಸ್ತ್ರೀಯರಲ್ಲಿ ಶ್ರೇಷ್ಠಳಾದಳು. ಆವಳನ್ನು ಸ್ಮರಣೆಮಾಡಿದರೆ ಸಮಸ್ತ ಪಾಪಗಳೂ ನಾಶವಾಗುವ ಸಾಮರ್ಥ್ಯ ಪಡೆದಳು. ಬ್ರಹ್ಮದೇವರ ಮಾತಿನಲ್ಲಿ ನಂಬಿಕೆ ಇಟ್ಟು, ಯಾವ ಸಂದೇಹವೂ ಇಲ್ಲದೇ, ಬೃಹಸ್ಪತಿಯು ತನ್ನ ಪತ್ನಿಯನ್ನು ಸ್ವೀಕರಿಸಿದನು.

**ಬುಧಂ ಜನಾಶ್ಚ ಜಗೃಹುಃ ನಿಷ್ಪಾಪಂ ಮೇನಿರೇ ಧ್ರುವಮ್ ।**
**ಕೃತ್ವಾ ದೇವಾ ಗುರೋಃ ಕಾರ್ಯಂ ಬ್ರಹ್ಮಾದ್ಯಾಶ್ಚ ಯಥಾಗತಾಃ ॥೧೪೭॥**
**ಮಾಘಪ್ರಭಾವಂ ಶಂಸಂತಃ ಸ್ವಸ್ವಧಾಮಾನಿ ತೇ ಯಯುಃ ।**

ಜನರು ಬುಧನನ್ನು ಪಾಪರಹಿತನೆಂದು ತಿಳಿದು ರಾಜನನ್ನಾಗಿ ಅಂಗೀಕರಿಸಿದರು. ಬ್ರಹ್ಮಾದಿ ದೇವತೆಗಳು ಬೃಹಸ್ಪತಿಯ ಕಾರ್ಯವನ್ನು ಮುಗಿಸಿ ಮಾಘಸ್ನಾನ, ವ್ರತಗಳ ಮಹಿಮೆಯನ್ನು ಹೊಗಳುತ್ತಾ ತಮ್ಮ ತಮ್ಮ ಸ್ಥಳಗಳಿಗೆ ಹೋದರು.

**ಗಾಲವ ಉವಾಚ—**

**ತಸ್ಮಾತ್ ಮಾಘಪ್ರಭಾವೋಽಯಂ ಲೇಶಮಾತ್ರೇಣ ಕೀರ್ತಿತಃ ॥ ೧೪೮ ॥**

ಗಾಲವರು ನುಡಿದರು :

ಇಂತಹ ಮಾಘಮಾಸದ ಮಾಹಾತ್ಮ್ಯೆಯನ್ನು ಸ್ವಲ್ಪವೇ ಹೇಳಿರುತ್ತೇನೆ.

**ನಕ್ಷತ್ರಾಣಿ ಚ ಗಣ್ಯಂತೇ ಗಣ್ಯಂತೇ ಚೋದಬಿಂದವಃ ।**
**ಭೂಕಣಾ ಅಪಿ ಗಣ್ಯಂತೇ ಯೇನ ಕೇನ ಮಹಾತ್ಮನಾ ॥ ೧೪೯ ॥**

**ನ ಗಣ್ಯತೇ ಮಾಘಮಾಸಪ್ರಭಾವೋ ಲೇಶತೋಽಪಿ ವಾ ।**
**ವಿಚಾರಿತಾ ಮಯಾ ಸರ್ವೇ ಧರ್ಮಾಃ ಶಾಸ್ತ್ರೇಷು ಚೋದಿತಾಃ ॥ ೧೫೦ ॥**

ಯಾವನೊಬ್ಬ ಮಹಾತ್ಮನಿಂದ ನಕ್ಷತ್ರಗಳು ಎಣಿಸಲ್ಪಡಬಹುದು, ನೀರಿನ ಹನಿಗಳು ಎಣಿಸಲ್ಪಡಬಹುದು, ಭೂಮಿಯಲ್ಲಿನ ಧೂಳಿನ ಕಣಗಳು ಎಣಿಸಲ್ಪಡಬಹುದು ; ಆದರೆ ಮಾಘಮಾಸದ ಮಾಹಾತ್ಮ್ಯೆಯನ್ನು ಯಾರೂ ಸಹ ಕಿಂಚಿತ್ತೂ ಎಣಿಸಲಾರರು. ನಾನೂ ಸಹ ಅನೇಕ ಶಾಸ್ತ್ರಗಳಲ್ಲಿ ಹೇಳಿರುವ ನಾನಾ ಧರ್ಮಗಳನ್ನು ಪರಿಶೀಲಿಸಿರುತ್ತೇನೆ.

**ನ ಮಾಘಸದೃಶೋ ಧರ್ಮೋ ನ ದೃಷ್ಟೋ ನಾಪಿ ವೈ ಶ್ರುತಃ ।**
**ಯತ್ಕಿಂಚಿತ್ ಕುರುತೇ ಕರ್ಮ ಮಾಘೇ ಮಾಸಿ ದ್ವಿಜೋತ್ತಮಃ ॥೧೫೧॥**
**ತದಕ್ಷಯ್ಯಫಲಂ ಪ್ರಾಹುಃ ವರ್ಧತೇ ವಟಬೀಜವತ್ ।**

ಆದರೆ ಮಾಘಮಾಸ ಧರ್ಮಕ್ಕೆ ಸಮಾನವಾದ ಬೇರೊಂದು ಧರ್ಮವು ಕಂಡಿಲ್ಲ, ಕೇಳಲ್ಪಟ್ಟಿಲ್ಲ. ಮಾಘದಲ್ಲಿ ಮಾಡಿದ ಸ್ವಲ್ಪ ಸತ್ಕರ್ಮವೂ ಸಹ ನಿರವಧಿಕವಾದ ಫಲವನ್ನು ಕೊಡುತ್ತದೆ, ವಟ ಬೀಜದಂತೆ ಬೆಳೆಯುತ್ತದೆ.

**ಮಾಘಧರ್ಮಾನ್ ಯದಾ ಶ್ರುತ್ವಾನ ಕರೋತಿ ನರಾಧಮಃ ॥ ೧೫೨ ॥**
**ಸ ಆತ್ಮಹಾ ಬ್ರಹ್ಮಹಾ ಚ ನರಕಾನೇವ ಗಚ್ಛತಿ ।**
**ಯ ಇದಂ ಶೃಣುಯಾನ್ನಿತ್ಯಂ ಇತಿಹಾಸಂ ಪುರಾತನಮ್ ॥ ೧೫೩ ॥**
**ಸರ್ವಪಾಪವಿನಿರ್ಮುಕ್ತಃ ಸರ್ವಾನ್ ಉದ್ಧೃತ್ಯ ವೈ ಪಿತೄನ್ ।**
**ಭುಕ್ತ್ವೇಹ ಕಾಮಾನ್ ಸರ್ವಾಂಶ್ಚ ವಿಷ್ಣುಲೋಕೇ ಮಹೀಯತೇ ॥೧೫೪॥**

ಮಾಘಮಾಸದ ಧರ್ಮಗಳನ್ನು ಶ್ರವಣಮಾಡಿಯೂ ಆಚರಿಸದೇ ಇರುವ ಅಧಮನು ಆತ್ಮಹತ್ಯ, ಬ್ರಹ್ಮಹತ್ಯ ಪಾಪಗಳನ್ನು ಮಾಡಿದಂತೆಯಾಗುತ್ತದೆ. ಅವನು ನರಕಕ್ಕೇ ಹೋಗುತ್ತಾನೆ. ಯಾವನು ಪುರಾತನವಾದ ಈ ಇತಿಹಾಸವನ್ನು ಶ್ರದ್ಧೆಯಿಂದ ಶ್ರವಣಮಾಡುತ್ತಾನೆಯೋ, ಅವನು ಸಮಸ್ತ ಪಾಪಗಳಿಂದಲೂ ಮುಕ್ತನಾಗಿ, ತನ್ನ ಪಿತೃಗಳಿಗೆಲ್ಲ ಸದ್ಗತಿಯನ್ನು ತಂದು, ಇಹಲೋಕದಲ್ಲಿ ಎಲ್ಲ ಭೋಗಗಳನ್ನೂ ಅನುಭವಿಸಿ, ಕಡೆಯಲ್ಲಿ ವಿಷ್ಣುಲೋಕದಲ್ಲಿ ಸುಖದಿಂದ ಇರುತ್ತಾನೆ.

ಇತಿ ಶ್ರೀ ವಾಯುಪುರಾಣೇ ಮಾಘಮಾಸಮಾಹಾತ್ಮ್ಯೇ
ಅಷ್ಟಾವಿಂಶೋಽಧ್ಯಾಯಃ

ಶ್ರೀ ವಾಯುಪುರಾಣಾಂತರ್ಗತ ಮಾಘಮಾಸ ಮಾಹಾತ್ಮ್ಯೆಯಲ್ಲಿ
ಇಪ್ಪತ್ತೆಂಟನೇ ಅಧ್ಯಾಯವು ಸಮಾಪ್ತಿಯಾಯಿತು.

**ಗಾಲವ ಉವಾಚ—**

**ಭೂಯಃ ಶೃಣುಧ್ವಂ ವಕ್ಷ್ಯಾಮಿ ಮಾಘಮಾಹಾತ್ಮ್ಯಮುತ್ತಮಮ್ ।**
**ಯಜ್ಜ್ಞಾತ್ವಾ ಮುಚ್ಯತೇ ಜಂತುಃ ಕಿಮನುಷ್ಠಾನತತ್ಪರಃ ॥ ೧ ॥**

ಗಾಲವರು ನುಡಿದರು :

ಈ ಮಾಘಮಾಸದ ಮಾಹಾತ್ಮ್ಯೆಯನ್ನು ಇನ್ನೂ ಹೇಳುತ್ತೇನೆ, ಶ್ರವಣ ಮಾಡಿ ; ಈ ಮಾಹಾತ್ಮ್ಯೆಯನ್ನು ತಿಳಿಯುವುದರಿಂದಲೇ ಮನುಷ್ಯನು ಸಂಸಾರ ಬಂಧನದಿಂದ ಮುಕ್ತನಾಗುತ್ತಾನೆಂದಮೇಲೆ ಅನುಷ್ಠಾನ ಮಾಡುವವರು ಆಗುತ್ತಾರೆಂದು ಹೇಳಬೇಕೆ ?

**ಪುರಾ ಕೌಶಿಕದೇಶೇ ತು ಪಟ್ಟನೇ ಸಗರಾಹ್ವಯೇ ।**
**ವೈಶ್ಯೋಽಭೂತ್ ಧರ್ಮರಾಜಾಖ್ಯಃ ತಸ್ಯ ಪುತ್ರೀ ಶುಚಿವ್ರತಾ ॥ ೨ ॥**

ಹಿಂದೆ ಕೌಶಿಕದೇಶದಲ್ಲಿ ಸಗರವೆಂಬ ಒಂದು ನಗರವಿತ್ತು, ಅಲ್ಲಿ ಧರ್ಮರಾಜನೆಂಬ ವೈಶ್ಯನಿದ್ದನು. ಅವನಿಗೆ ಶುಚಿವ್ರತಾ ಎಂಬ ಮಗಳಿದ್ದಳು.

**ತಾಂ ದದೌ ವಿಹ್ವಲಾಖ್ಯಾಯ ಧರ್ಮರಾಜಸ್ತು ತತ್ಪಿತಾ ।**
**ಕಿಯತಾ ಸಾಽಥ ಕಾಲೇನ ಬ್ರಾಹ್ಮಣಾನಾಂ ಸಮಾಗಮಾತ್ ॥ ೩ ॥**
**ಲಕ್ಷವರ್ತೀವ್ರತಂ ಚಕ್ರೇ ವಿಹ್ವಲಾನುಗತಾ ಸತೀ ।**
**ವೇಶ್ಯಾಗಂತಾ ತು ತದ್ಭರ್ತಾ ಕಂಚಿದ್ಧರ್ಮಂ ನ ಚಾಶ್ರಿತಃ ॥ ೪ ॥**

ಧರ್ಮರಾಜನು ಶುಚಿವ್ರತೆಯನ್ನು ವಿಹ್ವಲನೆಂಬುವನಿಗೆ ಲಗ್ನಮಾಡಿ ಕೊಟ್ಟನು. ಕೆಲವು ಕಾಲದನಂತರ ಶುಚಿವ್ರತೆಯು ಬ್ರಾಹ್ಮಣರ ಸಹವಾಸದಿಂದ ಲಕ್ಷಬತ್ತೀ ವ್ರತವನ್ನು ಆಚರಿಸಿದಳು, ತನ್ನ ಪತಿಗೆ ಅನುಕೂಲಳಾಗಿದ್ದಳು. ವಿಹ್ವಲನು ಯಾವ ಧರ್ಮಕಾರ್ಯವನ್ನೂ ಮಾಡದೇ ವೇಶ್ಯಾಸ್ತ್ರೀಯಲ್ಲಿ ಅನುರಕ್ತನಾದನು.

**ಪುನರ್ಜನ್ಮಾಂತರೇ ಸಾಽಥ ಜಾತಾ ಸತ್ಯವ್ರತಾಹ್ವಯಾ ।**
**ಚಿತ್ರಕರ್ಮೇತಿ ತದ್ಭರ್ತಾ ಸ ಜಾತಃ ಕೌಶಿಕಾಹ್ವಯೇ ॥ ೫ ॥**

ಮುಂದಿನ ಜನ್ಮದಲ್ಲಿ ಶುಚಿವ್ರತೆಯು ಸತ್ಯವ್ರತೆಯೆಂಬ ಹೆಸರಿನಿಂದ ಹುಟ್ಟಿದಳು. ವಿಹ್ವಲನು ಕೌಶಿಕವೆಂಬ ಪಟ್ಟಣದಲ್ಲಿ ಚಿತ್ರಕರ್ಮನೆಂಬ ಹೆಸರಿನಿಂದ ಹುಟ್ಟಿದನು.

**ವೇಶ್ಯಾಪತಿರ್ಬಭೂವಾಸೌ ಪೂರ್ವಕರ್ಮಾನುರೋಧತಃ ।**
**ಋಣಾನುಬಂಧರೂಪೇಣ ಸೈವ ಜಾಯಾ ಬಭೂವ ಹ ॥ ೬ ॥**

ಹಿಂದಿನ ಜನ್ಮದ ಕರ್ಮಾನುಸಾರವಾಗಿ ಚಿತ್ರಕರ್ಮನು ಒಬ್ಬ ವೇಶ್ಯಾ ಸ್ತ್ರೀಯನ್ನು ಲಗ್ನವಾದನು. ಋಣಾನುಬಂಧದಿಂದ ಶುಚಿವ್ರತೆಯೇ ಈಗ ಅವನಿಗೆ ಧರ್ಮಪತ್ನಿಯಾದಳು.

**ಪೂರ್ವಜನ್ಮನ್ಯುಪಚಿತಾತ್ ಲಕ್ಷವರ್ತೀವ್ರತಾತ್ತತಃ ।**
**ಜನ್ಮನ್ಯಸ್ಮಿನ್ ಸದಾ ಖ್ಯಾತಾ ಪಾತಿವ್ರತ್ಯೇ ದೃಢಾಭವತ್ ॥ ೭ ॥**

ಇವಳು ಹಿಂದಿನ ಜನ್ಮದಲ್ಲಿ ಮಾಡಿದ್ದ ಲಕ್ಷಬತ್ತೀವ್ರತದ ಪ್ರಭಾವದಿಂದ ಈಗಲೂ ದೃಢವಾದ ಪತಿವ್ರತೆಯೆಂದು ಪ್ರಸಿದ್ಧಳಾದಳು.

**ಪಾತಿವ್ರತ್ಯೇ ತು ಸಾ ನಾರೀ ಚತುರ್ದಶಸು ಚಾಭವತ್ ।**
**ವಿಖ್ಯಾತಾ ತೇಷು ಲೋಕೇಷು ಭುಜಂಗಮನುವರ್ತಿನೀ ॥ ೮ ॥**

ಪತಿಯನ್ನು ಅನುಸರಿಸಿಕೊಂಡು ಸದಾ ಪತಿಸೇವೆಯಲ್ಲಿಯೇ ನಿರತಳಾಗಿದ್ದರಿಂದ ಇವಳ ಪಾತಿವ್ರತ್ಯವು ಹದಿನಾಲ್ಕು ಲೋಕಗಳಲ್ಲಿ ಪ್ರಸಿದ್ಧಿ ಪಡೆಯಿತು.

**ಪತಿರ್ಭುಕ್ತ್ವಾ ಗೃಹೇ ನಿತ್ಯಂ ವೇಶ್ಯಾಗಾರಂ ವ್ರಜನ್ ಸದಾ ।**
**ನೋಪತಸ್ಥೇ ಋತೋಃ ಕಾಲಂ ನ ಚಕಾರ ಗೃಹೋಚಿತಮ್ ॥ ೯ ॥**

ಚಿತ್ರಕರ್ಮನು ದಿನವೂ ತನ್ನ ಮನೆಯಲ್ಲಿ ಊಟಮಾಡಿ ವೇಶ್ಯೆಯ ಮನೆಗೆ ಹೋಗಿ ಅಲ್ಲಿಯೇ ಇರುತ್ತಿದ್ದನು. ಧರ್ಮಪತ್ನಿಯ ಋತುಕಾಲಕ್ಕೂ ಮತ್ತಿತರ ಗೃಹಕರ್ಮಗಳಿಗೂ ಏನೂ ಸಹಾಯ ಮಾಡುತ್ತಿರಲಿಲ್ಲ.

**ಅಶನಾಭ್ಯಂಗತಾಂಬೂಲಪಾದಸಂವಾಹನಾದಿಭಿಃ ।**
**ಪತಿಮೇವ ಸದಾ ಮನ್ಯೇ ದೇವಂ ಬಂಧುಂ ಗುರುಂ ತಥಾ ॥ ೧೦ ॥**

ಸತ್ಯವ್ರತೆಯು ಪತಿಗೆ ಅಭ್ಯಂಗಸ್ನಾನಮಾಡಿಸುವುದು, ಭೋಜನವ್ಯವಸ್ಥೆ, ತಾಂಬೂಲ, ಪಾದಗಳನ್ನು ಒತ್ತುವುದು ಮುಂತಾದ ಸೇವೆಗಳನ್ನು ಮಾಡುತ್ತಾ ಪತಿಯೇ ನನಗೆ ದೇವರು, ಬಂಧುವು, ಗುರುವು, ಎಂದು ನಂಬಿದ್ದಳು.

**ಮನಸಾ ವೇದನಾಂ ಕ್ವಾಪಿ ನ ಚಕಾರ ದೃಢವ್ರತಾ ।**
**ಆರ್ತಾರ್ತೇ ಮುದಿತೇ ಹೃಷ್ಟಾ ಪ್ರೋಷಿತೇ ಮಲಿನೀ ಕೃಶಾ ॥ ೧೧ ॥**

ಇಂತಹ ದೃಢನಿಶ್ಚಯವುಳ್ಳ ಸತ್ಯವ್ರತೆಯು ಪತಿಯ ಕೆಟ್ಟಕೆಲಸಗಳನ್ನು ನೋಡಿ ಮನಸ್ಸಿನಲ್ಲಿಯೂ ಬೇಸರಗೊಳ್ಳಲಿಲ್ಲ. ತಾನು ಕೃಶಳಾಗಿದ್ದರೂ, ಕೊಳಕು

ವಸ್ತ್ರಗಳನ್ನು ಧರಿಸಿದ್ದರೂ, ಪತಿಯು ಆಪತ್ಕಾಲದಲ್ಲಿ ಇದ್ದಾಗಲೂ, ಸಂತೋಷದಿಂದ ಇದ್ದಾಗಲೂ, ಅವನಿಗೆ ಸಂತೋಷವಾಗುವ ರೀತಿಯಲ್ಲಿಯೇ ಸೇವಿಸುತ್ತಿದ್ದಳು.

**ಮರಿಷ್ಯಮಾಣಂ ತಮನುಗಚ್ಛಾಮೀತ್ಯೇವ ನಿಶ್ಚಿತಾ ।**
**ಕಿಯತ್ಕಾಲೇನ ತದ್ಭರ್ತಾ ವ್ರಣವ್ಯಾಧಿಪ್ರಪೀಡಿತಃ ॥ ೧೨ ॥**

ಪತಿಯು ಮರಣಹೊಂದಿದರೆ ತಾನೂ ಸಹಗಮನ ಮಾಡುವೆನೆಂದು ನಿಶ್ಚಯಿಸಿದ್ದಳು. ಕೆಲವು ಕಾಲದ ನಂತರ ಪತಿಗೆ ಮೈಯೆಲ್ಲ ವ್ರಣಗಳಾದವು.

**ದುರಾತ್ಮಾ ಪಂಗುರಭವತ್ ಕರ್ಮಣಾ ತೇನ ವೈ ದ್ವಿಜಃ ।**
**ಅತ್ಯುತ್ಕಟೈಃ ಪುಣ್ಯಪಾಪೈಃ ಇಹೈವ ಫಲಮಶ್ನುತೇ ॥ ೧೩ ॥**

ಅವನ ಪಾಪಫಲಕ್ಕೆ ಅನುಸಾರವಾಗಿ ಕುಂಟನಾದನು. ಪುಣ್ಯವಾಗಲೀ, ಪಾಪವಾಗಲೀ ತುಂಬ ಉತ್ಕಟವಾಗಿದ್ದರೆ ಈ ಜನ್ಮದಲ್ಲಿ ಫಲವನ್ನು ನೀಡುತ್ತವೆ.

[**ವಿಶೇಷಾಂಶ :** ನಮ್ಮಿಂದ ಆಚರಿಸಲ್ಪಡುವ ಸತ್ಕರ್ಮ, ದುಷ್ಕರ್ಮಗಳು ಜನ್ಮಾಂತರಗಳಲ್ಲಿ ಫಲ ಕೊಡುತ್ತವೆಯೆಂಬುದು ಸಾಮಾನ್ಯ ನಿಯಮ. ಆದರೆ ಈ ಕರ್ಮಗಳು ಅತಿ ತೀವ್ರವಾಗಿದ್ದರೆ, ಈ ಜನ್ಮದಲ್ಲಿಯೇ ಫಲವನ್ನು ಕೊಡುವುದುಂಟು.

**ಪ್ರಾಯೋ ಜನ್ಮಾಂತರೇಷ್ವೇವ ಕರ್ಮಣಾಂ ಫಲಮಶ್ನುತೇ ।**
**ಕಾಲಾಂತರೇಽಪಿ ಕೇಷಾಂಚಿತ್ ಸಹಾಯಾಂತರಲಾಭತಃ ॥**

**ತ್ರಿಭಿರ್ವರ್ಷೈಃ ತ್ರಿಭಿರ್ಮಾಸೈಃ ತ್ರಿಭಿಃ ಪಕ್ಷೈಃ ತ್ರಿಭಿರ್ದಿನೈಃ ।**
**ಅತ್ಯುತ್ಕಟೈಃ ಪುಣ್ಯಪಾಪೈರಿಹೈವ ಫಲಮಶ್ನುತೇ ॥** —ವಿಷ್ಣುರಹಸ್ಯ

ಕರ್ಮಗಳು ಪ್ರಾಯಃ ಜನ್ಮಾಂತರಗಳಲ್ಲಿಯೇ ಫಲ ಕೊಡುತ್ತವೆ. ಕೆಲವು ಕರ್ಮಗಳು ಅನ್ಯ ಸಹಕಾರಿ ಸಂಬಂಧದಿಂದ ಅದೇ ಜನ್ಮದಲ್ಲಿಯೇ ಫಲ ಕೊಡುತ್ತವೆ. ಅತ್ಯಂತ ಪ್ರಬಲವಾದ ಪುಣ್ಯಪಾಪಗಳು ಕೆಲವು ಮೂರು ವರ್ಷಗಳಲ್ಲಿ, ಕೆಲವು ಮೂರು ತಿಂಗಳಲ್ಲಿ, ಕೆಲವು ಮೂರು ಪಕ್ಷಗಳಲ್ಲಿ, ಕೆಲವು ಮೂರು ದಿನಗಳಲ್ಲಿಯೇ ತಮ್ಮ ಫಲಗಳನ್ನು ನೀಡುತ್ತವೆ.

ಅಂತಹ ತೀವ್ರವಾದ ಕರ್ಮಗಳು ಯಾವುವೆಂದರೆ :

**ಆಗಮಾಧ್ಯಯನಂ ಜಾಪ್ಯಂ ವೇದಶಾಸ್ತ್ರಾರ್ಥಚಿಂತನಮ್ ।**
**ವಿಷ್ಣೋಃ ಸಂಕೀರ್ತನಂ ಭಕ್ತ್ಯಾ ತಪೋ ಬ್ರಾಹ್ಮಣತೋಷಣಮ್ ॥**

**ತೀರ್ಥಸೇವಾ ತೀರ್ಥಯಾತ್ರಾಽಹಿಂಸಾ ದಾನಂ ಪ್ರಪಾದಿಕಮ್ ।**
**ಮಾತಾಪಿತೃಗುರೂಣಾಂ ಚ ಪ್ರೀಣನಂ ಪಾಪಹೃದ್ಭವೇತ್ ॥ –ವಿಷ್ಣುರಹಸ್ಯ**

ವೇದಾಧ್ಯಯನ, ಜಪ, ಸಚ್ಛಾಸ್ತ್ರಗಳ ಮನನ, ಶ್ರೀಹರಿಯನ್ನು ಭಕ್ತಿಯಿಂದ ಕೀರ್ತನೆಮಾಡುವುದು, ತಪಸ್ಸು, ಬ್ರಾಹ್ಮಣರನ್ನು ಸಂತೋಷಗೊಳಿಸುವುದು, ತೀರ್ಥಸೇವೆ, ತೀರ್ಥಯಾತ್ರೆ, ಅಹಿಂಸೆ, ಸತ್ಪಾತ್ರರಲ್ಲಿ ದಾನ, ಯಾತ್ರಿಕರಿಗೆ ಜಲಪಾನದ ಏರ್ಪಾಟು, ಮಾತಾಪಿತೃಗುರುಗಳನ್ನು ಸಂತೋಷಗೊಳಿಸುವುದು, ಇವು ಪಾಪಗಳನ್ನು ಪರಿಹರಿಸುವುದಲ್ಲದೇ ಈ ಜನ್ಮದಲ್ಲಿಯೇ ಸತ್ಫಲವನ್ನೂ ನೀಡುತ್ತವೆ.

**ಅಧಿಕಾರಾದಿಸಂಪತ್ತಾವಾಗಮಾನಾಮುಪೇಕ್ಷಣಮ್ ।**
**ಚಿಂತಾ ದುರ್ವಿಷಯಾಣಾಂ ಚ ವಿಷ್ಣುವೈಷ್ಣವನಿಂದನಮ್ ॥**

**ವಿಪ್ರಾವಜ್ಞಾ ಸತಾಂ ದ್ವೇಷೋ ದಯಾದಾನಾದಿ ವರ್ಜನಮ್ ।**
**ಮಾತಾಪಿತೃಗುರೂಣಾಂ ಚ ಪ್ರೀತಿಹೃತ್ಪುಣ್ಯಹೃದ್ಭವೇತ್ ॥ –ವಿಷ್ಣುರಹಸ್ಯ**

ವೇದಾಧ್ಯಯನಕ್ಕೆ ಅಧಿಕಾರವಿದ್ದರೂ ಉಪೇಕ್ಷಿಸುವುದು, ನಿಷಿದ್ಧವಿಷಯಗಳ ಬಗ್ಗೆ ಚಿಂತೆ, ವಿಷ್ಣುವೈಷ್ಣವನಿಂದನೆ, ಬ್ರಾಹ್ಮಣರನ್ನು ಅವಮಾನಗೊಳಿಸುವುದು, ಸಜ್ಜನದ್ವೇಷ, ದಯಾರಾಹಿತ್ಯ, ದಾನಮಾಡದಿರುವುದು, ಮಾತಾಪಿತೃಗಳಿಗೆ ಅಪ್ರೀತಿಯನ್ನುಂಟುಮಾಡುವುದು—ಇವುಗಳು ಪೂರ್ವಪುಣ್ಯವನ್ನು ನಾಶಮಾಡುವುದಲ್ಲದೇ ಈ ಜನ್ಮದಲ್ಲಿಯೇ ದುಃಖಾದಿಗಳನ್ನು ನೀಡುತ್ತವೆ.

**ದುರತ್ಯಯಾ ಕರ್ಮಗತಿಃ ಮನುಷ್ಯಾಣಾಂ ನ ಸಂಶಯಃ ।**
**ಪಂಗುರ್ಭೂತ್ವಾ ಗೃಹೇ ತಿಷ್ಠನ್ ವೇಶ್ಯಾಚಿಂತಾಸಮಾಕುಲಃ ॥ ೧೪ ॥**

ಮನುಷ್ಯರ ಕರ್ಮಗತಿಯು ಹೇಗೆ ಇರುತ್ತದೆ ಎಂಬುದನ್ನು ತಿಳಿಯಲು ಅಸಾಧ್ಯವೇ, ಸಂಶಯವಿಲ್ಲ. ಚಿತ್ರಕರ್ಮನು ಕುಂಟನಾಗಿ ಮನೆಯಲ್ಲಿಯೇ ಇದ್ದರೂ ಸದಾ ವೇಶ್ಯೆಯ ಬಗ್ಗೆಯೇ ಚಿಂತಿಸುತ್ತಿದ್ದ.

**ನ ಶಕ್ತಸ್ತದ್ಗೃಹೇ ಗಂತುಂ ಪಂಗುತ್ವಾತ್ಸ ಕುಲಾಧಮಃ ।**
**ಸ ಏವ ವ್ಯಾಧಿರಭವತ್ ವಿರಹಃ ಕಾಮಿನೋಽನ್ವಹಮ್ ॥ ೧೫ ॥**

ಈ ಬ್ರಾಹ್ಮಣಾಧಮನು ವೇಶ್ಯೆಯ ಮನೆಗೆ ಹೋಗಲು ಅಸಮರ್ಥನಾಗಿ ಅವಳ ವಿರಹವೇ ಆ ಕಾಮುಕನಿಗೆ ವ್ಯಾಧಿಯಾಯಿತು.

**ನ ಖಾದತಿ ನ ಚಾಶ್ನಾತಿ ನ ಶೇತೇ ನ ಪಿಬತ್ಯಪಿ ।**
**ಕಾಮಾನಲಸಮುದ್ಭೂತಜ್ವಾಲಾಮಾಲಾಕುಲೋ ದ್ವಿಜಃ ॥ ೧೬ ॥**

ಕಾಮವೆಂಬ ಜ್ವಾಲೆಯಿಂದ ಪರಿತಪ್ತನಾಗಿ ಊಟ, ಶಯನ, ಕುಡಿಯುವುದು ಇವುಗಳನ್ನೆಲ್ಲ ತ್ಯಜಿಸಿದನು.

**ತಂ ಪ್ರಾಹ ರಮಣೀ ಪುಣ್ಯಾ ಪ್ರಾಣನಾಥ ಕಿಮಿಚ್ಛಸಿ ।**
**ಯದ್ಯದಿಷ್ಟಂ ಕರಿಷ್ಯಾಮಿ ನ ಶಂಕಾ ಮಯಿ ಶೋಭನ ॥ ೧೭ ॥**

ಪುಣ್ಯವತಿಯಾದ ಅವನ ಪತ್ನಿಯು ಹೇಳಿದಳು : "ಪ್ರಾಣನಾಥನೇ, ನಿಮಗೆ ಇಷ್ಟವಾದುದನ್ನು ನಾನು ನೆರವೇರಿಸುತ್ತೇನೆ, ಸಂಶಯ ಬೇಡ.

**ತ್ವದ್ದಾಸೀ ಚೈವ ತ್ವದ್ದೇವಾ ತ್ವದ್ಭಕ್ತಾ ತ್ವತ್ಪರಾಯಣಾ ।**
**ಯದ್ವೈಷಿಕಂ ಸುಖಂ ಲೋಕೇ ತತ್ಪತ್ಯುರಿತಿ ಮೇ ಮತಿಃ ॥ ೧೮ ॥**

ನಾನು ನಿಮಗೆ ಸೇವಕಿ; ನೀವೇ ನನಗೆ ದೇವರು; ನಾನು ನಿಮ್ಮ ಭಕ್ತಳು; ಯಾವಾಗಲೂ ನಿಮ್ಮನ್ನೇ ಸ್ಮರಿಸುವವಳು; ಇಹಲೋಕದಲ್ಲಿ ಸ್ತ್ರೀಯರಿಗೆ ಬೇಕಾಗುವ ವಿಷಯಸುಖಗಳು ಪತಿಯೇ ಎಂದು ನನ್ನ ಅಭಿಪ್ರಾಯ.

**ಮೋಕ್ಷಾದಪ್ಯಧಿಕಂ ಮನ್ಯೇ ಸೇವಾಯಾಶ್ಚ ಸುಖಂ ತವ ।**
**ಕಸ್ಮಾತ್ತಪಸಿ ಪ್ರಾಣೇಶ ಕೇನ ತ್ವಂ ನಿರ್ವ್ಯಥೋ ವದ ॥ ೧೯ ॥**

ನಿಮ್ಮ ಸೇವಾಸುಖವು ಮೋಕ್ಷಕ್ಕಿಂತ ಅಧಿಕವೆಂದು ನಾನು ತಿಳಿದಿದ್ದೇನೆ. ನೀವು ಏತಕ್ಕಾಗಿ ದುಃಖಿಸುತ್ತಿರುವಿರಿ? ಏನು ಮಾಡಿದರೆ ನಿಮ್ಮ ದುಃಖವು ಪರಿಹಾರವಾಗುತ್ತದೆ ?

**ಇತ್ಯುಕ್ತಃ ಸ ದ್ವಿಜಃ ಪ್ರಾಹ ತಾಂ ಜಾಯಾಮನುವಾದಿನೀಮ್ ।**
**ವೇಶ್ಯಾಯಾಮೇವ ಮೇ ಚಿತ್ತಂ ನಾನ್ಯವಸ್ತುನಿ ಮಂಗಲೇ ॥ ೨೦ ॥**

ಹೀಗೆ ಹೇಳಿದಮೇಲೆ ತನ್ನ ಪತ್ನಿಗೆ ಆ ಬ್ರಾಹ್ಮಣನು ಹೀಗೆ ಹೇಳಿದನು— ಮಂಗಳಾಂಗಿಯೇ, ನನ್ನ ಮನಸ್ಸು ಆ ವೇಶ್ಯೆಯಲ್ಲದೆ ಬೇರೆಲ್ಲಿಯೂ ಇಲ್ಲ.

**ತಯಾ ಭುಕ್ತೇ ತು ಭುಂಜಾಮಿ ಪೀತೇ ಪಾನಂ ಪಿಬಾಮಿ ಚ ।**
**ದೇಹಯಾತ್ರಾಣಿ ಸರ್ವಾಣಿ ತಯಾ ಸಾಕಂ ನ ಚಾನ್ಯಥಾ ॥ ೨೧ ॥**

ಅವಳ ಜೊತೆಯಲ್ಲಿಯೇ ಊಟಮಾಡುತ್ತೇನೆ, ಅವಳೊಡನೆಯೇ ಕುಡಿಯುತ್ತೇನೆ, ನನ್ನ ಶರೀರದ ಸಮಸ್ತ ವ್ಯಾಪಾರವೂ ಅವಳ ಸಂಗಡವೇ ನಡೆಯಬೇಕು, ಬೇರೆಯಲ್ಲ.

*

**ವ್ಯಾಧಿನಾನೇನ ದುರ್ಬುದ್ಧಿಃ ತದ್ವಾರ್ತಾಂ ನೈವ ಶುಶ್ರುವೇ ।**
**ತಯೈವ ಚಿಂತಯಾ ಮೇsದ್ಯ ಭೋಜನಾದಿ ನ ರೋಚತೇ ॥ ೨೨ ॥**

ರೋಗಗ್ರಸ್ತನಾದ ಈ ದುರ್ಬುದ್ಧಿಯು ಪತ್ನಿಯ ಮಾತನ್ನು ಕೇಳಲೇ ಇಲ್ಲ. —ಆ ವೇಶ್ಯೆಯ ಚಿಂತೆಯಿಂದಲೇ ನನಗೆ ಭೋಜನಾದಿಗಳಲ್ಲಿ ರುಚಿ ಇಲ್ಲ.

**ವಿರಹವ್ಯಾಧಿರತ್ಯುಗ್ರಃ ಪ್ರಾಣಾನ್ ಹರತಿ ನಿಶ್ಚಯಮ್ ।**
**ತ್ವಂ ಸ್ಕಂಧೇ ಚೈವ ಮಾಮೂಢ್ವಾ ಯಾಸಿ ಚೇನ್ನಾಯಿಕಾಲಯಮ್ ॥**
**ತದಾ ಸ್ವಪೇ ಸುಖಂ ಭದ್ರೇ ವ್ಯಾಧಿರ್ಮೇ ತು ಗಮಿಷ್ಯತಿ ।**
**ಇತಿ ತದ್ವಚನಂ ಶ್ರುತ್ವಾ ಸಾ ನಾರೀ ತು ಪತಿವ್ರತಾ ॥ ೨೪ ॥**
**ಮನಸ್ಯಾತೀವ ಸಂತುಷ್ಟಾ ಓಮಿತ್ಯೂಚೇ ದೃಢವ್ರತಾ ।**

ಅವಳ ವಿರಹವು ನನ್ನ ಪ್ರಾಣಗಳನ್ನೇ ತೆಗೆಯುತ್ತಿದೆ. ನೀನು ನನ್ನನ್ನು ಹೆಗಲಮೇಲೆ ಕೂಡಿಸಿಕೊಂಡು ಆ ವೇಶ್ಯೆಯ ಮನೆಗೆ ಕರೆದುಕೊಂಡುಹೋದರೆ ಆಗ ನಾನು ಅಲ್ಲಿ ಸುಖದಿಂದ ಮಲಗುತ್ತೇನೆ ; ನನ್ನ ವ್ಯಾಧಿಗಳೆಲ್ಲ ಗುಣವಾಗುತ್ತವೆ— ಎಂಬ ಪತಿಯ ಮಾತನ್ನು ಕೇಳಿದ ಆ ಸಾಧ್ವಿಯು ಮನಸ್ಸಿನಲ್ಲಿ ಸಂತೋಷಗೊಂಡು "ಆಗಲಿ" ಎಂದಳು.

**ಅರ್ಧರಾತ್ರಸ್ತದಾ ಕಾಲಃ ಕೃಷ್ಣಪಕ್ಷಾಷ್ಟಮೀದಿನಮ್ ॥ ೨೫ ॥**
**ಮಾಸೇ ಭಾದ್ರಪದೇ ಚೈವ ತಸ್ಮಿನ್ ವ್ಯೋಮಘನಾವಿಲಮ್ ।**
**ತಸ್ಮಿನ್ ಭಯಂಕರೇ ಕಾಲೇ ಸಾ ನಾರೀ ತು ಧೃತವ್ರತಾ ॥ ೨೬ ॥**
**ಸ್ಕಂಧಮಾರೋಪ್ಯ ಭರ್ತಾರಂ ಯಯೌ ಗ್ರಾಮಾಂತರಸ್ಥಿತಮ್ ।**
**ವೇಶ್ಯಾಗಾರಂ ಮಹಾಪುಣ್ಯಾ ಪ್ರೀಣಯಂತೀ ಪ್ರಿಯೋಕ್ತಿಭಿಃ ॥ ೨೭ ॥**

ಭಾದ್ರಪದಮಾಸದ ಕೃಷ್ಣಪಕ್ಷದ ಅಷ್ಟಮಿಯ ಅರ್ಧರಾತ್ರಿ, ಆಕಾಶದಲ್ಲಿ ಸುತ್ತಲೂ ಮೇಘವು ತುಂಬಿತ್ತು, ಅಂತಹ ಭಯಂಕರವಾದ ಸಮಯದಲ್ಲಿ ದೃಢ ನಿಶ್ಚಯಳಾದ ಆ ಸಾಧ್ವಿಯು ತನ್ನ ಪತಿಯನ್ನು ಹೆಗಲಮೇಲೆ ಕೂಡಿಸಿಕೊಂಡು, ಹಿತನುಡಿಗಳಿಂದ ಅವನನ್ನು ಸಂತೋಷಪಡಿಸುತ್ತಾ, ಪಕ್ಕದ ಊರಿನಲ್ಲಿರುವ ವೇಶ್ಯೆಯ ಮನೆಗೆ ಹೊರಟಳು.

**ರಾಜಕೀಯಾಶ್ಚ ಪೂರ್ವೇದ್ಯುಃ ಚೋರಾಂಶ್ಚ ಪಶುಹಾರಿಣಃ ।**
**ಅನ್ವಧಾವನ್ ತದಾ ಚೋರಾ ಮಾಂಡವ್ಯಸ್ಯ ಮಹಾತ್ಮನಃ ॥ ೨೮ ॥**
**ಅನುಪೃಷ್ಠಂ ತು ನಿಕ್ಷಿಪ್ಯ ದುದ್ರುವುಃ ಭಯತೋ ವನಮ್ ।**
**ಸಮಾಧಿಸ್ಥಂ ಚ ಮಾಂಡವ್ಯಂ ರಾಜಭೃತ್ಯಾ ಮಹಾವ್ರತಮ್ ॥ ೨೯ ॥**

ಹಿಂದಿನ ದಿನ ಪಶುಗಳನ್ನು ಕದಿದ್ದ ಕಳ್ಳರನ್ನು ರಾಜಸೇವಕರು ಅಟ್ಟಿಸಿಕೊಂಡು ಹಿಡಿಯಲು ಬಂದಾಗ ಕಳ್ಳರು ಭಯದಿಂದ ತಾವು ಕದ್ದಿದ್ದ ವಸ್ತುಗಳನ್ನೆಲ್ಲ ಅಲ್ಲಿಯೇ ಸಮಾಧಿಸ್ಥರಾಗಿದ್ದ ಮಹಾಜ್ಞಾನಿಗಳಾದ ಮಾಂಡವ್ಯ ಋಷಿಗಳ ಸಮೀಪದಲ್ಲಿಟ್ಟು ಓಡಿಹೋದರು.

**ಬಹುಧಾ ತಂ ವಿನಿರ್ಭರ್ತ್ಸ್ಯ ಚಕ್ರುಸ್ತಂ ಶೂಲರೋಪಿತಮ್ ।**
**ಅಪಶ್ಯಂತೀ ಚ ಸಾ ಮಾರ್ಗೇ ಮಾಂಡವ್ಯಂ ಶೂಲರೋಪಿತಮ್ ॥ ೩೦ ॥**

**ಪ್ರಸ್ಖಲಂತೀ ಪಪಾತೇಹ ಮಾಂಡವ್ಯೋ ವೇದನಾಕುಲಃ ।**
**ಮಮ ದುಃಖಕರಃ ಕೋ ವಾ ಶೂಲಾದ್ವ್ಯಥಯತೋಽನಿಶಮ್ ॥ ೩೧ ॥**

ರಾಜಭಟರು ಮಾಂಡವ್ಯನೇ ಕಳ್ಳನೆಂದು ತಿಳಿದು ಆತನನ್ನು ಬಹಳವಾಗಿ ನಿಂದಿಸಿ ಶೂಲದಮೇಲೆ ಕೂಡಿಸಿದ್ದರು. ಇದನ್ನು ನೋಡದೇ ಸತ್ಯವ್ರತೆಯು ಆ ಮಾರ್ಗದಲ್ಲಿ ಬಂದು ಮಾಂಡವ್ಯರಮೇಲೆ ಎಡವಿ ಬಿದ್ದಳು. ಇದರಿಂದ ಅವರಿಗೆ ಇನ್ನೂ ಹಿಂಸೆಯಾಯಿತು. ಮೊದಲೇ ದುಃಖಿತನಾಗಿದ್ದ ನನಗೆ ಇನ್ನೂ ಹೆಚ್ಚು ಹಿಂಸೆಯನ್ನು ಕೊಟ್ಟವರು ಯಾರೆಂದು ಕೇಳಿದರು.

**ಇತ್ಯುಕ್ತೇ ವಿಹ್ವಲಾ ಪ್ರಾಹ ಮಾಂಡವ್ಯಂ ಶೂಲರೋಪಿತಮ್ ।**
**ಋಷೇ ಮಾಂ ಸುವ್ರತಾಂ ವಿದ್ಧಿ ಪತ್ಯುರಿಷ್ಟಾಭಿಕಾಂಕ್ಷಿಣೀ ॥ ೩೨ ॥**

ಭಯಗ್ರಸ್ತಳಾದ ಸತ್ಯವ್ರತೆಯು ಶೂಲದಮೇಲಿದ್ದ ಮಾಂಡವ್ಯರಿಗೆ ಹೇಳಿದಳು—"ಋಷಿಗಳೇ, ನಾನು ನನ್ನ ಪತ್ನಿಗೆ ಸುಖವನ್ನು ತಂದುಕೊಡಲು ಉದ್ಯುಕ್ತಳಾದ ವ್ರತನಿಷ್ಠಳು.

**ತವ ದುಃಖಕರಾಜ್ಞಾನಾತ್ ಪುತ್ರೀಂ ಮಾಂ ಕ್ಷಮ ಸುವ್ರತ ।**
**ರಾತ್ರಿಸ್ತು ತಮಸಾ ವ್ಯಾಪ್ತಾ ವೃಷ್ಟಿಶ್ಚಾತೀವ ದುಃಸಹಾ ॥ ೩೩ ॥**

ಮಹಾತ್ಮರೇ, ಈ ರಾತ್ರಿಯಲ್ಲಿ ಕತ್ತಲು ಕವಿದಿದೆ, ಮಳೆ ಬೀಳುತ್ತಿದೆ, ಅಜ್ಞಾನದಿಂದ ನಿಮ್ಮನ್ನು ಎಡವಿ ನಿಮ್ಮ ದುಃಖಕ್ಕೆ ಕಾರಣಳಾದೆ; ನನ್ನನ್ನು ನಿಮ್ಮ ಮಗಳೆಂದು ತಿಳಿದು ಕ್ಷಮಿಸಿರಿ.

**ನ ಜಾನೇ ತೇನ ಮಾರ್ಗಂ ತು ಗರ್ತಾಂ ಧೂಸರಿತಸ್ತಥಾ ।**
**ಪತಿಂ ದೇವಂ ಮನ್ಯಮಾನಾ ಸದಾ ಭರ್ತುಃ ಹಿತಂಕರೀ ॥ ೩೪ ॥**

ದಾರಿಯಲ್ಲಿ, ಗಾಳಿದೆಸೆಯಿಂದ ಧೂಳು ಎದ್ದು, ಹಳ್ಳತಿಟ್ಟುಗಳು ತಿಳಿಯಲಿಲ್ಲ. ನಾನು ಪತಿಯನ್ನೇ ದೇವರೆಂದು ತಿಳಿದು ಸದಾ ಅವರ ಹಿತವನ್ನೇ ಮಾಡುವವಳು.

**ಸ್ಕಂಧೇನೋಢ್ವಾ ಪತಿಂ ವೇಶ್ಯಾಗಾರಂ ಗಂತುಂ ಇಹೋದ್ಯತಾ ।**
**ದೈವಹೀನಾ ಪ್ರಸ್ಖಲಂತೀ ತವ ದುಃಖಕರಾsಸ್ಮ್ಯಹವ್ ॥ ೩೫ ॥**

ಹೆಗಲಮೇಲೆ ನನ್ನ ಪತಿಯನ್ನು ಕೂಡಿಸಿಕೊಂಡು ವೇಶ್ಯೆಯ ಮನೆಗೆ ಹೋಗುತ್ತಿದ್ದೆ; ದುರದೃಷ್ಟದಿಂದ ನಿಮ್ಮನ್ನು ಎಡವಿ ತುಂಬ ದುಃಖಕೊಟ್ಟೆ.

**ಕೋsಸಿ ಕಲ್ಯಾಣ ತ್ವಂ ವಿಪ್ರ ಕಸ್ಮಾತ್ತೇ ಚೇದೃಶೀ ದಶಾ ।**
**ಇತ್ಯುಕ್ತಃ ಸುವ್ರತಾಂ ಪ್ರಾಹ ಮಾಂಡವ್ಯೋsಸ್ಮೀತಿ ದುಃಖಿತಃ ॥ ೩೬ ॥**

ಬ್ರಾಹ್ಮಣೋತ್ತಮರೇ, ನೀವು ಯಾರು ? ಏತಕ್ಕಾಗಿ ಇಂತಹ ದುರ್ದಶೆ ಬಂದಿದೆ ? ಎಂದು ಸತ್ಯವ್ರತೆಯು ನುಡಿಯಲು, ದುಃಖಿತರಾದ ಋಷಿಗಳು "ನಾನು ಮಾಂಡವ್ಯ"ನೆಂದು ಹೇಳಿದರು.

**ಶೂಲೇ ತ್ವಾರೋಪಿತೋ ವ್ಯರ್ಥಂ ರಾಜಭೃತ್ಯೈಃ ಮದೋತ್ಕಟೈಃ ।**
**ಶ್ವಸ್ತು ಸೂರ್ಯೋದಯೇ ಜಾತೇ ಭರ್ತಾ ತೇ ತು ಮರಿಷ್ಯತಿ ॥ ೩೭ ॥**

ನಾನು ನಿರಪರಾಧಿಯಾಗಿದ್ದರೂ ಮದೋನ್ಮತ್ತರಾದ ರಾಜಭಟರು ನನ್ನನ್ನು ಶೂಲದಲ್ಲಿಟ್ಟಿರುತ್ತಾರೆ. ಅಂತಹ ನನಗೆ ನೀನು ಎಡವಿ ಇನ್ನೂ ಹೆಚ್ಚು ಹಿಂಸೆಯನ್ನು ಕೊಟ್ಟಿರುತ್ತೀಯೆ. ನಾಳೆ ಸೂರ್ಯೋದಯವಾಗಲು ನಿನ್ನ ಪತಿಯು ಮರಣ ಹೊಂದುವನು.

**ಮಮ ದುಃಖಕರಾ ಯಸ್ಮಾತ್ ಇತಿ ತಾಂ ಚ ಶಶಾಪ ಸಃ ।**
**ಶಾಪಂ ಗೃಹೀತ್ವಾ ಸಾ ನಾರೀ ದುಃಖಿತಾsತೀವ ವಿಹ್ವಲಾ ॥ ೩೮ ॥**

ನನ್ನ ದುಃಖಕ್ಕೆ ಕಾರಣಳಾದ ಪ್ರಯುಕ್ತ ನಿನಗೆ ಶಾಪಕೊಟ್ಟಿರುತ್ತೇನೆಂದು ಮಾಂಡವ್ಯರು ನುಡಿಯಲು ಆ ಸಾಧ್ವಿಯು ದುಃಖದಿಂದ ಶಾಪವನ್ನು ಸ್ವೀಕರಿಸಿದಳು.

**ಉದಯಂ ಬಂಧಯಾಂಚಕ್ರೇ ಪಾತಿವ್ರತ್ಯಪ್ರಭಾವತಃ ।**
**ಲಕ್ಷವರ್ತೀವ್ರತೇನಾಸ್ಯಾಃ ಪೂರ್ವಜನ್ಮಕೃತೇನ ಚ ॥ ೩೯ ॥**
**ವೈಧವ್ಯಂ ನ ಭವೇದಿತ್ಥಂ ಚಿಂತಿತೋ ಹರಿರೀಶ್ವರಃ ।**
**ಉದಯಪ್ರತಿಬಂಧೇ ತು ಸಹಾಯಮಕರೋದ್ವಿಭುಃ ॥ ೪೦ ॥**

ತನ್ನ ಪಾತಿವ್ರತ್ಯ ಮಹಿಮೆಯಿಂದ ಸೂರ್ಯೋದಯಕ್ಕೆ ಪ್ರತಿಬಂಧವನ್ನು ಹಾಕಿದಳು. ಹಿಂದಿನ ಜನ್ಮದ ಅವಳ ಲಕ್ಷವರ್ತೀವ್ರತದ ಮಹಿಮೆಯಿಂದಲೂ, ಪಾತಿವ್ರತ್ಯದಿಂದಲೂ ಸೂರ್ಯೋದಯಕ್ಕೆ ಅಡ್ಡಿಮಾಡಲು ಶ್ರೀಹರಿಯು ಸಹಾಯ

ಮಾಡಿದನು. ಅವಳಿಗೆ ವೈಧವ್ಯವು ಪ್ರಾಪ್ತಿಯಾಗಬಾರದೆಂದೇ ಶ್ರೀಹರಿಯ ಸಂಕಲ್ಪ.

**ಲಕ್ಷವರ್ತೀವ್ರತೋದ್ಭೂತಪಾತಿವ್ರತ್ಯಪ್ರಭಾವತಃ ।**
**ನೋದೇತುಮಭವದ್ಭಾನುಃ ಶಕ್ತಃ ಕಾಲಾತ್ಮಕೋ ರವಿಃ ॥ ೪೧ ॥**

ಅವಳ ಲಕ್ಷಬತ್ತೀವ್ರತದ ಪ್ರಭಾವದಿಂದಲೂ, ಪಾತಿವ್ರತ್ಯದ ಪ್ರಭಾವ ದಿಂದಲೂ, ಕಾಲಸೂಚಕನಾದ ಸೂರ್ಯನು ಉದಯಿಸಲು ಶಕ್ತನಾಗಲಿಲ್ಲ.

**ಭರ್ತುಃ ಪ್ರಾಣಹರೋ ಭಾನುಃ ಕ್ವಾಪಿ ನೋದೇತು ಮೇಽಪ್ರಿಯಃ ।**
**ಇತ್ಯುಕ್ತಸ್ತು ತಯಾ ಸಾಧ್ವ್ಯಾ ನೈವೋದೇತಿ ಚ ಭಾಸ್ಕರಃ ॥ ೪೨ ॥**

ನನ್ನ ಪತಿಯ ಪ್ರಾಣವನ್ನು ತೆಗೆದುಕೊಳ್ಳುವಂತಹ ಹಾಗೂ ನನಗೆ ಅಪ್ರಿಯ ವಾದ ಸ್ಥಿತಿಯನ್ನು ಕಲ್ಪಿಸುವಂತಹ ಸೂರ್ಯನು ಉದಯಿಸಬಾರದೆಂದು ಅವಳು ನುಡಿಯಲು ಸೂರ್ಯನು ಉದಯಿಸಲು ಅಶಕ್ತನಾದನು.

**ಆವರ್ಷಂ ತು ಕ್ರಿಯಾಃ ಸರ್ವಾ ಲುಪ್ತಾಶ್ಚಾನುದಯೋ ರವಿಃ ।**
**ತತಶ್ಚೇಂದ್ರಾದಯೋ ದೇವಾ ಬ್ರಹ್ಮಾಂತಿಕಮುಪಾಯಯುಃ ॥ ೪೩ ॥**

ಒಂದು ವರ್ಷದ ಪರ್ಯಂತ ನಿತ್ಯಕರ್ಮಗಳು ಸ್ಥಗಿತಕೊಳ್ಳಲು, ಸೂರ್ಯನು ಇನ್ನೂ ಉದಯಿಸದೇ ಇದ್ದ ಕಾರಣದಿಂದ ಇಂದ್ರಾದಿ ದೇವತೆಗಳು ಚತುರ್ಮುಖ ಬ್ರಹ್ಮನ ಬಳಿ ಹೋದರು.

**ನಾಸ್ಮಾನುಪೈತಿ ಭಾಗಸ್ತು ದೇವಪುಷ್ಟಿಕರಸ್ತತಃ ।**
**ಪತಿವ್ರತಾ ಮಹಾಪುಣ್ಯಾ ತ್ರಿಷು ಲೋಕೇಷು ವಿಶ್ರುತಾ ॥ ೪೪ ॥**

**ಶೂಲಾರೋಪಿತಮಾಂಡವ್ಯಶಾಪಗ್ರಸ್ತಾ ಮಹಾಮತಿಃ ।**
**ಭರ್ತುರಿಷ್ಟಕರಾ ಪುಣ್ಯಾ ವೇಶ್ಯಾಗಾರಮುಪೇಯುಷೀ ॥ ೪೫ ॥**

ಬ್ರಹ್ಮನನ್ನು ಕುರಿತು ಹೇಳಿದರು "ಸತ್ಕರ್ಮಾನುಷ್ಠಾನ ನಿಂತುಹೋಗಿರು ವುದರಿಂದ ದೇವತೆಗಳಿಗೆ ಪುಷ್ಟಿಕೊಡುವ ಹವಿರ್ಭಾಗಗಳು ನಿಂತುಹೋಗಿವೆ. ಮೂರು ಲೋಕಗಳಲ್ಲಿಯೂ ಪ್ರಸಿದ್ಧಳಾದ ಆ ಸಾಧ್ವಿಯು ತನ್ನ ಪತಿಯನ್ನು ವೇಶ್ಯೆಯ ಮನೆಗೆ ಹೊತ್ತುಕೊಂಡುಹೋಗುವಾಗ ಶೂಲದಮೇಲಿದ್ದ ಮಾಂಡವ್ಯರು ಅವಳಿಗೆ ಶಾಪಕೊಟ್ಟರು.

**ಉದಯಂ ಬಂಧಯಾಂಚಕ್ರೇ ಸೂರ್ಯಸ್ಯಾಸ್ಯ ಮಹಾತ್ಮನಃ ।**
**ಅಜ್ಞಾತಕಾಲಾಸ್ತೇನೈವ ಜನಾಃ ಶೀತಾರ್ದಿತಾ ಭುವಿ ॥ ೪೬ ॥**

**ನ ಯಜ್ಞಂ ಕಾರಯಾಮಾಸುಃ ನಾಪಿ ನಿತ್ಯಕ್ರಿಯಾ ಅಪಿ ।**
**ಅಸ್ಮಾಕಂ ವಿತಥೀಚಕ್ರೇ ಪ್ರಯತ್ನಾನ್ ಭೂರಿಶೋ ಬಲಾಃ ॥ ೪೭ ॥**

ಇದಕ್ಕಾಗಿ ಆ ಸ್ತ್ರೀಯು ಸೂರ್ಯೋದಯವಾಗಬಾರದೆಂದು ಪ್ರತಿಬಂಧಿಸಿದ್ದಾಳೆ. ಇದರಿಂದ ಭೂಲೋಕದ ಜನರು ಕಾಲಜ್ಞಾನರಹಿತರಾಗಿ, ಛಳಿಯಿಂದ ಪೀಡಿತರಾಗಿದ್ದಾರೆ. ಯಜ್ಞಗಳೂ, ನಿತ್ಯಕರ್ಮಗಳೂ ನಡೆಯುತ್ತಿಲ್ಲ. ಸೂರ್ಯೋದಯಕ್ಕಾಗಿ ನಾವು ಮಾಡಿದ ಪ್ರಯತ್ನವೆಲ್ಲ ವ್ಯರ್ಥವಾಗಿವೆ.

**ವಜ್ರಾದ್ಯಾಯುಧಜಾತಾನಿ ತತ್ರ ಮುಕ್ತಾನಿ ಭೂರಿಶಃ ।**
**ಭಗ್ನಾನ್ಯೇವಾಭವಂಸ್ತೂರ್ಣಂ ಪಾತಿವ್ರತ್ಯಪ್ರಭಾವತಃ ॥ ೪೮ ॥**
**ಸ್ವಯಂ ರಕ್ಷತಿ ತಾಂ ವಿಷ್ಣುಃ ಧನುರ್ಬಾಣಧರೋ ವಿಭುಃ ।**
**ತತೋ ಭಗ್ನಾ ವಯಂ ಸರ್ವೇ ತವಾಂತಿಕಮುಪಾಗತಾಃ ॥ ೪೯ ॥**

ನಾವೆಲ್ಲ ಅಲ್ಲಿ ಪ್ರಯೋಗಿಸಿದ ವಜ್ರಾಯುಧವೇ ಮೊದಲಾದ ಆಯುಧಗಳು ಅವಳ ಪಾತಿವ್ರತ್ಯಪ್ರಭಾವದಿಂದ ಭಗ್ನವಾದವು. ಸಾಕ್ಷಾತ್ ಶ್ರೀವಿಷ್ಣುವೇ ಅವಳ ರಕ್ಷಣಾರ್ಥವಾಗಿ ಧನುರ್ಬಾಣಧಾರಿಯಾಗಿ ಅಲ್ಲಿರುವುದರಿಂದ ನಮ್ಮ ಪ್ರಯತ್ನಗಳೆಲ್ಲ ವ್ಯರ್ಥವಾಗಿವೆ. ಆದುದರಿಂದ ನಿಮ್ಮ ಬಳಿಗೆ ಬಂದಿರುತ್ತೇವೆ.

**ಯಜ್ಞಭಾಗವಿಹೀನಾನ್ನಃ ಕ್ಷೀಣಶಕ್ತೀನ್ ಸುರಾನಿಮಾನ್ ।**
**ಶೀತಾರ್ದಿತಾನ್ ಜನಾನ್ ಸರ್ವಾನ್ ಚೋರಬಾಧಾನಿಪೀಡಿತಾನ್ ॥೫೦॥**
**ತ್ರಿಲೋಕನಾಥ ದೇವೇಶ ತ್ರಾಹಿ ನೋऽದ್ಯಾತಿವಿಹ್ವಲಾನ್ ।**
**ಇತಿ ದೇವೈಃ ಪ್ರಾರ್ಥಿತಃ ಸನ್ ಬ್ರಹ್ಮಾ ಬ್ರಹ್ಮವಿದಾಂ ವರಃ ॥ ೫೧ ॥**
**ತಾನಾಗತಾನಥ ಪ್ರೋಚೇ ನೇಯಂ ದಂಡ್ಯಾ ಧೃತವ್ರತಾ ।**
**ಲಕ್ಷವರ್ತೀವ್ರತಾತ್ತುಷ್ಟಃ ಪೂರ್ವಜನ್ಮಕೃತಾದ್ಧರಿಃ ॥ ೫೨ ॥**
**ವೈಧವ್ಯಾದ್ಧಿ ಮಹಾದುಃಖಾತ್ ಸ್ವಯಂ ರಕ್ಷತಿ ಚಾಪಭೃತ್ ।**
**ಅಲಭ್ಯಂ ಕಿಂ ಭವೇಲ್ಲೋಕೇ ಹರೌ ತುಷ್ಟೇ ಜನಾರ್ದನೇ ॥ ೫೩ ॥**

ದೇವೋತ್ತಮರೇ, ಮೂರುಲೋಕಗಳ ಒಡೆಯರೇ, ನಮಗೆ ಯಜ್ಞಭಾಗದ ಹವಿಸ್ಸು ಬರುತ್ತಿಲ್ಲ, ದೇವತೆಗಳೆಲ್ಲರೂ ಅಶಕ್ತರಾಗಿದ್ದಾರೆ. ಭೂಲೋಕದ ಜನರು ಛಳಿಯಿಂದಲೂ, ಕಳ್ಳರ ಭಯದಿಂದಲೂ ಪೀಡಿತರಾಗಿದ್ದಾರೆ. ಇಂತಹ ಸಮಯದಲ್ಲಿ ನೀವು ನಮ್ಮನ್ನು ರಕ್ಷಿಸಬೇಕೆಂದು ಪ್ರಾರ್ಥಿತರಾದ ಜ್ಞಾನಿಶ್ರೇಷ್ಠರಾದ ಬ್ರಹ್ಮದೇವರು ದೇವತೆಗಳನ್ನು ಕುರಿತು ನುಡಿದರು—ಈ ದೃಢವ್ರತೆಯು ದಂಡಾರ್ಹಳಲ್ಲ. ಈಕೆಯು ಹಿಂದಿನ ಜನ್ಮದಲ್ಲಿ ಆಚರಿಸಿದ ಲಕ್ಷಬತ್ತೀವ್ರತದಿಂದ ಸಂತುಷ್ಟನಾದ ಶ್ರೀಹರಿಯು

ಇವಳಿಗೆ ವೈಧವ್ಯಾದಿದುಃಖಗಳು ಬಾರದಂತೆ ಧನುರ್ಬಾಣಗಳನ್ನು ಹಿಡಿದು ರಕ್ಷಿಸುತ್ತಾನೆ. ಶ್ರೀಹರಿಯು ಸಂತುಷ್ಟನಾದರೆ ದೊರೆಯದೇ ಇರುವುದು ಏನಾದರೂ ಇದೆಯೆ ?

**ಹರೌ ತು ವಿಮುಖೇ ಲೋಕೇ ವಿಪದಃ ಶಾಶ್ವತೀರ್ಧ್ರುವಮ್ ।**
**ನಾಶುಭಂ ವಿದ್ಯತೇ ಕ್ವಾಪಿ ಲಕ್ಷವರ್ತೀವ್ರತಾತ್ಮನಾಮ್ ॥ ೫೪ ॥**

ಅಂತಹ ಶ್ರೀಹರಿಯು ವಿಮುಖನಾದರೆ ನಾನಾ ಬಗೆಯ ಕಷ್ಟಗಳು ಶಾಶ್ವತವಾಗಿರುತ್ತವೆ. ಲಕ್ಷಬತ್ತೀವ್ರತವನ್ನು ಆಚರಿಸಿರುವ ಜನರಿಗೆ ಅಮಂಗಳವೆಂಬುದು ಯಾವ ಕಾಲದಲ್ಲಿಯೂ ಇಲ್ಲ.

**ಲಕ್ಷವರ್ತೀವ್ರತಕರೀ ಸುಭಗಾ ಪೂರ್ವಜನ್ಮನಿ ।**
**ತೇನ ಪುಣ್ಯಪ್ರಭಾವೇನ ಪುಣ್ಯಾ ಸಾಧ್ವೀ ಪತಿವ್ರತಾ ॥ ೫೫ ॥**
**ಪಾತಿವ್ರತ್ಯಪ್ರಭಾವೇನ ಶಕ್ತಿರೇತಾದೃಶೀ ಸುರಾಃ ।**
**ನ ಶಕ್ನುಮೋ ವಯಂ ದಂಡೇ ತಸ್ಯಾಃ ಸಾಧ್ವ್ಯಾಃ ಕಥಂಚನ ॥ ೫೬ ॥**

ಈ ಸ್ತ್ರೀಯು ಹಿಂದಿನ ಜನ್ಮದಲ್ಲಿ ಲಕ್ಷಬತ್ತೀವ್ರತವನ್ನು ಮಾಡಿರುವುದರಿಂದ ಅದರ ಪುಣ್ಯಪ್ರಭಾವದಿಂದಲೂ ಪತಿವ್ರತೆಯಾಗಿರುವುದರಿಂದಲೂ ಅವಳಿಗೆ ಇಂತಹ ಸಾಮರ್ಥ್ಯ ಲಭಿಸಿದೆ. ನಾವು ಯಾರೂ ಈ ಸಾಧ್ವಿಯನ್ನು ಶಿಕ್ಷಿಸಲು ಸಮರ್ಥರಲ್ಲ.

**ತಸ್ಮಾತ್ ಅನುನಯೇನೈವ ಪ್ರಾರ್ಥಯಾಮೋ ವಯಂ ತ್ವಿತಿ ।**
**ಆಭಾಷ್ಯ ದೇವತಾಃ ಸರ್ವಾಃ ತೈಃ ಸಾಕಂ ಭೂಮಿಮಾಯಯೌ ॥ ೫೭ ॥**

ಆದುದರಿಂದ ಸೌಮ್ಯಮಾರ್ಗದಿಂದಲೇ ಅವಳನ್ನೇ ನಾವು ಪ್ರಾರ್ಥಿಸಬೇಕೆಂದು ಹೇಳಿ ಎಲ್ಲ ದೇವತೆಗಳ ಸಂಗಡ ಭೂಲೋಕಕ್ಕೆ ಬ್ರಹ್ಮದೇವರು ಬಂದರು.

**ತದಾ ಸಾಧ್ವೀ ಮಹಾಪುಣ್ಯಾ ಪತಿಂ ವೇಶ್ಯಾಗೃಹಂ ಗತಮ್ ।**
**ಅನುಭುಕ್ತಂ ಪುನಃ ಪಂಗುಂ ಆನಿನ್ಯೇ ಸ್ವಗೃಹಂ ಕ್ಷಣಾತ್ ॥ ೫೮ ॥**

ಅಷ್ಟುಹೊತ್ತಿಗೆ ಆ ಸಾಧ್ವಿಯು ತನ್ನ ಪತಿಯನ್ನು ವೇಶ್ಯೆಯ ಮನೆಗೆ ಕರೆದು ಕೊಂಡು ಹೋಗಿ, ಅಲ್ಲಿ ಅವನು ಸುಖವನ್ನು ಅನುಭವಿಸಿದ ನಂತರ ಆ ಕುಂಟನನ್ನು ಪುನಃ ಮನೆಗೆ ಒಂದು ಕ್ಷಣದಲ್ಲಿ ಕರೆದುಕೊಂಡು ಬಂದಿದ್ದಳು.

**ಆಜಗಾಮ ತದಾ ಗೇಹಂ ಬ್ರಹ್ಮಾ ದೇವೈಃ ಸಮನ್ವಿತಃ ।**
**ಪ್ರಾರ್ಥಯಾಮಾಸ ತಾಂ ಸಾಧ್ವೀಂ ಸಾಂತ್ವೈರ್ಬಹುವಿಧೈರಪಿ ॥ ೫೯ ॥**

ಆಗ ದೇವತೆಗಳೊಡನೆ ಬಂದಿದ್ದ ಬ್ರಹ್ಮದೇವರು ಅವಳಿಗೆ ಸಾಂತ್ವವಚನಗಳಿಂದ ಹೇಳಿದರು.

**ವಿಹ್ವಲಾ ಪ್ರಣತಾ ಭೂತ್ವಾ ಸಾ ನಾರೀ ವಿಧಿಮಬ್ರವೀತ್ ।**
**ಪತ್ಯುಃ ಹಿತಕರೀ ಬಾಲಾ ಪತಿಂ ಊಢ್ವಾ ಮಹಾನಿಶಿ ॥ ೬೦ ॥**
**ವ್ರಜಂತೀ ಕುಟಿಲಾಗಾರಂ ವಿವ್ಯಥೇ ಶೂಲರೋಪಿತಮ್ ।**
**ಮಾಂಡವ್ಯಂ ಚ ಮಹಾತ್ಮಾನಂ ತೇನ ಶಪ್ತಾಸ್ಮಿ ಭಾಮಿನೀ ॥ ೬೧ ॥**

ಭಯಗೊಂಡ ಸತ್ಯವ್ರತೆಯು ಬ್ರಹ್ಮದೇವರಿಗೆ ನಮಸ್ಕರಿಸಿ ಹೇಳಿದಳು— ಪತಿಗೆ ಹಿತವಾಗಬೇಕೆಂಬ ಕಾರಣದಿಂದ ಅವನನ್ನು ಹೆಗಲಮೇಲೆ ಕೂಡಿಸಿಕೊಂಡು ರಾತ್ರಿಯಲ್ಲಿ ವೇಶ್ಯಾಸ್ತ್ರೀಮನೆಗೆ ನಾನು ಹೋಗುತ್ತಿದ್ದಾಗ ಕತ್ತಲೆಯಲ್ಲಿ ಕಾಣದೆ ಶೂಲದಲ್ಲಿದ್ದ ಮಹಾತ್ಮರಾದ ಮಾಂಡವ್ಯರನ್ನು ಎಡವಿದೆ. ಇದರಿಂದ ಅವರು ನನಗೆ ಶಾಪ ಕೊಟ್ಟರು.

**ಉದಯಂ ಬಂಧಯಾಂಕುರ್ವೇ ನವನ್ಯೈಧವ್ಯಕಾತರಾ ।**
**ವಿಪದೋಽನ್ಯಾಶ್ಚ ನಾರೀಭಿಃ ಸಹನೀಯಾಃ ಕಥಂಚನ ॥ ೬೨ ॥**

ವೈಧವ್ಯವು ಬರುತ್ತದೆಂದು ಹೆದರಿ ಸೂರ್ಯೋದಯಕ್ಕೆ ಅಡ್ಡಿಮಾಡಿದೆ. ಸ್ತ್ರೀಯರು ಎಂತಹ ದುಃಖವನ್ನಾದರೂ ಅನುಭವಿಸುತ್ತಾರೆ, ಆದರೆ ವೈಧವ್ಯ ದುಃಖವನ್ನು ಸಹಿಸಲಾರರು.

**ವೈಧವ್ಯವಿಪದಃ ಕ್ವಾಪಿ ವಾರ್ತಾಽಸಹ್ಯಾ ಸ್ತ್ರಿಯಾಮಿಹ ।**
**ಸ್ವಸ್ತಿ ಭೂಯಾತ್ ಕಥಂ ಮೇಽದ್ಯ ದೇವತಾನಾಂ ಮುನೇಸ್ತಥಾ ॥ ೬೩ ॥**

ವೈಧವ್ಯದ ವಾರ್ತೆಯನ್ನೂ ಸಹ ಸ್ತ್ರೀಯರು ಕೇಳಿ ಸಹಿಸಲಾರರು. ಆದುದರಿಂದ ನನಗೂ, ದೇವತೆಗಳಿಗೂ, ಮಾಂಡವ್ಯ ಋಷಿಗಳಿಗೂ ಮಂಗಳವಾಗಬೇಕಾದರೆ ಏನಾಗಬೇಕೋ ಅದನ್ನು ಮಾಡಿರಿ.

**ಇತ್ಯುಕ್ತೋ ದ್ರುಹಿಣಃ ಪ್ರಾಹ ತಾಂ ಸಾಧ್ವೀಂ ಚ ಧೃತವ್ರತಾಮ್ ।**
**ಶೃಣು ಬಾಲೇ ಮಹಾಪುಣ್ಯೇ ಮಂಗಲಾಧಾಯಿ ಮೇ ವಚಃ ॥ ೬೪ ॥**

ಇದನ್ನು ಕೇಳಿದ ಬ್ರಹ್ಮದೇವರು ಧೃತವ್ರತೆಯಾದ ಪತಿವ್ರತೆಯಾದ ಆ ಸ್ತ್ರೀಗೆ ಹೇಳಿದರು—"ಮಂಗಳಾಂಗಿಯೇ, ಮಹಾಪುಣ್ಯವತಿಯಾದ ಬಾಲೆಯೇ ನಾನು ಹೇಳುವುದನ್ನು ಲಾಲಿಸು.

**ಲಕ್ಷವರ್ತೀವ್ರತೋದ್ಭೂತಂ ಕ್ಷಣಿಕಂ ಪುಣ್ಯಮುತ್ತಮಮ್ ।**
**ಮಾಂಡವ್ಯಸ್ತೇನ ಪುಣ್ಯೇನ ನಿರ್ವ್ಯಥೋದ್ಧಾ ಭವಿಷ್ಯತಿ ॥ ೬೫ ॥**

ನೀನು ಆಚರಿಸಿರುವ ಲಕ್ಷಬತ್ತೀವ್ರತದ ಪುಣ್ಯದಲ್ಲಿ ಸ್ವಲ್ಪವನ್ನು ಮಾಂಡವ್ಯರಿಗೆ ಕೊಟ್ಟರೆ ಅದರಿಂದ ಅವರ ದುಃಖಪರಿಹಾರವಾಗುವುದು.

**ತೇನ ತೇ ದಾಪಯಿಷ್ಯಾಮಿ ಮಾಘ್ಯಾಂ ಸ್ನಾನಫಲಂ ಶುಭಮ್ ।**
**ಭರ್ತುಃ ತೇನೈವ ಪುಣ್ಯೇನ ಕಾಲಮೃತ್ಯುರ್ಗಮಿಷ್ಯತಿ ॥ ೬೬ ॥**

ಮಾಂಡವ್ಯರಿಂದ ನಿನಗೆ ಅವರು ಮಾಡಿರುವ ಮಾಘಸ್ನಾನದ ಫಲವನ್ನು ಕೊಡಿಸುತ್ತೇನೆ. ಅದರ ಪ್ರಭಾವದಿಂದ ನಿನ್ನ ಪತಿಯ ಕಾಲಮೃತ್ಯುವು ನಾಶವಾಗುತ್ತದೆ. (ಶಾಪಪ್ರಯುಕ್ತ ಒದಗಿರುವ ಮೃತ್ಯು—ಆಯುಸ್ಸು ತೀರಿಬಂದಿರುವ ಕಾಲಮೃತ್ಯುವಲ್ಲ.)

**ವ್ಯಾಧ್ಯಾಪನಯನೇ ಶಾಪೋ ಭವೇದ್ದತ್ತೋ ಮಹಾತ್ಮನಾ ।**
**ವ್ಯಾಧಿಮುಕ್ತಮಿಮಂ ದೇಹಂ ಪುನರ್ಜಾತಂ ವಿದೋ ವಿದುಃ ॥ ೬೭ ॥**

ನಿನ್ನ ಪತಿಯ ವ್ಯಾಧಿಯು ಗುಣಹೊಂದಲು ಶಾಪವನ್ನು ಕೊಟ್ಟಿರುತ್ತಾರೆ. ವ್ಯಾಧಿಯಿಂದ ಮುಕ್ತವಾದರೆ ಈ ದೇಹವು ಪುನರ್ಜನ್ಮ ಪಡೆದಂತೆಯೆಂದು ಜ್ಞಾನಿಗಳು ಹೇಳುತ್ತಾರೆ.

**ಶರೀರತ್ಯಾಗಮೇವಾಹುಃ ಮರಣಂ ಋಷಯೋಽಖಿಲಾಃ ।**
**ಶರೀರೇ ಪಾತಿತಃ ಶಾಪೋ ನ ಜೀವೇ ಚಾವ್ಯಯಾತ್ಮನಿ ॥ ೬೮ ॥**

ಶರೀರಪತನವೇ ಮರಣವೆಂದು ಋಷಿಗಳು ಹೇಳುತ್ತಾರೆ. ಶರೀರ ನಾಶವಾದರೂ ನಾಶರಹಿತನಾದ ಜೀವನಿಗೆ ಯಾವ ತೊಂದರೆಯೂ ಆಗುವುದಿಲ್ಲ.

**ತಸ್ಮಾತ್ ಶಾಪಾತ್ ವ್ಯಾಧಿಮೋಕ್ಷೋ ಭವೇದಿತಿ ವರಂ ದದೌ ।**
**ಮಾಂಡವ್ಯಂ ವಾಯುನಾ ನಿನ್ಯೇ ಶೂಲರೋಪಿತಮಬ್ಜಜಃ ॥ ೬೯ ॥**

ಮಾಂಡವ್ಯರ ಶಾಪದಿಂದ ನಿನ್ನ ಪತಿಯ ವ್ಯಾಧಿಗಳೆಲ್ಲವೂ ಗುಣವಾಗಲಿ ಎಂದು ಬ್ರಹ್ಮದೇವರು ವರವನ್ನು ಕೊಟ್ಟು ವಾಯುವಿನಿಂದ ಶೂಲದಲ್ಲಿದ್ದ ಮಾಂಡವ್ಯನನ್ನು ಕರೆಸಿದರು.

**ಲಕ್ಷವರ್ತೀವ್ರತೋದ್ಭೂತಂ ತಯಾ ಪುಣ್ಯಮನುತ್ತಮಮ್ ।**
**ದಾಪಯಾಮಾಸ ವಿಪ್ರಾಯ ತೇನಾಭೂತ್ ನಿರ್ವ್ಯಥೋ ಮುನಿಃ ॥ ೨೦ ॥**

ಸತ್ಯವ್ರತೆಯು ಮಾಡಿದ್ದ ಲಕ್ಷಬತ್ತೀವ್ರತದ ಪುಣ್ಯದಿಂದ ಸ್ವಲ್ಪ ಪುಣ್ಯವನ್ನು ಮಾಂಡವ್ಯರಿಗೆ ಕೊಡಿಸಲು ಅವರು ನಿರ್ದುಃಖರಾದರು.

**ಮುನಿನಾ ತು ಕೃತಂ ಮಾಘ್ಯಾಂ ಸ್ನಾನಜಂ ಸುಕೃತಂ ತಥಾ ।**
**ತದ್ಭರ್ತ್ರೇ ದಾಪಯಾಂಚಕ್ರೇ ಕಾಲಮೃತ್ಯುವಿನಾಶಕೃತ್ ॥ ೨೧ ॥**

ನಂತರ ಮಾಂಡವ್ಯಋಷಿಗಳಿಂದ ಅವರು ಮಾಡಿದ್ದ ಮಾಘಸ್ನಾನದ ಪುಣ್ಯವನ್ನು ಚಿತ್ರಕರ್ಮನಿಗೆ ಕೊಡಿಸಲು ಅವನ ಮೃತ್ಯುವು ಪರಿಹಾರವಾಯಿತು.

**ಪೂರ್ಣಾಯುಷ್ಯಂ ತೇನ ಲೇಭೇ ತದ್ಭರ್ತಾ ಸುಕೃತೇನ ಚ ।**
**ಶಾಪಾತ್ ವ್ಯಾಧಿವಿನಿರ್ಮುಕ್ತಃ ಪಂಗುತ್ವಸ್ಯಾಪಿ ಮಾನದ ॥ ೨೨ ॥**

ಈ ಪುಣ್ಯಪ್ರಭಾವದಿಂದ ಅವನು ಪೂರ್ಣಾಯುಸ್ಸನ್ನು ಪಡೆದನು. ಅವನ ರೋಗಗಳೆಲ್ಲವೂ ನಾಶವಾಗಿ, ಕುಂಟತ್ವವೂ ನೀಗಿತು.

**ವ್ಯಸನಂ ತು ತದಾ ಸಾಧ್ವ್ಯಾ ನಿವರ್ತ್ಯೈವಂ ಮಹಾಪ್ರಭುಃ ।**
**ತದ್ಭರ್ತುಶ್ಚ ಮುನೇಶ್ಚಾಸ್ಯ ದೇವಾನಾಂ ಚ ಮಹಾತ್ಮನಾಮ್ ॥ ೨೩ ॥**
**ಲಬ್ಧಕಾಮ್ಯೈಃ ಸುರೈಃ ಸರ್ವೈಃ ಸಾರ್ಧಂ ಧಾಮ ಸ್ವಕಂ ಯಯೌ ।**
**ದೇವಾಃ ಸುವಿಸ್ಮಿತಾ ಭೂತ್ವಾ ದೇವೇಂದ್ರಾದ್ಯಾ ಮಹಾಬಲಾಃ ॥ ೨೪ ॥**
**ತುಷ್ಟುವುಸ್ತು ಸತೀಂ ಪುಣ್ಯಾಂ ಲಕ್ಷವರ್ತೀವ್ರತಂ ತಥಾ ।**
**ಮಾಘಸ್ನಾನಸ್ಯ ಮಾಹಾತ್ಮ್ಯಂ ಸಾಧು ಸಾಧ್ವಿತಿ ಚಾಬ್ರುವನ್ ॥ ೨೫ ॥**

ಆ ಪತಿವ್ರತೆಯ, ಆಕೆಯ ಪತಿಯ, ಹಾಗೂ ಮಾಂಡವ್ಯರ ದುಃಖಗಳನ್ನು ಪರಿಹರಿಸಿ ದೇವತೆಗಳಿಗೆ ಸಂತೋಷಪಡಿಸಿ ಮನೋರಥಗಳು ಪೂರ್ಣಗೊಂಡ ಎಲ್ಲ ದೇವತೆಗಳಿಂದ ಸಹಿತರಾಗಿ ಬ್ರಹ್ಮದೇವರು ತಮ್ಮ ಸ್ಥಳಕ್ಕೆ ತೆರಳಿದರು. ದೇವೇಂದ್ರನೇ ಮೊದಲಾದ ದೇವತೆಗಳು ಹರ್ಷಗೊಂಡು ಆ ಪತಿವ್ರತಾಸ್ತ್ರೀಯನ್ನೂ, ಲಕ್ಷಬತ್ತೀ ವ್ರತದ ಪ್ರಭಾವವನ್ನೂ, ಮಾಘಸ್ನಾನದ ಮಾಹಾತ್ಮ್ಯೆಯನ್ನೂ ಹೊಗಳಿದರು.

**ತಥೈವಾನುಮತಾಃ ಸರ್ವೇ ಬ್ರಹ್ಮಣಾ ಸಹ ತೇ ಯಯುಃ ।**
**ಬುಭುಜೇ ಸಕಲಾನ್ ಭೋಗಾನ್ ಭರ್ತ್ರಾ ತೇನ ಮಹಾತ್ಮನಾ ॥ ೨೬ ॥**

ಬ್ರಹ್ಮದೇವರ ಅಪ್ಪಣೆ ಪಡೆದು ಎಲ್ಲ ದೇವತೆಗಳೂ ಪ್ರಯಾಣಮಾಡಿದರು. ಸತ್ಯವ್ರತೆಯು ತನ್ನ ಪತಿಯೊಡನೆ ಸಕಲ ಐಹಿಕ ಸುಖಗಳನ್ನೂ ಅನುಭವಿಸಿದಳು.

**ಸೋಽಪಿ ನಿರ್ವೇದಮಾಪೇದೇ ಪಾಪೀಯಾನಿತಿ ನಿತ್ಯಶಃ ।**
**ತಯಾ ಸಾರ್ಧಂ ಮಹಾತ್ಮಾಽಸೌ ಮಾಘಸ್ನಾನಂ ಚಕಾರ ಚ ॥ ೭೭ ॥**

ಚಿತ್ರಕರ್ಮನು ತಾನು ಇಷ್ಟುದಿನಗಳ ಕಾಲ ಪಾಪಮಾಡಿದ್ದಕ್ಕೆ ತುಂಬ ದುಃಖಪಟ್ಟನು, ಪಶ್ಚಾತ್ತಾಪ ಹೊಂದಿದನು. ಮಾಘಸ್ನಾನವನ್ನು ಅವಳೊಡನೆ ಮಾಡಿದನು.

**ಲಕ್ಷವರ್ತೀವ್ರತಂ ಸೋಽಪಿ ಪುನರ್ಮಾಘೇ ಚಕಾರ ಚ ।**
**ತೇನ ಭೌಮಾನ್ ಮಹಾಕಾಮಾನ್ ಭುಕ್ತ್ವಾ ದಶಸಹಸ್ರಕಮ್ ।**
**ಪುತ್ರಪೌತ್ರಸಮಾಯುಕ್ತೌ ಜೀವಂತೌ ಮೋಕ್ಷಮಾಪತುಃ ॥ ೭೮ ॥**

ಅವನೂ ಸಹ ಲಕ್ಷಬತ್ತೀವ್ರತವನ್ನು ಆಚರಿಸಿ ತನ್ನ ಪತ್ನಿಯೊಡನೆ ಹತ್ತು ಸಾವಿರ ವರ್ಷಗಳ ಕಾಲ ಐಹಿಕ ಸುಖಗಳನ್ನು ಅನುಭವಿಸಿ, ಪುತ್ರ ಪೌತ್ರರನ್ನು ಪಡೆದು ನಂತರ ಮೋಕ್ಷವನ್ನು ಹೊಂದಿದರು.

**ತಸ್ಮಾತ್ ಮಾಘಸಮೋ ಧರ್ಮೋ ನರಾಣಾಂ ಪಾಪಕರ್ಮಣಾಮ್ ।**
**ನಾಸ್ತ್ಯನ್ಯೋ ಧರ್ಮ ಇತ್ಯೇವ ಸರ್ವಧರ್ಮವಿದಾಂ ಮತಮ್ ॥ ೭೯ ॥**

ಆದುದರಿಂದ ಪಾಪಿಷ್ಠರಾದ ಜನರಿಗೆ ಮಾಘಸ್ನಾನಾದಿ ಪುಣ್ಯಕರವಾದ ಕರ್ಮಕ್ಕೆ ಸದೃಶವಾದ ಇನ್ನೊಂದು ಧರ್ಮವಿಲ್ಲವೆಂದು ಸಕಲಧರ್ಮಜ್ಞರ ಅಭಿಪ್ರಾಯ.

ಇತಿ ಶ್ರೀ ವಾಯುಪುರಾಣೇ ಮಾಘಮಾಸಮಾಹಾತ್ಮ್ಯೇ
ಏಕೋನತ್ರಿಂಶೋಽಧ್ಯಾಯಃ

ಶ್ರೀವಾಯುಪುರಾಣಾಂತರ್ಗತ ಮಾಘಮಾಸ ಮಾಹಾತ್ಮ್ಯೆಯಲ್ಲಿ
ಇಪ್ಪತ್ತೊಂಬತ್ತನೇ ಅಧ್ಯಾಯವು ಸಮಾಪ್ತಿಯಾಯಿತು.

**ಕುಟೀರಸ್ಥಾ ಊಚುಃ—**

**ದತ್ತಂ ಯೇನ ದುರನ್ನಂ ತು ವಸಿಷ್ಠಾಯ ಮಹಾತ್ಮನೇ ।**
**ರಾಕ್ಷಸೋಽಯಂ ಸುದುರ್ಬುದ್ಧಿಃ ಕಾಂ ವಾ ಗತಿಮವಾಪ ಸಃ ॥ ೧ ॥**

ಆಶ್ರಮವಾಸಿಗಳು ನುಡಿದರು :

ಗಾಲವರೇ, ಹಿಂದೆ ಜ್ಞಾನಿಗಳಾದ ವಸಿಷ್ಠರಿಗೆ ನರಮಾಂಸವನ್ನು ಕೊಟ್ಟಿದ್ದ ಆ ದುರ್ಬುದ್ಧಿಯಾದ ರಾಕ್ಷಸನಿಗೆ ಏನು ಗತಿಯಾಯಿತು ?

**ನಹೀಶ್ವರವ್ಯಾಹೃತಯಃ ಫಲಂತ್ಯನ್ಯದಭೀಪ್ಸಿತಮ್ ।**
**ರಾಜರ್ಷಿಃ ಕಾಂ ಗತಿಂ ಪ್ರಾಪ ಬ್ರಹ್ಮಹತ್ಯಾಶತಾಲಯಃ ॥ ೨ ॥**

ಭಗವಂತನಿಂದ ದತ್ತವಾದ ವರಗಳಾದರೂ ಯೋಗ್ಯತೆಯನ್ನು ಅನುಸರಿಸಿ ಫಲಕೊಡುತ್ತವೆಯೇ ವಿನಹ ಯೋಗ್ಯತೆ ಮೀರಿ ಕೊಡುವುದಿಲ್ಲ. ಬ್ರಹ್ಮಹತ್ಯಾ ದೋಷಕ್ಕೆ ಗುರಿಯಾದ ರಾಜರ್ಷಿಯಾದ ಕಲ್ಮಾಷಪಾದನಿಗೆ ಮುಂದೆ ಏನಾಯಿತು ?

**ವಿಸ್ತಾರ್ಯೈತತ್ಕಥಾಂ ಸಮ್ಯಕ್ ಅಸ್ಮಾನ್ ಬೋಧಯ ಸುವ್ರತ ।**
**ಇತಿ ಪೃಷ್ಟಃ ಕುಟೀರಸ್ಥೈಃ ಗಾಲವೋ ವಾಕ್ಯಮಬ್ರವೀತ್ ॥ ೩ ॥**
**ಶೃಣುಧ್ವಂ ಇತಿ ಚಾಭಾಷ್ಯ ಸಾಧು ಸಾಧ್ವಿತಿ ಸಂಸ್ತುವನ್ ।**

ವ್ರತನಿಷ್ಠರಾದ ಗಾಲವರೇ ಇದನ್ನು ವಿಸ್ತಾರವಾಗಿ ತಿಳಿಸಿರೆಂದು ನುಡಿಯಲು ಗಾಲವರು ಸಂತೋಷದಿಂದ "ಒಳ್ಳೆಯ ಪ್ರಶ್ನೆ ಮಾಡಿರುತ್ತೀರಿ, ಕೇಳಿರಿ" ಎಂದು ಪ್ರಾರಂಭಿಸಿದರು.

**ಗಾಲವ ಉವಾಚ—**

**ಕಾಲಮೃತ್ಯುಮಥಾಪನ್ನಂ ರಾಕ್ಷಸಂ ಚ ಕೃತಾಗಸಮ್ ॥ ೪ ॥**

ತಾನು ಮಾಡಿದ ಪಾಪಕ್ಕಾಗಿ ರಾಕ್ಷಸನು ಕಾಲಮೃತ್ಯು ವಶನಾದನು.

**ತಂ ನೇತುಮಾಯಯುರ್ಘೋರಾ ಯಮದೂತಾ ಯಮೋದಿತಾಃ ।**
**ತಾನ್ ದೃಷ್ಟ್ವಾ ದುದ್ರುವೇ ಶೀಘ್ರಂ ಕೈಲಾಸಾಧೀಶಮೀಶ್ವರಮ್ ॥ ೫ ॥**

ಅವನನ್ನು ಕರೆದುಕೊಂಡು ಹೋಗಲು ಯಮದೇವರ ಆಜ್ಞಾಪ್ರಕಾರ ಅವನ ದೂತರು ಬರಲು ರಾಕ್ಷಸನು ಹೆದರಿ ಕೂಡಲೇ ಕೈಲಾಸದಲ್ಲಿದ್ದ ರುದ್ರದೇವರ ಬಳಿಗೆ ಓಡಿದನು.

**ಪ್ರಣಮ್ಯೋವಾಚ ತಂ ಭೀತಃ ಕಿಂ ತೇ ವಚನಮನ್ಯಥಾ ।**
**ಮಾತಾ ಯದಿ ವಿಷಂ ದದ್ಯಾತ್ ಪಿತಾ ಕ್ರೀಣಾತಿ ಚೇತ್ಸುತಮ್ ॥ ೬ ॥**

ರುದ್ರದೇವರಿಗೆ ನಮಸ್ಕರಿಸಿ ಹೇಳಿದನು. ನಿಮ್ಮ ಮಾತಿಗೆ ವಿರುದ್ಧವಾಗಲು ಕಾರಣವೇನು ? ತಾಯಿಯು ಮಗನಿಗೆ ವಿಷಕೊಟ್ಟರೆ, ತಂದೆಯು ಆ ಮಗನನ್ನು ಮಾರಾಟಮಾಡುತ್ತಾನೆ.

**ರಾಜಾ ಹರತಿ ಸರ್ವಸ್ವಂ ತತ್ರ ಕಾ ಪರಿವೇದನಾ ।**
**ಶಿವಶಂಕರ ಸರ್ವಾತ್ಮನ್ ತ್ರಾಹಿ ಮಾಂ ಕರುಣಾಕರ ॥ ೭ ॥**

ರಾಜನೇ ಸರ್ವಸ್ವವನ್ನೂ ಕಿತ್ತುಕೊಂಡರೆ ದುಃಖವನ್ನು ಯಾರ ಬಳಿ ಹೇಳಬೇಕು ? ಕರುಣಾಕರನಾದ ರುದ್ರದೇವರೇ, ಶಂಕರರೇ, ಶಿವನೇ, ನನ್ನನ್ನು ರಕ್ಷಿಸಿ.

**ಮಹಾಕಾಯ ಮಹಾಬಾಹೋ ವಿಶ್ವರೂಪ ನಮೋಽಸ್ತು ತೇ ।**
**ತ್ರಿಯಂಬಕ ಮಹಾದೇವ ಸುಗಂಧೇ ಪುಷ್ಟಿವರ್ಧನ ॥ ೮ ॥**

ಮಹಾಕಾಯನೇ, ಮಹಾಬಾಹೋ, ವಿಶ್ವರೂಪನೇ, ತ್ರಿಯಂಬಕನೇ, ಮಹಾದೇವನೇ, ಸುಗಂಧೇ, ಪುಷ್ಟಿವರ್ಧನನೇ, ನಿಮಗೆ ನಮಸ್ಕಾರ.

**ವೃಂತಾದುರ್ವಾರುಕಂ ಪಕ್ವಂ ಮೃತ್ಯೋರ್ಮುಕ್ಷೀಯ ಮಾಂ ಯಥಾ ।**
**ಇತಿ ಮಂತ್ರಾರ್ಥಕೈರ್ವಾಕ್ಯೈಃ ಸ್ತುತಃ ಶಂಭುರ್ದಯಾನಿಧಿಃ ॥ ೯ ॥**
**ಪ್ರೋಚೇ ಕರುಣಯಾ ದೈತ್ಯಂ ಮೇಘಗಂಭೀರಯಾ ಗಿರಾ ।**
**ದುರ್ಬುದ್ಧಿನಾ ಪ್ರಾರ್ಥಿತೋಽಹಂ ಮೋಕ್ಷಮಿಚ್ಛೇವ ಛದ್ಮನಾ ॥ ೧೦ ॥**

ಜೇನುಗೂಡು ಪಕ್ವವಾದ ಕೂಡಲೇ ಜನರಿಂದ ಹೇಗೆ ಬೀಳಿಸಲ್ಪಡುತ್ತದೆಯೋ ಹಾಗೆ ನನ್ನ ಸ್ಥಿತಿಯೂ ಆಗಿದೆ. ಹೀಗೆ ಅರ್ಥಗರ್ಭಿತವಾದ ನುಡಿಗಳಿಂದ ಸ್ತೋತ್ರ ಮಾಡಲು, ದಯಾನಿಧಿಗಳಾದ ರುದ್ರದೇವರು ದೈತ್ಯನನ್ನು ಕುರಿತು ಮೇಘದಂತೆ ಗಂಭೀರಸ್ವರದಿಂದ ಹೇಳಿದರು—ದುರ್ಬುದ್ಧಿಯಾದ ನೀನು ಕಪಟದಿಂದ ನನ್ನನ್ನು ಮೋಕ್ಷ ಬೇಕೆಂದು ಬೇಡಿದಿ.

**ಅಜರಾಮರಣಂ ಮನ್ಯೇ ಮೋಕ್ಷಂ ಸರ್ವಾತ್ಮನಾ ಪುರಾ ।**
**ಕಾಂಕ್ಷಯನ್ ದೇವರಮಣೀನ್ ತ್ವಂ ದುಷ್ಟೇನೈವ ಚೇತಸಾ ॥ ೧೧ ॥**

ಎಂದೆಂದಿಗೂ ಮುಪ್ಪು, ಸಾವುಗಳಿಲ್ಲದೇ ಸದಾ ದೇವತಾಸ್ತ್ರೀಯರೊಡನೆ ವಿಹರಿಸಬೇಕೆಂಬ ಕೆಟ್ಟ ಬುದ್ಧಿಯಿಂದ ಮೋಕ್ಷವನ್ನು ಅಪೇಕ್ಷೆ ಮಾಡಿದಿ.

ನಿರ್ದ್ವಂದ್ವೋ ನಿರಹಂಕಾರೋ ನಿರ್ಮಮಸ್ತು ಜಿತೇಂದ್ರಿಯಃ ।
ವೇದಾಭ್ಯಾಸೀ ವಿಷ್ಣುಭಕ್ತೋ ನಿತ್ಯಾನಿತ್ಯವಿವೇಕವಾನ್ ॥ ೧೨ ॥

ನಿಃಸಂದೇಹೋ ಮೋಕ್ಷಮೇತಿ ನಾನ್ಯಥಾ ತು ಕಥಂಚನ ।
ತಸ್ಮಾತ್ ನಿಷ್ಕಾಮುಕೋ ಭೂತ್ವಾ ನಿರ್ದ್ವಂದ್ವೋ ನಿರಹಂಕೃತಿಃ ॥ ೧೩ ॥

ಅಹಂಕಾರ ಮಮಕಾರರಹಿತನೂ, ನಿರ್ದ್ವಂದ್ವನೂ, ಜಿತೇಂದ್ರಿಯನೂ, ವೇದಾಧ್ಯಯನಮಾಡಿದವನೂ, ವಿಷ್ಣುಭಕ್ತನೂ, ನಿತ್ಯಾನಿತ್ಯಗಳನ್ನು ತಿಳಿದವನೂ ಸಂದೇಹವಿಲ್ಲದೆ ಮೋಕ್ಷಕ್ಕೆ ಹೋಗುತ್ತಾನೆ, ಅನ್ಯರಲ್ಲ. ಆದುದರಿಂದ ನೀನು ಇಚ್ಛಾರಹಿತನಾಗಿ, ಅಹಂಕಾರ ತ್ಯಜಿಸಿ, ನಿರ್ದ್ವಂದ್ವನಾಗು.

ದಯಾವಾನ್ ಸರ್ವಭೂತೇಷು ವಿಂಧ್ಯಾದ್ರೌ ತ್ವಂ ತಪಃ ಕುರು ।
ಪ್ರೀತಸ್ತೇ ತಪಸಾ ವಿಷ್ಣುಃ ಇಷ್ಟಾನ್ ಕಾಮಾನ್ ದದಾತಿ ಚ ॥ ೧೪ ॥

ಸರ್ವ ಪ್ರಾಣಿಗಳಲ್ಲಿ ದಯವನ್ನು ತೋರಿಸು. ವಿಂಧ್ಯಪರ್ವತದಲ್ಲಿ ಶ್ರೀವಿಷ್ಣುವನ್ನು ಕುರಿತು ತಪಸ್ಸನ್ನು ಮಾಡು. ಅವನು ನಿನ್ನ ಇಚ್ಛೆಗಳನ್ನೆಲ್ಲ ಪೂರ್ಣ ಮಾಡುತ್ತಾನೆ.

ಏಕಮೇವಾಸ್ತಿ ತೇ ಜನ್ಮ ಬಲಿಪುತ್ರೋ ಭವಿಷ್ಯಸಿ ।
ಸಹಸ್ರಬಾಹುಃ ಬಾಣಾಖ್ಯಃ ತದಾ ತೇ ಭವಿತಾ ಧ್ರುವಮ್ ॥ ೧೫ ॥

ನಿನಗೆ ಇನ್ನು ಒಂದೇ ಜನ್ಮ, ಬಲಿರಾಜನಿಗೆ ಪುತ್ರನಾಗುತ್ತೀಯೆ, ಸಾವಿರ ಬಾಹುಗಳು ಇರುತ್ತವೆ, ಬಾಣ ಎಂಬ ಹೆಸರಿನ ನಿನಗೆ ಆಗ ಖಂಡಿತ ಮುಕ್ತಿಯಾಗುತ್ತದೆ.

ಸಂಬಂಧೋ ವಿಷ್ಣುನಾ ಸಾಕಂ ಯಾದವೇನ ಮಹಾತ್ಮನಾ ।
ತೇನ ತೇ ಭವಿತಾ ಯುದ್ಧಂ ತದಾ ಬಾಹುಸಹಸ್ರಕಮ್ ॥ ೧೬ ॥

ಛಿತ್ವಾ ಜಿತ್ವಾ ಚ ಮಾಂ ತತ್ರ ತ್ವಯಾ ಸಖ್ಯಮುಪೇಯುಷಮ್ ।
ಯುದ್ಧಂ ವಿಧಾಯ ತ್ವಾಂ ಪಶ್ಚಾತ್ ಸ ತು ಮೋಕ್ಷಂ ದದಾತಿ ತೇ ॥೧೭॥

ಯದುವಂಶದಲ್ಲಿ ಜನ್ಮತಾಳುವ ಶ್ರೀಕೃಷ್ಣನೊಡನೆ ನಿನ್ನ ಯುದ್ಧವಾಗುವುದು. ಶ್ರೀಹರಿಯು ನಿನ್ನ ಸಹಸ್ರಬಾಹುಗಳನ್ನೂ ಕತ್ತರಿಸುವನು. ನಿನ್ನ ಸಹಾಯಕ್ಕಾಗಿ ಬರುವ ನನ್ನನ್ನೂ ಸೋಲಿಸಿ ನಂತರ ನಿನಗೆ ಮೋಕ್ಷವನ್ನು ಕೊಡುವನು.

ತ್ವಯಾವಿಷ್ಟೋ ಬಾಣಸಂಜ್ಞಃ ತವ ದುರ್ಬುದ್ಧಿರ್ದೋಽಪರಃ ।
ವಿಷ್ಣುದ್ರೋಹಾತ್ ಮಹಾಪಾಪೀ ನರಕಾನೇವ ವಿಂದತಿ ॥ ೧೮ ॥

ನಿನ್ನಲ್ಲಿ ಆವಿಷ್ಟನಾಗುವ ಬಾಣನೆಂಬ ದೈತ್ಯನು ನಿನಗೆ ದುರ್ಬುದ್ಧಿಪ್ರೇರಕನಾಗಿರುವನು. ಅವನು ಮಹಾಪಾಪಿ. ಶ್ರೀಹರಿಯನ್ನು ದ್ವೇಷಿಸಿ ಕೊನೆಗೆ ನರಕಕ್ಕೆ ತೆರಳುವನು.

**ತ್ವಯಿ ಜಾತೇ ಬಲೇಃ ಪುತ್ರೇ ದ್ವಾರಪಾಲೋ ಭವಾಮಿ ತೇ ।**
**ಬಹು ಸಂಪತ್ ಸಮೃದ್ಧಶ್ಚ ಪುತ್ರಪೌತ್ರೈಃ ಸಮನ್ವಿತಃ ॥ ೧೯ ॥**

ನೀನು ಬಲಿಯ ಪುತ್ರನಾದಾಗ ನಾನು ನಿನ್ನ ಮನೆಗೆ ದ್ವಾರಪಾಲಕನಾಗಿರುವೆನು. ಐಶ್ವರ್ಯವು ನಿನ್ನಲ್ಲಿ ಸಮೃದ್ಧಿಯಾಗಿರುತ್ತದೆ. ಮಕ್ಕಳು, ಮೊಮ್ಮಕ್ಕಳು ಇವರಿಂದ ಯುಕ್ತನಾಗಿರುತ್ತೀಯೆ.

**ಭುಕ್ತ್ವಾ ಕಲ್ಪಂ ಮಹಾಭೋಗಾನ್ ಕಲ್ಪಾಂತೇ ಮೋಕ್ಷಮೇಷ್ಯಸಿ ।**
**ಇತ್ಯುಕ್ತ್ವಾಽಂತರ್ದಧೇ ರುದ್ರೋ ರಾಕ್ಷಸಂ ಗತಕಲ್ಮಷಮ್ ॥ ೨೦ ॥**

ಒಂದು ಕಲ್ಪಕಾಲ ಈ ರೀತಿ ಸುಖವನ್ನು ಅನುಭವಿಸಿ ಅಂತ್ಯದಲ್ಲಿ ಮೋಕ್ಷಕ್ಕೆ ಹೋಗುತ್ತೀಯೆ ಎಂದು ತಿಳಿಸಿ ಕಲ್ಮಾಷಪಾದನ ಪಾಪಗಳನ್ನು ಪರಿಹರಿಸಿ ರುದ್ರದೇವರು ಅದೃಶ್ಯರಾದರು.

**ಹರಾಜ್ಞಯಾ ಯಯುಃ ಸರ್ವೇ ಯಮದೂತಾ ಮದೋತ್ಕಟಾಃ ।**
**ವಿಹಾಯ ರಾಕ್ಷಸಂ ಕ್ರೂರಂ ಯಮಕೇತನಮಾಯಯುಃ ॥ ೨೧ ॥**

ರುದ್ರದೇವರ ಆಜ್ಞೆಯಂತೆ ಮದೋನ್ಮತ್ತರಾದ ಯಮದೂತರೆಲ್ಲ ಆ ಕ್ರೂರ ರಾಕ್ಷಸನನ್ನು ಬಿಟ್ಟು ತಮ್ಮ ಲೋಕಕ್ಕೆ ಹೊರಟುಹೋದರು.

**ಸ ವಿಂಧ್ಯಾದ್ರಿಂ ತತೋ ಗತ್ವಾ ತಪಸ್ತೇಪೇಽತಿದಾರುಣಮ್ ।**
**ಪ್ರೀಣಯನ್ ತಪಸಾ ವಿಷ್ಣುಂ ತೇನ ದತ್ತವರಃ ಪುನಃ ॥ ೨೨ ॥**

ನಂತರ ಆ ರಾಕ್ಷಸನು ವಿಂಧ್ಯಪರ್ವತಕ್ಕೆ ಹೋಗಿ ಕಠಿಣವಾದ ತಪಸ್ಸನ್ನಾಚರಿಸಿ ವಿಷ್ಣುವನ್ನು ಸಂತೋಷಪಡಿಸಿ ಅವನಿಂದ ವರ ಪಡೆದನು.

**ಪಾತಾಲೇ ಬಲಿಪುತ್ರತ್ವಂ ಪ್ರಾಯಾತ್ ಸ ಸುಮಹಾಮತಿಃ ।**
**ತತ್ರ ಭುಕ್ತ್ವಾ ಮಹಾಭೋಗಾನ್ಕ್ರಮಾತ್ ಮೋಕ್ಷಮವಾಪ್ತವಾನ್ ॥**

ಪಾತಾಲಲೋಕದಲ್ಲಿ ಬಲಿರಾಜನಿಗೆ ಪುತ್ರನಾಗಿ, ಸಕಲ ಭೋಗಗಳನ್ನೂ ಅನುಭವಿಸಿ ಅಂತ್ಯದಲ್ಲಿ ಮೋಕ್ಷವನ್ನು ಪಡೆದನು.

**ಸ ರಾಜರ್ಷಿರ್ದುರಾತ್ಮಾಽಯಂ ಸಂಚರನ್ ಚ ವನೇ ವನೇ ।**
**ಅಪಶ್ಯತ್ ಬ್ರಾಹ್ಮಣಂ ಕಂಚಿತ್ ದಾರೇಭ್ಯೋ ಋತುಮದಂ ನಿಶಿ ॥ ೨೪ ॥**

ರಾಕ್ಷಸಜನ್ಮದಲ್ಲಿದ್ದ ಮಹಾನೀಚನಾದ ಆ ರಾಜರ್ಷಿಯು ಅರಣ್ಯದಲ್ಲಿ ತಿರುಗುತ್ತಾ ಒಂದು ಸ್ಥಳದಲ್ಲಿ ರಾತ್ರಿಯಲ್ಲಿ ಪತ್ನಿಗೆ ಋತುಪ್ರದಾನ ಮಾಡುವ ಒಬ್ಬ ಬ್ರಾಹ್ಮಣನನ್ನು ಕಂಡನು.

**ಅಥಾಭ್ಯಧಾವತ್ ಭಕ್ಷಾರ್ಥೀ ಕ್ರೂರಕರ್ಮಾಪಿ ರಾಕ್ಷಸಃ ।**
**ಸಭಾರ್ಯಯಾ ಪ್ರಾರ್ಥಿತೋಽಪಿ ಪತಿಂ ದೇಹೀತ್ಯನೇಕಧಾ ॥ ೨೫ ॥**

**ಅಭಕ್ಷಯತ್ ತತೋ ಭಾರ್ಯಾ ತಂ ಶಶಾಪಾತಿದುಃಖಿತಾ ।**
**ಋತುಕಾಲೇ ಯದಾ ಭಾರ್ಯಾಂ ತ್ವಂ ಗಮಿಷ್ಯಸಿ ಭೂಮಿಪ ॥ ೨೬ ॥**

**ತದಾ ತೇ ಮರಣಂ ಭೂಯಾತ್ ನಾನ್ಯಥಾ ಮೇ ವಚೋ ಭವೇತ್ ।**
**ಚಿತೌ ದೇಹಂ ವಿಸೃಜ್ಯೈವ ಪಶ್ಚಾತ್ ನಾರೀ ದಿವಂ ಯಯೌ ॥ ೨೭ ॥**

ಕೂಡಲೇ ಅಲ್ಲಿಗೆ ಓಡಿಹೋಗಿ ಪಾಪಿಯಾದ ಬ್ರಾಹ್ಮಣನನ್ನು ತಿನ್ನಲು ಇಚ್ಛಿಸಿದನು. ಬ್ರಾಹ್ಮಣನ ಪತ್ನಿಯು ಪತಿಭಿಕ್ಷವನ್ನು ಬೇಡಿದರೂ ಸಹ ಬ್ರಾಹ್ಮಣನನ್ನು ತಿಂದುಬಿಟ್ಟನು. ನಂತರ ಬ್ರಾಹ್ಮಣಪತ್ನಿಯು ದುಃಖದಿಂದ ರಾಜನಿಗೆ ಶಾಪ ಕೊಟ್ಟಳು—"ನೀನು ಋತುಕಾಲದಲ್ಲಿ ನಿನ್ನ ಪತ್ನಿಯ ಸಹವಾಸ ಮಾಡಿದರೆ ಕೂಡಲೇ ಮರಣವು ಬರಲಿ, ನನ್ನ ವಚನವು ಎಂದಿಗೂ ಸುಳ್ಳಾಗುವುದಿಲ್ಲ" ಎಂದು ಹೇಳಿ ಚಿತೆಯನ್ನು ಸಿದ್ಧಪಡಿಸಿ ತನ್ನ ಪತಿಯ ದೇಹದ ಸಂಗಡ ತಾನೂ ಅದರಲ್ಲಿ ಬಿದ್ದು ಸ್ವರ್ಗಕ್ಕೆ ಹೋದಳು.

**ಪ್ರತ್ಯಹಂ ಸೋಽಪಿ ಶಕ್ತೇಶ್ಚ ಭಾರ್ಯಾಂ ಹಂತುಂ ಪುನಃ ಪುನಃ ।**
**ದಗ್ಧಸ್ತು ಸ್ತವರಾಜೇನ ಗಚ್ಛತ್ಯೇವ ವನಾಂತರಮ್ ॥ ೨೮ ॥**

ಈ ರಾಜರ್ಷಿಯು ನಿತ್ಯವೂ ವಸಿಷ್ಠರ ಪುತ್ರನಾದ ಶಕ್ತಿ ಎಂಬುವನ ಪತ್ನಿಯನ್ನು ಸಂಹರಿಸಲು ಬಾರಿಬಾರಿಗೂ ಪ್ರಯತ್ನಪಟ್ಟನು. ಆದರೆ ಅವಳು ಪಠಿಸುತ್ತಿದ್ದ ಮಾಘಸ್ತವರಾಜ ಸ್ತೋತ್ರದಿಂದ ದಗ್ಧನಾಗಿ ಆಶ್ರಮದಲ್ಲಿ ಹೋಗಲು ಸಾಧ್ಯವಿಲ್ಲದೆ ಬೇರೆ ವನಕ್ಕೆ ಹೋಗುತ್ತಿದ್ದನು.

**ಶ್ವಶುರಂ ಶಕ್ತಿಭಾರ್ಯಾ ಸಾ ಯಯಾಚೇ ಕರುಣಾತ್ಮನಾ ।**
**ಸ್ವಾಭಾವಿಕಃ ಪ್ರಮಾದೋ ಹಿ ದೇವಾನಾಮಪಿ ದೇಹಿನಾಮ್ ॥ ೨೯ ॥**

ಒಂದು ದಿನ ಶಕ್ತಿಯ ಪತ್ನಿಯು ತನ್ನ ಮಾವನಾದ ವಸಿಷ್ಠರಿಗೆ ದೈನ್ಯದಿಂದ ಹೇಳಿದಳು—"ದೇವತೆಗಳಿಗೂ, ಮನುಷ್ಯರಿಗೂ ತಪ್ಪುಮಾಡುವುದು ಸಹಜವೇ.

**ಜಾಗರೇಣ ಕಥಂ ಕಾಲೋ ನೇಯೋಽಸ್ಮಾಭಿಃ ಮಹಾಮತೇ ।**
**ಕಾಲಂ ಪ್ರಾಮಾದಿಕಂ ದೃಷ್ಟ್ವಾ ಸ ಹನಿಷ್ಯತಿ ನೋ ಧ್ರುವಮ್ ॥ ೩೦ ॥**

ನಾವು ಸದಾ ಎಚ್ಚರಿಕೆಯಿಂದಲೇ ಹೇಗೆ ಕಾಲಕಳೆಯಬೇಕು ? ನಾವು ಎಚ್ಚರ ತಪ್ಪಿದಾಗ ಆ ರಾಕ್ಷಸನು ನಮ್ಮನ್ನು ನಿಶ್ಚಯವಾಗಿ ಸಂಹರಿಸುತ್ತಾನೆ.

**ತಸ್ಮಾನ್ಮುನೇ ಕೃಪಾಲೋ ತ್ವಂ ಶಾಪಮೋಕ್ಷಂ ದ್ರುತಂ ಕುರು ।**
**ಪುತ್ರಕಲ್ಪಸ್ತು ಶಿಷ್ಯೋ ಹಿ ದಯಾಪಾತ್ರಸ್ತತೋ ವಿಭೋ ॥ ೩೦ ॥**

ಮಹಾತ್ಮರೇ ! ಆ ರಾಜನ ಶಾಪವನ್ನು ಬೇಗನೆ ಪರಿಹರಿಸಿರಿ. ಶಿಷ್ಯನೂ ಸಹ ಮಗನಂತೆ ದಯೆಗೆ ಪಾತ್ರನೇ.

**ಅಸ್ಮತ್ಕರ್ಮಾನುರೂಪೇಣ ದುಃಖಾನ್ಯೇತಾನಿ ಜಜ್ಞಿರೇ ।**
**ರಾಜಾ ನಿಮಿತ್ತಮಾತ್ರಂ ತು ತಸ್ಮಾತ್ ತಸ್ಮಿನ್ ದಯಾಂ ಕುರು ॥ ೩೧ ॥**

ನಮ್ಮ ಕರ್ಮಗಳಿಗೆ ಅನುಸಾರವಾಗಿ ದುಃಖವನ್ನು ಅನುಭವಿಸಬೇಕು. ರಾಜನು ನಿಮಿತ್ತ ಮಾತ್ರ. ಆದುದರಿಂದ ಅವನಲ್ಲಿ ದಯೆ ಮಾಡಿರಿ."

**ಸ್ನುಷಯಾ ಬೋಧಿತೋ ವಿಪ್ರೋ ವಸಿಷ್ಠೋ ಬ್ರಹ್ಮನಂದನಃ ।**
**ಆದಾಯ ಪಾಣಿನಾ ವಾರಿ ಸ್ವಕಮಂಡಲುತಃ ಶುಚಿ ॥ ೩೨ ॥**
**ದತ್ವಾ ಮಾಘ್ಯಾಂ ಸ್ನಾನಫಲಂ ಪ್ರೋಕ್ಷಿತಃ ಪುನರಾಗತಃ ।**
**ತಸ್ಮಾತ್ ಸ ಮುಕ್ತಪಾಪಃ ಸನ್ ಪೂರ್ವರೂಪಮುಪೇಯಿವಾನ್ ॥ ೩೪ ॥**

ಸೊಸೆಯ ನುಡಿಯನ್ನು ಕೇಳಿದ ಬ್ರಹ್ಮಕುಮಾರರಾದ ವಸಿಷ್ಠರು ಕಮಂಡಲುವಿನಿಂದ ನೀರನ್ನು ತಂದು ಮಾಘಸ್ನಾನ ಫಲವನ್ನು ಕೊಟ್ಟು ಪ್ರೋಕ್ಷಿಸಿದರು. ರಾಜನು ತನ್ನ ರಾಕ್ಷಸಜನ್ಮದಿಂದ ಮುಕ್ತನಾಗಿ ಪೂರ್ವದ ರೂಪವನ್ನು ಪಡೆದನು.

**ಆಗಚ್ಛಂತಂ ತದಾ ಭೂಪಂ ಪೌರಾಃ ಸಾರ್ಹಣಪಾಣಯಃ ।**
**ಅಲಂಕೃತ್ಯ ಪುರೀಂ ಸರ್ವಾಂ ದ್ರಷ್ಟುಂ ದೂರಂ ವಿನಿರ್ಯಯುಃ ॥ ೩೫ ॥**

ತನ್ನ ಊರಿಗೆ ಬರುತ್ತಿರುವ ರಾಜನನ್ನು ಸತ್ಕರಿಸಲು ನಾಗರಿಕರು ಸಕಲ ಪೂಜಾಸಾಮಗ್ರಿಗಳನ್ನೂ ಕೈಯಲ್ಲಿ ತೆಗೆದುಕೊಂಡು, ಪಟ್ಟಣವನ್ನು ಅಲಂಕರಿಸಿ ರಾಜನ ಎದುರಿಗೆ ಹೋದರು.

**ಪೌರಾನ್ ಸಂಭಾವ್ಯ ರಾಜರ್ಷಿಃ ಬಹುಕಾಮಂ ಯಥಾಕ್ರಮಮ್ ।**
**ಪ್ರವಿವೇಶ ತತಃ ಸ್ವಾಂತಃಪುರಂ ರಾಜ್ಞೀಭಿರೀಕ್ಷಿತಃ ॥ ೩೬ ॥**

ರಾಜನು ನಾಗರಿಕರನ್ನು ಯಥಾಯೋಗ್ಯವಾಗಿ ಮರ್ಯಾದಿಸಿ, ಅಂತಃಪುರಕ್ಕೆ ಬಂದು ರಾಣಿಯರನ್ನು ಭೇಟಿಯಾದನು.

**ಕಿಯತ್ಕಾಲಂ ಸುಖಂ ಸ್ಥಿತ್ವಾ ರಮಣೀಂ ರಂತುಮಾಹ್ವಯತ್ ।**
**ರಮಮಾಣಸ್ತಯಾ ಸಾಕಂ ಮೃತಿಮಾಪ ಮಹಾಮನಾಃ ॥ ೩೭ ॥**

ಸ್ವಲ್ಪಕಾಲ ಸುಖದಿಂದ ಕಳೆದನಂತರ ತನ್ನ ಪಟ್ಟದ ರಾಣಿಯೊಡನೆ ಕ್ರೀಡಿಸಿ ಮೃತನಾದನು.

**ವಸಿಷ್ಠಸ್ಯ ಪ್ರಸಾದೇನ ಮುಕ್ತಿಮಾಪ ಸುದುರ್ಲಭಾಮ್ ।**

ಗುರುಗಳಾದ ವಸಿಷ್ಠರ ಅನುಗ್ರಹದಿಂದ ದುರ್ಲಭವಾದ ಮೋಕ್ಷವನ್ನು ಪಡೆದನು.

**ಗಾಲವ ಉವಾಚ—**

**ಇತ್ಯೇತತ್ಕಥಿತಂ ಸರ್ವಂ ಮಾಘಮಾಹಾತ್ಮ್ಯಮುತ್ತಮಮ್ ॥ ೩೮ ॥**
**ನಿರ್ವಿಶೇಷೇಣ ಮೇ ವಕ್ತುಂ ನಾಲಂ ಕಲ್ಪಶತೈರಪಿ ।**
**ಮಾಘಮಾಸಸ್ಯ ಮಾಹಾತ್ಮ್ಯಂ ಅಂಶಾಂಶೇನ ಪ್ರಕೀರ್ತಿತಮ್ ॥ ೩೯ ॥**

ಗಾಲವರು ಹೇಳಿದರು :

ಇದುವರೆವಿಗೂ ಮಾಘಮಾಸದ ಮಾಹಾತ್ಮ್ಯೆಯನ್ನು ನಿಮಗೆಲ್ಲ ಹೇಳಿರುತ್ತೇನೆ. ಪೂರ್ತಿಯಾಗಿ ಹೇಳಲು ಬ್ರಹ್ಮದೇವರ ನೂರು ಕಲ್ಪಗಳಾದರೂ ಸಾಲದು. ಸ್ವಲ್ಪ ಭಾಗವನ್ನು ಮಾತ್ರ ವಿವರಿಸಿರುತ್ತೇನೆ.

**ತಸ್ಮಾದೇತದನುಷ್ಠೇಯಂ ಧರ್ಮಂ ಭಾಗವತಂ ಶುಭಮ್ ।**
**ಧರ್ಮೇಣಾನೇನ ಸಂತುಷ್ಟಃ ಸಮ್ಯಕ್ ಚೀರ್ಣೇನ ವೈ ಹರಿಃ ॥ ೪೦ ॥**

ಮಂಗಳಕರವಾದ ಪರಮಾತ್ಮನಿಗೆ ಪ್ರೀತಿಕರವಾದ ಮಾಘಮಾಸದ ಧರ್ಮಗಳನ್ನು ಎಲ್ಲರೂ ಅನುಸರಿಸಬೇಕು. ಇದರಿಂದ ಶ್ರೀಹರಿಯು ಸಂತುಷ್ಟನಾಗುತ್ತಾನೆ.

**ದದಾತ್ಯಭಿಹಿತಾನ್ ಕಾಮಾನ್ ಮುಕ್ತಿಂ ಚೈವ ಸುದುರ್ಲಭಾಮ್ ।**
**ಇತ್ಯುಕ್ತ್ವಾ ವಿರರಾಮಾಥ ಗಾಲವೋ ಮುನಿಸತ್ತಮಃ ॥ ೪೧ ॥**

ಅಂತಹವರು ಬೇಡಿದ ಇಷ್ಟಾರ್ಥಗಳನ್ನೂ, ದುರ್ಲಭವಾದ ಮುಕ್ತಿಯನ್ನೂ, ಕೊಡುತ್ತಾನೆಂದು ಹೇಳಿ ಋಷಿಶ್ರೇಷ್ಠರಾದ ಗಾಲವರು ಸುಮ್ಮನಾದರು.

**ತತಃ ಕುಟೀರಕ್ಷೇತ್ರಸ್ಥಾ ಬ್ರಾಹ್ಮಣಾ ಬ್ರಹ್ಮವಾದಿನಃ ।**
**ಗಾಲವಂ ಪೂಜಯಾಮಾಸುಃ ಯಥಾಭೂತಿ ಯಥಾಬಲಮ್ ॥ ೪೨ ॥**

ಆಶ್ರಮವಾಸಿಗಳಾದ ಬ್ರಹ್ಮಜ್ಞಾನಿಗಳಾದ ಬ್ರಾಹ್ಮಣರೆಲ್ಲರೂ ಗಾಲವರನ್ನು ತಮ್ಮ ಶಕ್ತಿಗೆ ಅನುಗುಣವಾಗಿ ಪೂಜಿಸಿದರು.

**ಗೋ ಭೂ ತಿಲ ಹಿರಣ್ಯಾದ್ಯೈಃ ಧಾನ್ಯಾಂಬರವಿಭೂಷಣೈಃ ।**
**ಪ್ರಣೇಮುಃ ಯುಗಪತ್ ಭಕ್ತ್ಯಾ ತುಷ್ಟುವುಃ ವಿವಿಧೈಃ ಸ್ತವೈಃ ॥ ೪೩ ॥**

ಗೋ, ಭೂಮಿ, ಎಳ್ಳು, ಚಿನ್ನ, ಧಾನ್ಯ, ವಸ್ತ್ರಗಳು, ಆಭರಣಗಳು ಇವುಗಳನ್ನು ಗಾಲವರಿಗೆ ಅರ್ಪಿಸಿ, ಎಲ್ಲರೂ ಭಕ್ತಿಯಿಂದ ನಮಸ್ಕರಿಸಿ, ನಾನಾವಿಧವಾಗಿ ಅವರನ್ನು ಸ್ತುತಿಸಿ ಸಂತೋಷಪಡಿಸಿದರು.

**ಅನುಜ್ಞಾತಾ ಗೃಹಂ ಜಗ್ಮುಃ ಗಾಲವೇನ ಮಹಾತ್ಮನಾ ।**
**ತದಾ ತು ನಿಮಿನಾऽಹೂತೋ ಯಜ್ಞಾರ್ಥೇ ಸಂಶಿತವ್ರತಃ ॥ ೪೪ ॥**

ಗಾಲವರಿಂದ ಅಪ್ಪಣೆ ಪಡೆದು ಎಲ್ಲರೂ ತಮ್ಮ ತಮ್ಮ ಮನೆಗೆ ತೆರಳಿದರು. ಆ ಕಾಲಕ್ಕೆ ನಿಮಿ ಎಂಬ ರಾಜನು ಗಾಲವರನ್ನು ಯಜ್ಞಕ್ಕಾಗಿ ಆಹ್ವಾನಿಸಿದನು.

**ಗೋದಾವರೀತಟಂ ಪ್ರಾಯಾತ್ ಶಿಷ್ಯೈಃ ಸಹ ತಪೋನಿಧಿಃ ।**
**ಏತದ್ವೃತ್ತಾಂತಮಖಿಲಂ ಶಾಂಡಿಲ್ಯೋऽಥ ಮಹಾಮುನಿಃ ॥ ೪೫ ॥**
**ಅಷ್ಟಾವಿಂಶತಿಸಂಖ್ಯೇಭ್ಯಃ ಪುರುಷೇಭ್ಯೋऽಭ್ಯಧಾತ್ತತಃ ।**
**ಶ್ರುತ್ವಾ ತೇऽಪ್ಯತಿಸಂತುಷ್ಟಾಃ ಮಾಘಮಾಹಾತ್ಮ್ಯಮುತ್ತಮಮ್ ॥**
**ಶಾಂಡಿಲ್ಯಂ ಪೂಜಯಾಮಾಸುಃ ಸುಯಜ್ಞಂ ಚ ಮಹಾಮತಿಮ್ ।**
**ಅನುಜ್ಞಾತಾಃ ತಥಾ ತಾಭ್ಯಾಂ ಯಥಾಕಾಮಂ ಗತಾಸ್ತು ತೇ ॥೪೭॥**

ಗಾಲವರು ಶಿಷ್ಯರಿಂದ ಸಹಿತರಾಗಿ ಗೋದಾವರೀ ನದೀತೀರಕ್ಕೆ ಹೊರಟು ಹೋದರು. ಈ ವಿಚಾರವನ್ನೆಲ್ಲ ಮಹಾಜ್ಞಾನಿಗಳಾದ ಶಾಂಡಿಲ್ಯರು ಇಪ್ಪತ್ತೆಂಟು ಮಂದಿ ದಿವ್ಯಪುರುಷರಿಗೆ ಹೇಳಿದರು. ಅವರೆಲ್ಲರೂ ಈ ಮಾಘಮಾಸದ ಮಾಹಾತ್ಮ್ಯೆಯನ್ನು ಕೇಳಿ ತುಂಬ ಸಂತುಷ್ಟರಾಗಿ, ಶಾಂಡಿಲ್ಯರನ್ನೂ, ಜ್ಞಾನಿಯಾದ ಸುಯಜ್ಞನನ್ನೂ ಪೂಜಿಸಿ, ಅವರ ಅಪ್ಪಣೆಯನ್ನು ಪಡೆದು ತಮ್ಮ ಇಚ್ಛೆಗೆ ಬಂದ ಸ್ಥಳಗಳಿಗೆ ಪ್ರಯಾಣಮಾಡಿದರು.

**ತತ್ರೈಕಃ ತುಂದಿಲೋ ನಾಮ ಗಂಧರ್ವಸ್ತು ದಿವಂ ಯಯೌ ।**
**ಸಪ್ತವಿಂಶತಿಸಂಖ್ಯಾಕಾಃ ಪುರುಷಾಃ ಸಂಶಿತವ್ರತಾಃ ॥ ೪೮ ॥**
**ಬಭೂವುಃ ತನಯಾಸ್ತಸ್ಯ ಸುಯಜ್ಞಸ್ಯ ಮಹಾತ್ಮನಃ ।**
**ನಾಮ್ನಾ ಪಂಚಶಿಖಾ ಸರ್ವೇ ತಪೋನಿಷ್ಠಾ ಮಹಾಬಲಾಃ ॥ ೪೯ ॥**

ಅವರಲ್ಲಿ ಒಬ್ಬನಾದ ತುಂದಿಲನೆಂಬ ಗಂಧರ್ವನು ಸ್ವರ್ಗಲೋಕಕ್ಕೆ ಹೋದನು. ಇನ್ನುಳಿದ ಇಪ್ಪತ್ತೇಳುಮಂದಿ ದೃಢವ್ರತರು, ಮಹಾತ್ಮನಾದ ಸುಯಜ್ಞನಿಗೆ

ಮಕ್ಕಳಾಗಿ ಹುಟ್ಟಿದರು. ಸಂಚಶಿಖಾ ಎಂಬ ಹೆಸರಿನ ಅವರೆಲ್ಲ ಮಹಾಬಲಿಷ್ಠರೂ, ತಪೋನಿಷ್ಠರೂ ಆಗಿದ್ದರು.

**ಮಾಘೇ ಮಾಸಿ ಪುನಃ ಕೃತ್ವಾ ಸ್ನಾನಂ ಮಾಧವಪೂಜನಮ್ ।**
**ತೇನ ಲಬ್ಧ್ವಾ ಮಹಾಜ್ಞಾನಂ ಮುಕ್ತಿಂ ಚಾಪಿ ಪ್ರಪೇದಿರೇ ॥ ೫೦ ॥**

ಮಾಘಮಾಸದಲ್ಲಿ ಸ್ನಾನಮಾಡಿ, ಮಾಧವನನ್ನು ಪೂಜಿಸಿ, ಅದರಿಂದ ಮಹಾಜ್ಞಾನವನ್ನು ಹೊಂದಿ ಮುಕ್ತಿಯನ್ನು ಪಡೆದರು.

**ಶಾಂಡಿಲ್ಯೋಽಥ ಸುಯಜ್ಞೇನ ಸಾಕಂ ಸ್ವಾಶ್ರಮಮಾಯಯೌ ।**

ಶಾಂಡಿಲ್ಯರು ಸುಯಜ್ಞನಿಂದ ಸಹಿತನಾಗಿ ತಮ್ಮ ಆಶ್ರಮಕ್ಕೆ ಹೋದರು.

**ಸೂತ ಉವಾಚ—**

**ಏತದ್ವೃತ್ತಾಂತಮಖಿಲಂ ನಾರದಾಯಾಬ್ಜಜೋಽವದತ್ ॥ ೫೧ ॥**

**ಶ್ರುತ್ವಾಽಥ ನಾರದೋ ದಿವ್ಯಾಂ ಸುಧಾಂ ಕಲ್ಪಾಂ ಮನೋಹರಾಮ್।**
**ಸಂತೋಷಮತುಲಂ ಲೇಭೇ ಸ್ಫುರದಂಗರುಹೋ ಮುನಿಃ ॥ ೫೨ ॥**

ಸೂತರು ಹೇಳಿದರು—

ಈ ವೃತ್ತಾಂತವನ್ನೆಲ್ಲ ಬ್ರಹ್ಮದೇವರು ನಾರದರಿಗೆ ಹೇಳಿದರು. ನಾರದರು ಅಮೃತಸದೃಶವಾದ, ಮನೋಹರವಾದ ಈ ಮಾಘದ ಮಾಹಾತ್ಮ್ಯೆಯನ್ನು ಕೇಳಿ ತುಂಬ ಹರ್ಷಗೊಂಡು, ರೋಮಾಂಚನವನ್ನು ಪಡೆದರು.

**ವಿಧಿಂ ಪ್ರಣಮ್ಯ ಬಹುಧಾ ಕೃತ್ವಾ ಕೃತ್ವಾ ಪ್ರದಕ್ಷಿಣಮ್ ।**
**ಅನುಜ್ಞಾತಸ್ತತಸ್ತೇನ ತ್ರೀನ್ ಲೋಕಾನ್ ಪರ್ಯಟನ್ ಮುನಿಃ ॥**

ನಾರದರು ಬ್ರಹ್ಮದೇವರಿಗೆ ಪ್ರದಕ್ಷಿಣೆ ನಮಸ್ಕಾರಗಳನ್ನು ಪರಿಪರಿಯಾಗಿ ಮಾಡಿ ಅವರಿಂದ ಅಪ್ಪಣೆಯನ್ನು ಪಡೆದು ಮೂರು ಲೋಕಗಳಲ್ಲಿಯೂ ಸಂಚರಿಸಿದರು.

**ಏತತ್ಸರ್ವಂ ಸಮಾಖ್ಯಾತಂ ಮಾಘಮಾಹಾತ್ಮ್ಯಮುತ್ತಮಮ್ ।**
**ಶುಶ್ರೂಷುಭ್ಯೋ ಭವದ್ಭ್ಯಶ್ಚ ಸದಾ ಗೋಪ್ಯತಮಂ ನೃಣಾಮ್॥೫೪॥**

ಋಷಿಗಳಿರಾ, ಗುರುಸೇವಾತತ್ಪರರಾದ ನಿಮಗೆ ಅತ್ಯಂತ ರಹಸ್ಯವಾದ ಉತ್ತಮವಾದ ಈ ಮಾಘಮಾಸ ಮಾಹಾತ್ಮ್ಯೆಯನ್ನು ಹೇಳಿರುತ್ತೇನೆ.

**ಕಸ್ಯಾಪೀದಂ ಅನಾಖ್ಯೇಯಂ ಶ್ರದ್ಧಾಹೀನಸ್ಯ ದುರ್ಮತೇಃ ।**
**ದೇಯಂ ಶಿಷ್ಯಾಯ ಪುತ್ರಾಯ ಚಿರಂ ಜ್ಞಾತಸ್ವರೂಪಿಣೇ ॥ ೫೫ ॥**

ಇದನ್ನು ದುಷ್ಟಬುದ್ಧಿಯುತರಿಗೂ, ಭಕ್ತಿಹೀನರಿಗೂ ಹೇಳಬಾರದು. ಇಂತಹ ಶ್ರೇಷ್ಠವಾದ ಉಪದೇಶವನ್ನು ಒಳ್ಳೆಯ ಶಿಷ್ಯನಿಗೂ, ಸತ್ಪುತ್ರನಿಗೂ, ಜ್ಞಾನವನ್ನು ಪಡೆಯಲು ಅರ್ಹರಾದವರಿಗೂ ನೀಡಬೇಕು.

**ಸರ್ವವೇದಸಮಂ ಶಾಸ್ತ್ರಂ ಸಾರಭೂತಂ ಮನೋರಮಮ್ ।**
**ಅಧೀತ್ಯ ಸರ್ವಶಾಸ್ತ್ರಾಣಿ ಪಯಃಸಾರಮಿವೋದ್ಧೃತಮ್ ॥ ೫೬ ॥**
**ನಾನೇನ ಸದೃಶಂ ಶಾಸ್ತ್ರಂ ವಿಷ್ಣುಪ್ರೀತಿಕರಂ ಶುಭಮ್ ।**
**ವಿಜ್ಞಾತೇ ಯೇನ ಶಾಸ್ತ್ರೇ ತು ಸರ್ವಂ ಜ್ಞಾತಮಿದಂ ಭವೇತ್ ॥ ೫೭ ॥**

ಇದು ವೇದಕ್ಕೆ ಸರಿಸಮನಾದುದು, ವೇದಸಾರಭೂತ, ಮನೋಹರವಾಗಿರುವುದು. ಎಲ್ಲ ಶಾಸ್ತ್ರಗ್ರಂಥಗಳನ್ನು ಅಧ್ಯಯನಮಾಡಿ ಅದರ ಸಾರವನ್ನು ತೆಗೆದಂತೆ ಇರುವುದು. ವಿಷ್ಣುವಿಗೆ ಪ್ರೀತಿಕರವಾದ, ಮಂಗಳಕರವಾದ ಶಾಸ್ತ್ರವು ಬೇರೆ ಇಲ್ಲ. ಇದನ್ನು ತಿಳಿದರೆ ಸರ್ವವನ್ನೂ ತಿಳಿದಂತಾಗುವುದು.

**ಶ್ರವಣಾದೇವ ಶಾಸ್ತ್ರಸ್ಯ ವಿಲಯಂ ಯಾಂತಿ ಸರ್ವಶಃ ।**
**ದುರತ್ಯಯಾನಿ ಪಾಪಾನಿ ಬಹುಜನ್ಮಾರ್ಜಿತಾನಿ ಚ ॥ ೫೮ ॥**

ಇದನ್ನು ಶ್ರವಣಮಾಡಿದರೆ ಎಷ್ಟೋ ಜನ್ಮಗಳಲ್ಲಿ ಮಾಡಿದ ಸಮಸ್ತ ಪಾಪಗಳೂ ನಾಶವಾಗುತ್ತವೆ.

**ಭಕ್ತ್ಯಾ ತು ಪೂಜಯೇದ್ಯಸ್ತು ಲಿಖಿತ್ವಾ ಪುಸ್ತಕಂ ಗೃಹೇ ।**
**ತದ್ಗೃಹಂ ತು ಕುರುಕ್ಷೇತ್ರಂ ತಸ್ಯ ಮುಕ್ತಿಃ ಕರೇ ಸ್ಥಿತಾ ॥ ೫೯ ॥**

ಭಕ್ತಿಯಿಂದ ಈ ಗ್ರಂಥವನ್ನು ಬರೆದು ಮನೆಯಲ್ಲಿಟ್ಟುಕೊಂಡರೆ, ಆ ಮನೆಯು ಕುರುಕ್ಷೇತ್ರದಂತೆ ಪವಿತ್ರವಾಗುತ್ತದೆ, ಮೋಕ್ಷವು ಕೈಯಲ್ಲಿಯೇ ಇರುತ್ತದೆ.

**ಲಿಖಿತ್ವಾ ಪುಸ್ತಕಂ ಯಸ್ತು ಭಕ್ತ್ಯಾ ದದ್ಯಾತ್ ದ್ವಿಜನ್ಮನೇ ।**
**ವಾಚಸ್ಪತಿಸಮೋ ಭೂಯೋ ಜಾಯತೇ ಬ್ರಹ್ಮಯೋನಿಷು ॥ ೬೦ ॥**

ಈ ಗ್ರಂಥವನ್ನು ಭಕ್ತಿಯಿಂದ ಬರೆದು ಬ್ರಾಹ್ಮಣನಿಗೆ ದಾನಕೊಟ್ಟರೆ, ಮುಂದೆ ಬ್ರಾಹ್ಮಣವಂಶದಲ್ಲಿ ಉತ್ಪನ್ನನಾಗಿ ದೊಡ್ಡ ಪಂಡಿತನಾಗುವನು.

**ಶ್ರುತ್ವಾ ಶಾಸ್ತ್ರಂ ಸಕೃದ್ವಾಪಿ ಪುನರ್ಮಾತುಃ ಪಯೋರಸಮ್ ।**
**ಬಹುಕರ್ಮಕರೋ ವಾಪಿ ನ ಪಿಬತ್ಯೇವ ನಿಶ್ಚಯಮ್ ॥ ೬೧ ॥**

ಈ ಶಾಸ್ತ್ರವನ್ನು ಒಂದೇ ಸಲ ಶ್ರವಣಮಾಡಿದರೂ ಸಹ, ಅವನು ಎಂತಹ ಪಾಪವನ್ನು ಮಾಡಿದ್ದರೂ ಪುನಃ ತಾಯಿಯ ಸ್ತನ್ಯಪಾನವನ್ನು ಮಾಡುವುದಿಲ್ಲ. (ಪುನರ್ಜನ್ಮವಿಲ್ಲದ ಮುಕ್ತಿ ಪಡೆಯುತ್ತಾನೆ).

**ಪುತ್ರಾರ್ಥೀ ವಿಂದತೇ ಪುತ್ರಾನ್**
**ಧನಾರ್ಥೀ ಧನಮಾಪ್ನುಯಾತ್ ।**
**ರೋಗಾರ್ತೋ ಮುಚ್ಯತೇ ರೋಗಾತ್**
**ಜಯಾರ್ಥೀ ಜಯಮಾಪ್ನುಯಾತ್ ॥ ೬೨ ॥**

ಮಕ್ಕಳನ್ನು ಇಚ್ಛಿಸುವವನು ಮಕ್ಕಳನ್ನು ಪಡೆಯುತ್ತಾನೆ, ಐಶ್ವರ್ಯ ಬೇಕೆಂಬುವನು ಐಶ್ವರ್ಯವನ್ನು ಪಡೆಯುತ್ತಾನೆ, ರೋಗದಿಂದ ನರಳುತ್ತಿರುವವನು ರೋಗದಿಂದ ಮುಕ್ತನಾಗುತ್ತಾನೆ, ಜಯವನ್ನು ಅಪೇಕ್ಷಿಸುವವನು ಜಯವನ್ನು ಹೊಂದುತ್ತಾನೆ.

**ಧರ್ಮಾರ್ಥೀ ಪ್ರಾಪ್ನುಯಾತ್ ಧರ್ಮಂ**
**ಭೋಗಾರ್ಥೀ ಭೋಗಮಾಪ್ನುಯಾತ್ ।**
**ಕಿಮತ್ರ ಬಹುನೋಕ್ತೇನ**
**ಮೋಕ್ಷಾರ್ಥೀ ಮೋಕ್ಷಮಾಪ್ನುಯಾತ್ ॥ ೬೩ ॥**

ಧರ್ಮವನ್ನು ಅಪೇಕ್ಷಿಸುವವನಿಗೆ ಧರ್ಮವೂ, ಭೋಗವನ್ನು ಇಚ್ಛಿಸುವವನಿಗೆ ಸುಖವೂ ದೊರೆಯುತ್ತದೆ. ಹೆಚ್ಚು ಹೇಳುವುದೇನು, ಮೋಕ್ಷವನ್ನು ಬಯಸು ವವನು ಮೋಕ್ಷವನ್ನು ಪಡೆಯುತ್ತಾನೆ.

**ಇತಿ ಶ್ರುತ್ವಾ ಶೌನಕಾದ್ಯಾ ಮಾಘಮಾಹಾತ್ಮ್ಯಮುತ್ತಮಮ್ ।**
**ಸಂತೋಷಮತುಲಂ ಪ್ರಾಪುಃ ವಿಸ್ಮಯೋತ್ಫುಲ್ಲಲೋಚನಾಃ ।**
**ಸೂತಂ ಪೌರಾಣಿಕಂ ತೇ ತು ಪೂಜಯಾಮಾಸುರಂಜಸಾ ॥ ೬೪ ॥**

ಉತ್ತಮವಾದ ಮಾಘಮಾಹಾತ್ಮ್ಯೆಯನ್ನು ಸೂತರಿಂದ ಶ್ರವಣಮಾಡಿದ ಶೌನಕಾದಿ ಸಜ್ಜನರು ಸಂತೋಷವನ್ನೂ, ಆಶ್ಚರ್ಯವನ್ನೂ ಹೊಂದಿ ಅರಳಿದ ಕಣ್ಣುಗಳಿಂದ ಪುರಾಣಿಕರಾದ ಸೂತರನ್ನು ಸೂಕ್ತರೀತಿಯಿಂದ ಪೂಜಿಸಿದರು.

॥ ಇತಿ ಶ್ರೀ ವಾಯುಪುರಾಣೇ ಮಾಘಮಾಹಾತ್ಮ್ಯೇ
ಬ್ರಹ್ಮನಾರದಸಂವಾದೇ ತ್ರಿಂಶೋಽಧ್ಯಾಯಃ ॥

ಹೀಗೆ ವಾಯುಪುರಾಣಾಂತರ್ಗತವಾದ, ಬ್ರಹ್ಮ-ನಾರದ ಸಂವಾದ ರೂಪವಾದ ಮಾಘಮಾಸ ಮಾಹಾತ್ಮ್ಯೆಯೆಂಬ ಗ್ರಂಥದಲ್ಲಿ ಮೂವತ್ತನೆಯ ಅಧ್ಯಾಯವು ಮುಗಿಯಿತು.

ಗ್ರಂಥವು ಪರಿಸಮಾಪ್ತಿಯಾಯಿತು.

॥ **ಶ್ರೀಮಧ್ವೇಶಾರ್ಪಣಮಸ್ತು** ॥

॥ **ಆಚಾರ್ಯಾಃ ಶ್ರೀಮದಾಚಾರ್ಯಾಃ ಸಂತು ಮೇ ಜನ್ಮಜನ್ಮನಿ** ॥